ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೩೬

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಭವಿಷ್ಯಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಭಾಗ—೭

## ಪ್ರತಿಸರ್ಗಪರ್ವ—ಪ್ರಥಮ-ದ್ವಿತೀಯ ಖಂಡಗಳು



ಅನುವಾದಕ

ಪಂಡಿತ ಬಿ. ಚನ್ನಕೇಶವಯ್ಯ

ಆಸ್ಥಾನ ವಿದ್ವಾನ್.

ಮೈಸೂರು

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್

೧೯೪೮

|| ಶ್ರೀ ಗಣೇಶ ಶಾರದಾಗುರುಭ್ಯೋನಮಃ ||

# ಮುನ್ನುಡಿ.

---

ವೇದ ಶಾಸ್ತ್ರ ಪುರಾಣ ಕಾವ್ಯಾದಿಗಳು ಮಾನವನಲ್ಲಿ ಸ್ವೇಚ್ಛೆಯಾಗಿ ಓಡುವ ಮನಸ್ಸನ್ನು ಹಿಡಿದು ಎಳೆಯುವ ಸೂಜಿಗಲ್ಲುಗಳು. ಮನಸ್ಸು ಸ್ವಭಾವವಾಗಿ ಚಂಚಲವಾದುದು. ಅದನ್ನು ಸ್ಥಿರೀಕರಿಸುವುದು, ಅಥವಾ ಅದು ಹೋದದಾರಿಗೆ ಬಿಡುವುದು, ಇವೆರಡೇ ವ್ಯಕ್ತಿಯಕಾರ್ಯ; ಇದರಲ್ಲಿ ಮೊದಲನೆಯ ಕಾರ್ಯವು ಶ್ರಮಸಾಧ್ಯವಾದುದು. ಎರಡನೆಯದು ಬಹುಸುಲಭ. ವೇದಶಾಸ್ತ್ರಾದಿಗಳಲ್ಲಿ ಉಕ್ತವಾಗಿರುವ ಸಾಧನೆಗಳೆಲ್ಲವೂ ಮನಸ್ಸನ್ನು ತಮ್ಮ ವಶದಲ್ಲಿಟ್ಟುಕೊಳ್ಳುವ ಕಾರ್ಯವನ್ನು ಜಯಿಸಿಕೊಡುವುವು. ಹಾಗೆ ಇಂದ್ರಿಯ ನಿಗ್ರಹಮಾಡಿದವನ ವಶದಲ್ಲಿ, ಮನಸ್ಸೆಂಬುದು ರಾಜನ ಹಿಂದೆ ಸೇವಕನು ಹೋದಂತೆ, ಹೆದರಿ ಬೆದರಿ ವಿಧೇಯತೆಯಿಂದ ಮುಂದುವರಿಯುವುದು. ತಾನೇ ತಾನಾಗಿ ಚಲಿಸುವ ಇಂದ್ರಿಯಗಳಿಗೆ ಅಧೀನನಾದವನಲ್ಲಿ ಮನಸ್ಸೆಂಬುದು ಮಾನವನನ್ನು ಮೆಟ್ಟಿ ಮುಂದುವರಿಯುವುದು, ಇಂತಹ ಮನೋನಿಗ್ರಹಶಕ್ತಿಯಿಂದ, ಧೀರಮಾನವ ಗೋಷ್ಠಿಯು ಮೋಕ್ಷಪ್ರಾಪ್ತಿಗೆ ಯತ್ನಿಸಬೇಕು. ಕೇವಲ ಆಮುಷ್ಮಿಕವೊಂದೇ ಅಲ್ಲ, ಐಹಿಕಸುಖ ಲಭಿಸಬೇಕಾದರೂ ಮುಖ್ಯವಾಗಿ ಮನೋದಾರ್ಢ್ಯವಿರಬೇಕು. "ಮನಏವ ಮನುಷ್ಯಾಣಾಂಕಾರಣಂ ಬಂಧಮೋಕ್ಷಯೋಃ" ಎಂಬ ಉಕ್ತಿಯು ಹೊರಟಿರುವುದೂ ಇದೇ ಆಧಾರದಿಂದಲೇ. ಮನೋನಿಗ್ರಹವು ಕೇವಲ ಅಭ್ಯಾಸದಿಂದಲೇ ಬರತಕ್ಕುದಲ್ಲ. ಸದ್ಗುರುವಿನ ಉಪದೇಶ, ಸತ್ಸಹವಾಸ, ಸತ್ಕಥಾ ಶ್ರವಣ, ಸದಾಚಾರತತ್ಪರತೆಯ ಆಸಕ್ತಿ ಇವುಗಳೂ, ಆ ಮನೋನಿಗ್ರಹಕ್ಕೆ ಸಹಕಾರಿಗಳೇ; ಭವಿಷ್ಯಮಹಾಪುರಾಣದ ಈ ಭಾಗದಲ್ಲಿ ಅಲ್ಲಲ್ಲಿ ಬರುವ ಇತಿಹಾಸಗಳು ಮನಸ್ಸನ್ನು ಹತೋಟಿಯಲ್ಲಿಡುವ ಕಾರ್ಯಕ್ಕೆ ಮಾರ್ಗತೋರಿಸುತ್ತವೆ. ವಿಕ್ರಮರಾಜನ ಮನಸ್ಸನ್ನು ತಿದ್ದಿ ಸಂಸ್ಕರಿಸಿದಮೇಲೂ ಅವನ ಪ್ರವೃತ್ತಿಯು ಯಾವರೀತಿ ಹೋಗಬಹುದೆಂಬುದನ್ನು ಇತಿಹಾಸ ವಿಮರ್ಶೆಯಿಂದ ತಿಳಿಯಬಯಸುವ ಸಾಹಸವನ್ನು ಶಿವಕಿಂಕರನಾದ ಭೇತಾಳನು ತೋರಿಸಿದ್ದಾನೆ. ಇದು ಕೇವಲ ಆ ರಾಜನ ಅಂತರಂಗ ಪರೀಕ್ಷೆಯಲ್ಲ. ವಾಚಕರ ಮನಸ್ಸನ್ನು ಸತ್ಪರಿಣಾಮಗೊಳಿಸುವ ವಿಧಾನವೆನ್ನಬಹುದು. ಇದೇ ರೀತಿ ಅನೇಕ ಭವಿಷ್ಯವಾಣಿಗಳ ನೆಪದಿಂದಲೂ, ಇತಿಹಾಸಸಮುಚ್ಚಯದಿಂದಲೂ, ಇಲ್ಲಿ ಹೇಳುವ ಸಂಗತಿಗಳು ಮಾನವರ ಚಂಚಲಮನಸ್ಸಿನ ಪರಿಪಾಕವನ್ನು ಊಹಿಸಿ ಹೇಳಿರುವಂತೆ ತೋರುತ್ತದೆ.

ಈ ಪುರಾಣದ ಪರ್ವಗಳಲ್ಲಿ ಮೂರನೆಯದಾದ ಪ್ರತಿಸರ್ಗಪರ್ವವು ಈ ಸಂಪುಟದಿಂದ ಮೊದಲಾಗುವುದು. ಈ ಭಾಗದಲ್ಲಿ ಪಾಣಿನಿ ಪತಂಜಲಿ ಮುಂತಾದ ಮಹರ್ಷಿಗಳ ವಿಚಾರವು ಅಡಕವಾಗಿದೆ. ಇಲ್ಲಿರುವ ಸಣ್ಣಪುಟ್ಟ ಕಥೆಗಳು ಯುಕ್ತಿಯುಕ್ತವಾಗಿಯೂ ನೀತಿ ಪ್ರದವಾಗಿಯೂ ಇವೆ ಕಥೆಯು ಕಾಲ್ಪನಿಕವೋ, ನೈಸರ್ಗಿಕವೋ, ಅದು ಬೇರೆಯ ವಿಷಯ. ಕಥಾ ವಿಷಯವು ಮಾತ್ರ ಅತ್ಯಂತ ಸ್ವಾರಸ್ಯವಾಗಿದೆ. ಇಷ್ಟೇ ಅಲ್ಲದೆ ಕಾಮ್ಯವ್ರತವೆಂದು ಪ್ರಸಿದ್ಧಿಪಡೆದು ಈಗ ಅತ್ಯಂತ ಮೇಲ್ಮಟ್ಟದ ಪ್ರಚಾರದಿಂದಿರುವ ಶ್ರೀ ಸತ್ಯನಾರಾಯಣ ವ್ರತವಿಧಾನವು ಈ ಭಾಗದಲ್ಲಿ ವಿಸ್ತಾರವಾಗಿ ಬಂದಿದೆ. ಸ್ತ್ರೀಯರ ಚಾಕಚಕ್ಯ. ಪುರುಷರ ಮುಗ್ಧತೆ, ಪಿಸುಣರ ದುರ್ನಡತೆ, ಇವೆಲ್ಲವೂ ಇಲ್ಲಿ ಮೂರ್ತಿಮತ್ತಾಗಿ ಕಾಣುವ ಸನ್ನಿವೇಶಗಳು. ಇವನ್ನು ಓದುವುದು ಓದಿಸುವುದು, ಕೇಳುವುದು, ಶ್ರವಣಮಾಡಿಸುವುದು, ಇವೆಲ್ಲವೂ ಮಾನವವೃಂದದ ತಿದ್ದುಪಡಿಯ ಕಾರ್ಯಗಳೇ ಆಗಿವೆ. ಭವಿಷ್ಯಮಹಾಪುರಾಣವು ಇಸ್ಲಾಂ ಧರ್ಮದ ಸ್ವರೂಪ ಮತ್ತು ಆಂಗ್ಲಭಾಷೆಯ ಬೈಬಲ್ಲಿನಲ್ಲಿ ಕಾಣುವ ಕಥಾಂಶ ಇವನ್ನೊಳಗೊಂಡಿರುವುದರಿಂದ ಆಧುನಿಕವಿರಬಹುದೆಂದು ಕೆಲವರು ಅಭಿಪ್ರಾಯಪಟ್ಟರೂ ಇಲ್ಲಿ ಪ್ರತಿಪಾದಿತವಾಗಿರುವ ವಿಷಯಗಳಂತೂ ಪ್ರಾಚೀನಧರ್ಮ, ಪ್ರಾಚೀನಶೈಲಿ, ಪ್ರಾಚೀನೇತಿಹಾಸಗಳನ್ನೇ ಒಳಗೊಂಡಿವೆ.

ಇಂತಹ ಪ್ರಾಚೀನ ಗ್ರಂಥಸ್ಥವಾದ ವಿಷಯಗಳನ್ನು ಈ ಕಾಲದ ಜನರ ಮನಸ್ಸಿಗೆ ತಂದು ನಶಿಸಿಹೋಗುತ್ತಿರುವ ಆರ್ಯಧರ್ಮವನ್ನು ಈ ಮೂಲಕ ಜೀರ್ಣೋದ್ಧಾರಗೊಳಿಸಲು ಯತ್ನಿಸಿರುವ ನಮ್ಮನ್ನಾಳುವ **ಮಹಾರಾಜರಾದ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾಪ್ರಭುಗಳಿಗೂ ಅವರ ಕುಟುಂಬ ವರ್ಗಕ್ಕೂ ಸರ್ವೇಶ್ವರನೂ ಚಾಮುಂಡೇಶ್ವರಿಯೂ ಸಕಲ ರೀತಿಯಲ್ಲಿಯೂ ಶ್ರೇಯಸ್ಸನ್ನೂ ಆಯುರಾರೋಗ್ಯಾದಿಗಳನ್ನೂ ಕರುಣಿಸಿ ಸಲಹುತ್ತಿರಲಿ ಎಂಬುದೇ ನನ್ನ ಶ್ರೇಯಃಪ್ರಾರ್ಥನೆಯಾಗಿದೆ.

ಸರ್ವಧಾರಿ ಸಂವತ್ಸರದ
ಆಷಾಢ ಕೃಷ್ಣ ಷಷ್ಠೀ ಕುಜವಾರ,
೨೭—೭—೧೯೪೮.

ಇಂತು ಸಜ್ಜನ ವಿಧೇಯ,
**ಬಿ. ಚನ್ನಕೇಶವಯ್ಯ,**
ಆಸ್ಥಾನ ವಿದ್ವಾನ್.



# ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ

# ವಿಷಯಾನುಕ್ರಮಣಿಕೆ

## ಪ್ರಥಮ ಖಂಡ.

ಪುಟ ಸಂಖ್ಯೆ

ನಾಲ್ಕನೆಯ ಅಧ್ಯಾಯ-

## ಮ್ಲೇಚ್ಛಯಜ್ಞ ವೃತ್ತಾಂತ ವರ್ಣನೆ



ಐದನೆಯ ಅಧ್ಯಾಯ—

## ನ್ಯೂಹವಂಶ ವರ್ಣನೆ, ಮ್ಲೇಚ್ಛಭಾಷೆಯ ಉತ್ಪತ್ತಿವಿಧಾನ

ಪುಟ ಸಂಖ್ಯೆ

## ದ್ವಿತೀಯಖಂಡ ಸಮಾಪ್ತಿ.



॥ ಶ್ರೀಃ ॥

॥ ಶ್ರೀ ಗಣೇಶ ಶಾರದಾ ಗುರುಭ್ಯೋ ನಮಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಪ್ರಥಮಖಂಡೇ

# ಪ್ರಥಮೋಽಧ್ಯಾಯಃ

---

॥ ಶೌನಕ ಉವಾಚ ॥

ಭವಿಷ್ಯಾಖ್ಯೇ ಮಹಾಕಲ್ಪೇ ಬ್ರಹ್ಮಾಯುಷಿ ಪರಾರ್ಧಕೇ ।
ಪ್ರಥಮೇಽಬ್ದೇಽಹ್ನಿ ತೃತೀಯೇ ಪ್ರಾಪ್ತೇ ವೈವಸ್ವತೇಽಂತರೇ ॥ ೧ ॥

ಅಷ್ಟಾವಿಂಶೇ ಸತ್ಯಯುಗೇ ಕೇ ರಾಜಾನೋಽಭವನ್ಮುನೇ ।
ತೇಷಾಂ ರಾಜ್ಯಸ್ಯ ವರ್ಷಾಣಿ ತನ್ಮೇ ವದ ವಿಚಕ್ಷಣ ॥ ೨ ॥

---

ಶ್ರೀ ಗಣೇಶಾಯ ನಮಃ   ಶ್ರೀ ಚಾಮುಂಡಾಬಾಯೈ ನಮಃ

## ಪ್ರತಿಸರ್ಗಪರ್ವದ ಪ್ರಥಮ ಖಂಡದಲ್ಲಿ ಒಂದನೆಯ ಅಧ್ಯಾಯ

೧-೨ ಶೌನಕಋಷಿ ಕೇಳುತ್ತಾನೆ—ಅಯ್ಯಾ ವಿದ್ವಾಂಸನಾದ ಮುನಿಯೇ ! ಬ್ರಹ್ಮನ ಆಯುಸ್ಸಿನಲ್ಲಿ ಉತ್ತರಾರ್ಧದ ಭವಿಷ್ಯ ಮಹಾಕಲ್ಪದಲ್ಲಿ ಮೊದಲನೆಯ ವರ್ಷದ ಮೂರನೆಯ ದಿನವೂ, ವೈವಸ್ವತಮನ್ವಂತರವೂ ಆದ ಇಪ್ಪತ್ತೆಂಟನೆಯ ಕೃತ (ಸತ್ಯ) ಯುಗದಲ್ಲಿದ್ದ ರಾಜರನ್ನೂ ಅವರು ಎಷ್ಟೆಷ್ಟುಕಾಲ ರಾಜ್ಯವನ್ನಾಳಿದ ರೆಂಬುದನ್ನೂ ನನಗೆ ಹೇಳು.

॥ ಸೂತ ಉವಾಚ ॥

ಕಲ್ಪಾಖ್ಯೇ ಶ್ವೇತವಾರಾಹೇ ಬ್ರಹ್ಮಾಬ್ದಸ್ಯ ದಿನತ್ರಯೇ ।
ಪ್ರಾಪ್ತೇ ಸಪ್ತಮುಹೂರ್ತೇ ಚ ಮನುರ್ವೈವಸ್ವತೋಽಭವತ್ ॥ ೩ ॥

ಸ ತಪ್ತ್ವಾ ಸರಯೂತೀರೇ ತಪೋ ದಿವ್ಯಂ ಶತಂ ಸಮಾಃ ।
ತಚ್ಛಿಕ್ಕಾತೋಽಭವತ್ಪುತ್ರ ಇಕ್ಷ್ವಾಕುಃ ಸ ಮಹೀಪತಿಃ ॥ ೪ ॥

ಬ್ರಹ್ಮಣೋ ವರದಾನೇನ ದಿವ್ಯಂ ಯಾನಂ ಸ್ವಮಾಪ್ತವಾನ್ ।
ನಾರಾಯಣಂ ಪೂಜಯಿತ್ವಾ ಹರೌ ರಾಜ್ಯಂ ನಿವೇದ್ಯ ಚ ॥ ೫ ॥

ಷಟ್ತ್ರಿಂಶಚ್ಚ ಸಹಸ್ರಾಣಾಮಬ್ದಂ ರಾಜ್ಯಂ ತದಾಽಕರೋತ್ ।
ತಸ್ಮಾಜ್ಜಾತೋ ವಿಕುಕ್ಷಿಶ್ಚ ಶತಹೀನಂ ತದಬ್ದಕಂ ॥ ೬ ॥

ರಾಜ್ಯಂ ಕೃತ್ವಾ ದಿವಂ ಯಾತಸ್ತಸ್ಮಾಜ್ಜಾತೋ ರಿಪುಂಜಯಃ ।
ಶತಹೀನಂ ಕೃತಂ ರಾಜ್ಯಂ ತತ್ಕಕುತ್ಸ್ಥಸುತಃ ಸ್ಮೃತಃ ॥ ೭ ॥

---

೩-೬: ಸೂತಮುನಿವರ್ಯನು ಹೇಳುತ್ತಾನೆ—ಶ್ವೇತವರಾಹಕಲ್ಪದಲ್ಲಿ ಬ್ರಹ್ಮಮಾನದವರ್ಷದ ಮೂರನೆಯ ದಿನದ ಏಳನೆಯ ಮುಹೂರ್ತವು ಒದಗಲು ವೈವಸ್ವತ (ಸೂರ್ಯವಂಶದ) ಮನುವು ಜನಿಸಿದನು. ಆತನು ಸರಯೂ ನದಿಯ ತೀರದಲ್ಲಿ ದೇವಮಾನದ ಒಂದುನೂರು ವರ್ಷಕಾಲ ತಪಸ್ಸನ್ನು ಮಾಡಿದನು. ಅದರಿಂದ ಆತನಿಗೆ ಇಕ್ಷ್ವಾಕುವೆಂಬ ಪುತ್ರನು ಜನಿಸಿದನು. ಈ ಇಕ್ಷ್ವಾಕುರಾಜನು ಬ್ರಹ್ಮನ ವರದಿಂದ ದಿವ್ಯವಿಮಾನವನ್ನು ಪಡೆದನು, ಮತ್ತು ನಾರಾಯಣನನ್ನು ಪೂಜಿಸಿ ಆ ಹರಿಗೇ ರಾಜ್ಯವನ್ನು ಅರ್ಪಿಸಿ, ಮೂವತ್ತಾರುಸಾವಿರ ವರ್ಷಕಾಲ ರಾಜ್ಯಭಾರವನ್ನು ಮಾಡಿದನು. ಆತನಿಗೆ * ವಿಕುಕ್ಷಿಯೆಂಬ ಮಗನು ಹುಟ್ಟಿದನು. ವಿಕುಕ್ಷಿರಾಜನು ತಂದೆಯ ಆಳ್ವಿಕೆಗಿಂತ ನೂರುವರ್ಷಗಳು ಕಡಿಮೆಯಾಗಿ (೩೫೯೦೦ ವರ್ಷ) ದೊರೆತನ ಮಾಡಿದನು.

೭. ವಿಕುಕ್ಷಿಯ ಮಗನಿಗೆ ರಿಪುಂಜಯನೆಂದು ಹೆಸರು. ತಂದೆಯು ಸ್ವರ್ಗಸ್ಥನಾದ ಬಳಿಕ ರಿಪುಂಜಯನು ಪಟ್ಟಕ್ಕೆ ಬಂದು ತಂದೆಯ ಆಳ್ವಿಕೆಗಿಂತಲೂ ನೂರು

---

* ಇಕ್ಷ್ವಾಕುರಾಜನ ಮಗನು ಕುಕ್ಷಿಯೆಂಬ ವಾಲ್ಮೀಕಿ ರಾಮಾಯಣ (ಬಾಲಕಾಂಡ ೭೦ ನೇ ಅಧ್ಯಾಯದ ೨೨ ನೆಯ ಶ್ಲೋಕ) ದಲ್ಲಿದೆ.

**ಶತಹೀನಂ ಕೃತಂ ರಾಜ್ಯಂ ತತೋऽನೇನಾಂಸ ಆತ್ಮಜಃ ।**
**ಶತಹೀನಂ ಕೃತಂ ರಾಜ್ಯಂ ತಸ್ಮಾಜ್ಜಾತೋ ನೃಪಃ ಪೃಥುಃ ॥ ೮ ॥**

**ಶತಹೀನಂ ಕೃತಂ ರಾಜ್ಯಂ ವಿಷ್ವಗಶ್ವಶ್ಚ ತತ್ಸುತಃ ।**
**ಶತಹೀನಂ ಕೃತಂ ರಾಜ್ಯಂ ತಸ್ಮಾದಾದ್ರೋ್ರ್ ನೃಪೋऽಭವತ್ ॥ ೯ ॥**

**ಶತಹೀನಂ ಕೃತಂ ರಾಜ್ಯಂ ಭದ್ರಾಶ್ವಸ್ತತ್ಸುತೋऽಭವತ್ ।**
**ಶತಹೀನಂ ಕೃತಂ ರಾಜ್ಯಂ ಯುವನಾಶ್ವಸ್ತು ತತ್ಸುತಃ ॥ ೧೦ ॥**

**ಶತಹೀನಂ ಕೃತಂ ರಾಜ್ಯಂ ಶ್ರವಸ್ಥಸ್ತತ್ಸುತೋऽಭವತ್ ।**
**ಸತ್ಯಪಾದಶ್ಚ ಸಂಜಾತಃ ಪ್ರಥಮೋ ಭಾರತೇऽಂತರೇ ॥ ೧೧ ॥**

---

ವರ್ಷ ಕಡಿಮೆಯಾಗಿ ಎಂದರೆ ೩೫೭೦೦ ವರ್ಷಕಾಲ ರಾಜ್ಯಭಾರವನ್ನು ಮಾಡಿದನು. ರಿಪುಂಜಯನ ಮಗನು ಕಕುತ್ಸ್ಥನೆಂಬವನು.

೮. ಕಕುತ್ಸ್ಥನು ತನ್ನ ತಂದೆಗಿಂತ ನೂರುವರ್ಷ ಕಡಿಮೆಯಾಗಿ (೩೫೭೦೦ ವರ್ಷ) ಆಳಿದನು. ಅಂಸನೆಂಬುವನು ಕಕುತ್ಸ್ಥನ ಮಗ. ಆತನೂ ಸಹ ತನ್ನ ತಂದೆಗಿಂತ ನೂರುವರ್ಷ ಕಡಿಮೆಯಾಗಿ (೩೫೬೦೦ ವರ್ಷ) ದೊರೆತನವನ್ನು ಮಾಡಿದನು. ಆತನಿಗೆ ಪೃಥುವೆಂಬ ಪುತ್ರನುದಿಸಿದನು

೯. ಪೃಥುವೂ ತಂದೆಗಿಂತ ನೂರುವರ್ಷ ಕಡಿಮೆಯಾಗಿ (೩೫೫೦೦ ವರ್ಷ) ಆಳಿದನು. ಆತನ ಮಗನಾದ ವಿಷ್ವಗಶ್ವನೆಂಬುವನು ಪೃಥುವಿಗಿಂತ ನೂರುವರ್ಷ ಕಡಿಮೆಯಾಗಿ (೩೫೪೦೦ ವರ್ಷ) ರಾಜ್ಯಭಾರ ಮಾಡಿದನು. ಆರ್ದ್ರನೆಂಬುವನು ಆತನ ಪುತ್ರ.

೧೦. ಆರ್ದ್ರನು ತನ್ನ ತಂದೆಗಿಂತಲೂ ನೂರುವರ್ಷ ಕಡಿಮೆಯಾಗಿ (೩೫೩೦೦ ವರ್ಷ) ಆಳಿದನು, ಆರ್ದ್ರನ ಮಗನಾದ ಭದ್ರಾಶ್ವನೂ ತನ್ನ ತಂದೆಯ ಆಳಿಕೆಗಿಂತಲೂ ನೂರುವರ್ಷ ಕಡಿಮೆಕಾಲ (೩೫೨೦೦ ವರ್ಷ) ದೊರೆಯಾಗಿದ್ದನು. ಭದ್ರಾಶ್ವನ ಮಗನು ಯುವನಾಶ್ವ.

೧೧-೧೨, ಯುವನಾಶ್ವನು ಭದ್ರಾಶ್ವನಿಗಿಂತಲೂ ನೂರುವರ್ಷ ಕಡಿಮೆಯಾಗಿ ಆಳಿದನು. ಶ್ರವಸ್ಥನೆಂಬವನು ಯುವನಾಶ್ವನ ಮಗ. ಆತನು ಯುವ

ಉದಯಾದಸ್ತಪರ್ಯಂತಂ ತೈರ್ನೃಪೈರ್ಭೂಮಿಮಂಡಲಂ ।
ಭುಕ್ತಂ ನೀತಿಪರೈರ್ದೇವ್ಯೈಃ ಶ್ರವಸ್ಥೇನ ತು ಭೂತಲೇ ।
ಶತಹೀನಂ ಕೃತಂ ರಾಜ್ಯಂ ಬೃಹದಶ್ವಸ್ತತೋಽಭವತ್ ॥ ೧೨ ॥

ಶತಹೀನಂ ಕೃತಂ ರಾಜ್ಯಂ ತಸ್ಮಾತ್ಕುವಲಯಾಶ್ವಕಃ ’
ಶತಹೀನಂ ಕೃತಂ ರಾಜ್ಯಂ ದೃಢಾಶ್ವಸ್ತತ್ಸುತೋಽಭವತ್ ॥ ೧೩ ॥

ಸಹಸ್ರಹೀನಂ ರಾಜ್ಯಂ ತತ್ತಸ್ಮಾತ್ಪುತ್ರೋ ನಿಕುಂಭಕಃ ।
ಸಹಸ್ರಹೀನಂ ರಾಜ್ಯಂ ತತ್ಸಂಕಟಾಶ್ವಸ್ತು ತತ್ಸುತಃ ॥ ೧೪ ॥

ಸಹಸ್ರಹೀನಂ ರಾಜ್ಯಂ ತತ್ತಸ್ಮಾಜ್ಜಾತಃ ಪ್ರಸೇನಜಿತ್ ।
ಸಹಸ್ರಹೀನಂ ರಾಜ್ಯಂ ತದ್ರವಣಾಶ್ವಸ್ತು ತತ್ಸುತಃ ॥ ೧೫ ॥

---

ನಾಶ್ವನಿಗಿಂತ ನೂರುವರ್ಷ ಕಡಿಮೆಯಾಗಿ (೩೫೦೦೦ ವರ್ಷ) ಆಳಿದನು. ಶ್ರವಸ್ಥನ ಕಾಲಕ್ಕೆ ಭಾರತಾಂತರದಲ್ಲಿ ಕೃತಯುಗದ ಮೊದಲನೆಯದಾದ ಸತ್ಯಪಾದವು ನಡೆಯುತ್ತಿದ್ದಿತು. ಮನುವಂಶದ ರಾಜರು ನೀತಿಪರರಾಗಿ ಭೂಮಂಡಲವನ್ನು ಆಳಿದರು. ಬೃಹದಶ್ವನೆಂಬವನು ಶ್ರವಸ್ಥನಮ:ಗ

೧೩. ಬೃಹದಶ್ವನು ಅವನಿಗಿಂತ ನೂರುವರ್ಷ ಕಡಿಮೆ (೩೪೯೦೦) ವರ್ಷ ಆಳಿದನು. ಆತನ ಮಗ ಕುವಲಯಾಶ್ವ. ಕುವಲಯಾಶ್ವನು ನೂರುವರ್ಷ ಕಡಿಮೆಯಾಗಿ (೩೪೮೦೦ ವರ್ಷ) ಆಳಿದನು. ಆತನ ಮಗ ದೃಢಾಶ್ವ.

೧೪. ದೃಢಾಶ್ವನು ಸಾವಿರವರ್ಷ ಕಡಿಮೆ (೩೩೮೦೦) ವರ್ಷ ಆಳಿದನು. ಆತನ ಪುತ್ರ ನಿಕುಂಭ. ನಿಕುಂಭನು ಸಾವಿರವರ್ಷ ಕಡಿಮೆಯಾಗಿ (೩೨೮೦೦ ವರ್ಷ) ಆಳಿದನು. ಆತನ ಮಗ ಸಂಕಟಾಶ್ವ.

೧೫. ಸಂಕಟಾಶ್ವನು ಅದಕ್ಕಿಂತ ಸಾವಿರನರ್ಷ ಕಡಿಮೆ (೩೧೮೦೦ ವರ್ಷ) ಆಳಿದನು. ಅತನ ಮಗ ಪ್ರಸೇನಜಿತ್ತು. ಪ್ರಸೇನಜಿತ್ತು ಅವನಿಗಿಂತ ಸಾವಿರವರ್ಷ ಕಡಿಮೆ (೩೦೮೦೦ ವರ್ಷ) ಆಳಿದನ:: ಆತನ ಮಗ ರವಣಾಶ್ವ.

**ಸಹಸ್ರಹೀನಂ ರಾಜ್ಯಂ ತನ್ಮಾಂಧಾತಾ ತತ್ಸುತೋಽಭವತ್ ।**
**ಶತಹೀನಂ ಕೃತಂ ರಾಜ್ಯಂ ಪುರುಕುತ್ಸಸ್ತು ತತ್ಸುತಃ ॥ ೧೬ ॥**

**ಶತಹೀನಂ ಕೃತಂ ರಾಜ್ಯಂ ತ್ರಿಂಶದಶ್ವಸ್ತು ತತ್ಸುತಃ ।**
**ರಥೇ ಯಸ್ಯ ಸ್ಮೃತಾ ವಾಹಾ ವಾಜಿನಸ್ತ್ರಿಂಶತಾ ವರಾಃ ॥ ೧೭ ॥**

**ಅನರಣ್ಯಸ್ತತೋ ಜಾತೋ ಹ್ಯಷ್ಟಾವಿಂಶತ್ಸಹಸ್ರಕಂ ।**
**ರಾಜ್ಯಂ ದ್ವಿತೀಯಚರಣೇ ಸ್ಮೃತಂ ಸತ್ಯಯುಗಸ್ಯ ವೈ ॥ ೧೮ ॥**

**ಪೃಷದಶ್ವಸ್ತತೋ ಜಾತೋ ರಾಜ್ಯಂ ಷಷ್ಟಸಹಸ್ರಕಂ ।**
**ತದಬ್ದಂ ಭೂತಲೇ ಕೃತ್ವಾ ಪಿತೃಲೋಕಮುಪಾಯಯೌ ॥ ೧೯ ॥**

**ಹರ್ಯಶ್ವಸ್ತು ತತೋ ಜಾತೋ ವಿಷ್ಣುಭಕ್ತಕುಲೇ ನೃಪಃ ।**
**ಸಹಸ್ರಹೀನಂ ರಾಜ್ಯಂ ತತ್ತತ್ಸುತೋ ವಸುಮಾನ್ ಸ್ಮೃತಃ ॥ ೨೦ ॥**

---

೧೬. ರವಣಾಶ್ವನು ಅವನಿಗಿಂತ ಸಾವಿರ ವರ್ಷ ಕಡಿಮೆ (೨೯೫೦೦ ವರ್ಷ) ಆಳಿದನು. ಅತನ ಮಗ ಮಾಂಧಾತ. ಮಾಂಧಾತನು ನೂರು ವರ್ಷ ಕಡಿಮೆ (೨೯೭೦೦ ವರ್ಷ) ಆಳಿದನು. ಆತನ ಪುತ್ರ ಪುರುಕುತ್ಸ.

೧೭-೧೮. ಪುರುಕುತ್ಸನು ನೂರು ವರ್ಷ ಕಡಿಮೆ (೨೯೬೦೦ ವರ್ಷ) ಆಳಿದನು. ಅವನ ಮಗ ತ್ರಿಂಶದಶ್ವ. ಆತನ ರಥಕ್ಕೆ ಮೂವತ್ತು ಒಳ್ಳೆಯ ಕುದುರೆಗಳನ್ನು ಕಟ್ಟುತ್ತಿದ್ದರು. ಅನರಣ್ಯನೆಂಬುವನು ತ್ರಿಂಶದಶ್ವನ ಪುತ್ರ. ಅನರಣ್ಯನು (೨೮೦೦೦) ಇಪ್ಪತ್ತೆಂಟುಸಾವಿರ ವರ್ಷಕಾಲ ರಾಜ್ಯಭಾರವನ್ನು ವಹಿಸಿದ್ದನು. ಆತನ ರಾಜ್ಯಭಾರವು ಕೃತ (ಸತ್ಯ) ಯುಗದ ಎರಡನೆಯ ಪಾದದಲ್ಲಿ ನಡೆಯಿತು.

೧೯. ಪೃಷದಶ್ವನೆಂಬಾತನು ಅನರಣ್ಯನ ಪುತ್ರ. ಆತನು ಅರುಸಾವಿರ ವರ್ಷ ಭೂಲೋಕದಲ್ಲಿ ರಾಜ್ಯಭಾರವನ್ನು ಮಾಡಿ ಪಿತೃಲೋಕವನ್ನು ಸೇರಿದನು

೨೦ ಆ ವಿಷ್ಣುಭಕ್ತರ ಕುಲದಲ್ಲಿ ಪೃಷದಶ್ವನಿಗೆ ಹರ್ಯಶ್ವನೆಂಬ ಮಗ ಜನಿಸಿದನು. ಹರ್ಯಶ್ವನು ತಂದೆಗಿಂತಲೂ ಸಾವಿರ ವರ್ಷ ಕಡಿಮೆಯಾಗಿ (೫೦೦೦ ವರ್ಷ) ದೊರೆತನವನ್ನು ಮಾಡಿದನು. ಆತನ ಮಗನು ವಸುಮಂತ.

**ಸಹಸ್ರಹೀನಂ ರಾಜ್ಯಂ ತತ್ತ್ರಿಧನ್ವಾ ತನಯಸ್ತತಃ ।**
**ಸಹಸ್ರಹೀನಂ ರಾಜ್ಯಂ ತತ್ತೇನ ರಾಜ್ಞಾ ಚ ಸತ್ಕೃತಂ ॥ ೨೧ ॥**

**ಸತ್ಯಪಾದಃ ಸಮಾಪ್ತೋಽಯಂ ದ್ವಿತೀಯೋ ಭಾರತೇಽಂತರೇ ।**
**ತ್ರಿಧನ್ವನಶ್ಚ ನೃಪತೇಸ್ತ್ರಪಾರಣ್ಯಸ್ತು ವೈ ಸುತಃ ॥ ೨೨ ॥**

**ಸಹಸ್ರಹೀನಂ ರಾಜ್ಯಂ ತತ್ಕೃತ್ವಾ ಸ್ವರ್ಗಮುಪಾಯಯೌ ।**
**ತಸ್ಮಾಜ್ಜಾತಸ್ತ್ರಿಶಂಕುಶ್ಚ ರಾಜ್ಯಂ ವರ್ಷಸಹಸ್ರಕಂ ॥ ೨೩ ॥**

**ಛದ್ಮನಾ ಹೀನತಾಂ ಜಾತೋ ಹರಿಶ್ಚಂದ್ರಸ್ತು ತತ್ಸುತಃ ।**
**ರಾಜ್ಯಂ ವಿಂಶತ್ಸಹಸ್ರಂ ಚ ರೋಹಿತೋ ನಾಮ ತತ್ಸುತಃ ॥ ೨೪ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಹಾರೀತಸ್ತನಯೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಚಂಚುಭೂಪಶ್ಚ ತತ್ಸುತಃ ॥ ೨೫ ॥**

---

೨೧ ವಸುಮಂತನು ತಂದೆಗಿಂತಲೂ ಸಾವಿರ ವರ್ಷಗಳು ಕಡಿಮೆಯಾಗಿ ಎಂದರೆ ನಾಲ್ಕುಸಾವಿರ ವರ್ಷ ರಾಜ್ಯವಾಳಿದನು. ತ್ರಿಧನ್ವನೆಂಬುವನು ಆತನ ಪುತ್ರ. ತ್ರಿಧನ್ವನು ತಂದೆಗಿಂತಲೂ ಸಾವಿರ ವರ್ಷ ಕಡಿಮೆಯಾಗಿ ಮೂರು ಸಾವಿರ ವರ್ಷ ಚೆನ್ನಾಗಿ ದೊರೆತನವನ್ನು ಮಾಡಿದನು.

೨೨-೨೩. ತ್ರಿಧನ್ವನ ಆಳಿಕೆಯಲ್ಲಿ ಭಾರತಾಂತರದಲ್ಲಿ ಕೃತಯುಗದ ಎರಡನೆಯ ಪಾದವು ಕೊನೆಗಂಡಿತು ತ್ರಪಾರಣ್ಯನೆಂಬಾತನು ತ್ರಿಧನ್ವರಾಜನ ಪುತ್ರನು. ತ್ರಪಾರಣ್ಯನು ಎರಡುಸಾವಿರ ವರ್ಷ ರಾಜ್ಯಭಾರವನ್ನು ವಹಿಸಿ, ಬಳಿಕ ಸ್ವರ್ಗಸ್ಥನಾದನು. ಆತನ ಮಗನಾದ ತ್ರಿಶಂಕು ಮಹಾರಾಜನು ಒಂದುಸಾವಿರ ವರ್ಷ ರಾಜ್ಯವಾಳಿದನು.

೨೪. ತ್ರಿಶಂಕು ಮಹಾರಾಜನ ಮಗನಾದ ಹರಿಶ್ಚಂದ್ರನು ಇಪ್ಪತ್ತುಸಾವಿರ ವರ್ಷ ರಾಜ್ಯವಾಳಿದನು. ರೋಹಿತಾಶ್ವನೆಂಬುವನು, ಆತನ ಮಗ.

೨೫. ರೋಹಿತಾಶ್ವನು ತಂದೆಯಂತೆ ಇಪ್ಪತ್ತುಸಾವಿರ ವರ್ಷ ಆಳಿದನು, ಆತನ ಮಗ ಹಾರೀತ. ಹಾರೀತನೂ ತಂದೆಯಂತೆ ಇಪ್ಪತ್ತು ಸಾವಿರ ವರ್ಷ ಆಳಿದನು. ಚಂಚುವೆಂಬವನು ಆತನ ಮಗ

**ಪಿತುಸ್ತುಲ್ಯಂ ಹಿ ರಾಜ್ಯಂ ತದ್ವಿಜಯೋ ನಾಮ ತತ್ಸುತಃ ।**
**ಪಿತುಸ್ತುಲ್ಯಂ ಹಿ ರಾಜ್ಯಂ ತದ್ರುರೂಕಸ್ತನಯಸ್ತತಃ ॥ ೨೬ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಸಗರಸ್ತನಯೋಽಭವತ್ ।**
**ಭೂಪಾಶ್ಚ ಬಾಹುಸೇನಾಂತಾ ವೈಷ್ಣವಾಃ ಪರಿಕೀರ್ತಿತಾಃ ॥ ೨೭ ॥**

**ರಾಜ್ಯಮಾನಂ ಕೃತಂ ಸಮ್ಯಗ್ಭೂಪೈರ್ವೈವಸ್ವತಾದಿಭಿಃ ।**
**ಮಣಿಸ್ವರ್ಣಸಮೃದ್ಧಿಶ್ಚ ಬಹ್ವನ್ನಂ ಬಹುದುಗ್ಧಕಂ ॥ ೨೮ ॥**

**ಪೂರ್ಣೋ ಧರ್ಮಸ್ತದಾ ಭೂಮ್ಯಾಂ ಮುನೇ ಸತ್ಯಯುಗಸ್ಯ ವೈ ।**
**ತೃತೀಯಚರಣೇ ಮಧ್ಯೇ ಸಗರೋ ನಾಮ ಭೂಪತಿಃ ॥ ೨೯ ॥**

**ಶಿವಭಕ್ತಃ ಸದಾಚಾರಸ್ತತ್ಪುತ್ರಾಃ ಸಾಗರಾಃ ಸ್ಮೃತಾಃ ।**
**ತ್ರಿಂಶತ್ಸಹಸ್ರವರ್ಷಂ ತದ್ರಾಜ್ಯಂ ವೈ ಮುನಿಭಿಃ ಸ್ಮೃತಂ ॥ ೩೦ ॥**

---

೨೬. ಚಂಚುರಾಜನೂ ತಂದೆಯಂತೆ ಇಪ್ಪತ್ತುಸಾವಿರ ವರ್ಷ ಆಳಿದನು, ಆತನ ಮಗ ವಿಜಯ. ವಿಜಯಭೂಪನೂ ತಂದೆಯಂತೆ ಮೂವತ್ತುಸಾವಿರ ವರ್ಷ ಆಳಿದನು. ಆತನ ಮಗ ರುರೂಕ.

೨೭. ರುರೂಕ ಮಹಾರಾಜನೂ ತಂದೆಯಂತೆಯೇ ಇಪ್ಪತ್ತುಸಾವಿರ ವರ್ಷ ಕಾಲ ಆಳಿದನು. ರುರೂಕನಿಗೆ ಸಗರನೆಂಬ ಪುತ್ರನುದಿಸಿದನು. ಬಾಹುಸೇನನೆಂಬ ರಾಜನೂ ಆತನ ಹಿಂದಿನ ಮನುವಂಶಡ ರಾಜರೂ ವೈಷ್ಣವರು.

೨೮-೨೯. ವೈವಸ್ವತ ಮನುವೇ ಮೊದಲಾದ ಸೂರ್ಯವಂಶದ ರಾಜರು ಚೆನ್ನಾಗಿ ರಾಜ್ಯವನ್ನಾಳಿದರು. ಅವರ ಕಾಲದಲ್ಲಿ ಸುವರ್ಣವೂ ರತ್ನಗಳೂ ಸಮೃದ್ಧಿಯಾಗಿದ್ದುವು. ಅನ್ನವೂ ಹಾಲೂ ಸಮೃದ್ಧಿಯಾಗಿದ್ದಿತು, ಶೌನಕನೇ ಎಲೈ ! ಆ ಕಾಲದಲ್ಲಿ ಭೂಮಿಯಲ್ಲಿ ಸತ್ಯಯುಗಧರ್ಮವು ಪೂರ್ಣವಾಗಿದ್ದಿತು ಕೃತಯುಗದ ಮೂರನೆಯ ಪಾದದ ಮಧ್ಯದಲ್ಲಿ ಸಗರನು ಆಳಿದನು

೩೦-೩೧. ಸಗರನು ಶಿವಭಕ್ತನೂ ಸದಾಚಾರಪರನೂ ಆಗಿದ್ದನು. ಆತನು ಮೂವತ್ತುಸಾವಿರ ವರ್ಷಕಾಲ ಆಳಿದನೆಂದು ಋಷಿಗಳು ಹೇಳುವರು. ಸಗರನ ಮಕ್ಕಳಾದ ಸಾಗರರು ಪಾತಾಳ ಲೋಕದಲ್ಲಿ ನಷ್ಟರಾಗಲಾಗಿ, ಅಸಮಂಜಸನೆಂಬ

ಸಪ್ತೇಷು ಸಾಗರೇಷ್ವೇವಮಸಂಮಂಜಸ ಆತ್ಮಜಃ ।
ಶತಹೀನಂ ಕೃತಂ ರಾಜ್ಯಮಂಶುಮಾಂಸ್ತತ್ಸುತೋಽಭವತ್ ॥ ೩೦ ॥

ಶತಹೀನಂ ಕೃತಂ ರಾಜ್ಯಂ ದಿಲೀಪಸ್ತತ್ಸುತೋಽಭವತ್ ।
ಶತಹೀನಂ ಕೃತಂ ರಾಜ್ಯಂ ತಸ್ಮಾಜ್ಜಾತೋ ಭಗೀರಥಃ ॥ ೩೨ ॥

ಶತಹೀನಂ ಕೃತಂ ರಾಜ್ಯಂ ಶ್ರುತಸೇನಸ್ತತೋಽಭವತ್ ।
ಶತಹೀನಂ ಕೃತಂ ರಾಜ್ಯಂ ನಾಭಾಗಸ್ತನಯಸ್ತತಃ ॥ ೩೩ ॥

ಶತಹೀನಂ ಕೃತಂ ರಾಜ್ಯಮಂಬರೀಷಸ್ತತೋಽಭವತ್ ।
ಶೈವಾಃ ಷಟ್ಶ್ರುತಸೇನಾಂತಾ ನಾಭಾಗೋ ವೈಷ್ಣವೋ ನೃಪಃ ॥ ೩೪ ॥

ಸತ್ಯಪಾದಃ ಸಮಾಪ್ತೋಽಯಂ ತೃತೀಯೋ ಭಾರತೇಂತರೇ ।
ಅಂಬರೀಷೇಣ ಭೂಪೇನ ಶತಹೀನಂ ಕೃತಂ ಪದಂ ॥ ೩೫ ॥

---

ಸಗರ ಪುತ್ರನು ಸಗರನಿಗಿಂತಲೂ ಒಂದುನೂರು ವರ್ಷ ಕಡಿಮೆಯಾಗಿ ರಾಜ್ಯವನ್ನಾಳಿದನು. ಅಂಶುಮಂತನು ಅಸಮಂಜನ ಮಗ.

೩೨-೩೩. ಅಂಶುಮಂತನು ಅಸಮಂಜನಿಗಿಂತಲೂ ನೂರುವರ್ಷ ಕಡಿಮೆಯಾಗಿ (೯೮೦೦ ವರ್ಷ) ಆಳಿದನು. ಆತನ ಮಗ ದಿಲೀಪನು ತಂದೆಗಿಂತಲೂ ನೂರುವರ್ಷ ಕಡಿಮೆಯಾಗಿ (೯೭೦೦ ವರ್ಷ) ಆಳಿದನು. ದಿಲೀಪನ ಮಗ ಭಗೀರಥನು ದಿಲೀಪನಿಗಿಂತ ನೂರು ವರ್ಷ ಕಡಿಮೆಯಾಗಿ (೯೬೦೦ ವರ್ಷ) ಆಳಿದನು. ಭಗೀರಥನ ಮಗನಾದ ಶ್ರುತಸೇನನು, ತಂದೆಗಿಂತ ನೂರುವರ್ಷ ಕಡಿಮೆಯಾಗಿ ಆಳಿದನು. ನಾಭಾಗನೆಂಬುವನು ಶ್ರುತಸೇನನ ಪುತ್ರ.

೩೪. ನಾಭಾಗನು ತಂದೆಗಿಂತ ನೂರುವರ್ಷ ಕಡಿಮೆಯಾಗಿ (೯೪೦೦) ವರ್ಷ ಆಳಿದನು. ಅಂಬರೀಷನು ನಾಭಾಗನ ಮಗ. ಸಗರನಿಂದ ಶ್ರುತಸೇನನ ವರೆಗಿನ ಆರುಜನ ದೊರೆಗಳು ಶೈವರು. ನಾಭಾಗನು ವೈಷ್ಣವನು.

೩೫-೩೬ ನಾಭಾಗನ ಆಳಿಕೆಗೆ ಭಾರತಾಂತರದಲ್ಲಿ ಕೃತ (ಸತ್ಯ) ಯುಗದ ಮೂರನೆಯ ಪಾದವು ಕಳೆಯಿತು. ಅಂಬರೀಷ ರಾಜನು ತಂದೆಗಿಂತ ನೂರುವರ್ಷ ಕಡಿಮೆಯಾಗಿ (೯೩೦೦ ವರ್ಷ) ಆಳಿದನು. ಆತನ ರಾಜ್ಯಭಾರವು ಕರ್ಮಭೂಮಿ

**ಚತುರ್ಥೇ ಚರಣೇ ತಸ್ಯ ಚಾಷ್ಟಾದಶಸಹಸ್ರಕಂ ।**
**ಅಬ್ದಂ ರಾಜ್ಯಂ ಶುಭಂ ಜ್ಞಾತಂ ಕರ್ಮಭೂಮ್ಯಾಂ ಚ ಭಾರತೇ ॥ ೩೬ ॥**

**ಏಕೋನತ್ರಿಂಶದ್ವರ್ಷಾಣಿ ರಾಜ್ಯಂ ತತ್ರಿಂಶತಾನಿ ಚ ।**
**ಶತಹೀನಂ ಕೃತಂ ರಾಜ್ಯಂ ಸಿಂಧುದ್ವೀಪೋಽಂಬರೀಷಜಃ ॥ ೩೭ ॥**

**ಶತಹೀನಂ ಕೃತಂ ರಾಜ್ಯಮಯುತಾಶ್ವಸ್ತತೋಽಭವತ್ ।**
**ಶತಹೀನಂ ಕೃತಂ ರಾಜ್ಯಮೃತುಪರ್ಣಸ್ತು ತತ್ಸುತಃ ॥ ೩೮ ॥**

**ಶತಹೀನಂ ಕೃತಂ ರಾಜ್ಯಂ ಸರ್ವಕಾಮೋ ನೃಪಸ್ತತಃ ।**
**ಶತಹೀನಂ ಕೃತಂ ರಾಜ್ಯಂ ನೃಪಃ ಕಲ್ಮಾಷಪಾವನಃ ॥ ೩೯ ॥**

**ಶತಹೀನಂ ಕೃತಂ ರಾಜ್ಯಂ ಸುದಾಸಸ್ತನಯೋಽಭವತ್ ।**
**ತಸ್ಮಾದಶಮುಕಶ್ಚೈವ ಮದಯಂತ್ಯಾ ವಶಿಷ್ಠಜಃ ॥ ೪೦ ॥**

---

ಯಾದ ಭಾರತವರ್ಷದಲ್ಲಿ ಕೃತಯುಗದ ನಾಲ್ಕನೆಯ ಪಾದದಲ್ಲಿ ಹದಿನೆಂಟುಸಾವಿರ ವರ್ಷಕಾಲ ಶುಭಕರವಾಗಿ ನಡೆಯಿತು.

೩೭. ಅಂಬರೀಷ ಪುತ್ರನಾದ ಸಿಂಧುದ್ವೀಪನು ನೂರುವರ್ಷ ಕಡಿಮೆಯಾಗಿ (೨೯೨೦೦ ವರ್ಷಕಾಲ) ಆಳಿದನು.

೩೮-೩೯. ಸಿಂಧುದ್ವೀಪನ ಮಗನಾದ ಅಯುತಾಶ್ವನು ೨೯೧೦೦ ವರ್ಷಕಾಲ ಆಳಿದನು. ಅಯುತಾಶ್ವನ ಮಗನಾದ ಋತುಪರ್ಣನು ೨೯೦೦೦ ವರ್ಷಕಾಲ ರಾಜ್ಯವಾಳಿದನು. ಋತುಪರ್ಣನ ಬಳಿಕ ಅವನ ಮಗ ಸರ್ವಕಾಮನು ೨೮೯೦೦ ವರ್ಷಕಾಲ ದೊರೆತನಮಾಡಿನನು. ಸರ್ವಕಾಮನ ಬಳಿಕ ಅವನ ಪುತ್ರ ಕಲ್ಮಾಷ ಪಾವನನು ೨೮೮೦೦ ವರ್ಷ ರಾಜ್ಯಭಾರ ಮಾಡಿದನು.

೪೦. ಕಲ್ಮಾಷಪಾವನನ ಮಗನಾದ ಸುದಾಸನು ೨೮೭೦೦ ವರ್ಷಕಾಲ ರಾಜ್ಯಭಾರಮಾಡಿದನು. ಅವನ ಬಳಿಕ ಮದಯಂತಿಯೆಂಬುವಳಲ್ಲಿ ವಸಿಷ್ಠರ ಅನುಗ್ರಹದಿಂದ ಜನಿಸಿದ ಅಶಮಕ (ಅಶ್ಮಕ) ನೆಂಬುವನು ಆಳಿದನು.

ಶತಹೀನಂ ಕೃತಂ ರಾಜ್ಯಂ ಹರಿವರ್ಮಾ ತತೋಽಭವತ್ ।
ಸಪ್ತಭೂಪಾಃ ಸುದಾಸಾಂತಾ ವೈಷ್ಣವಾಃ ಪರಿಕೀರ್ತಿತಾಃ ॥ ೪೧ ॥

ಗುರುಶಾಪಾತ್ತು ಸೌದಾಸೋ ರಾಜ್ಯಾಂಗಂ ಗುರವೇಽರ್ಪಯತ್ ।
ಗೋಕರ್ಣಲಿಂಗಭಕ್ತಶ್ಚ ಶೈವಃ ಸಮುಯ ಉಚ್ಯತೇ ॥ ೪೨ ॥

ಹರಿವರ್ಮಾಶಮಕಜೋ ವೈಶ್ಯವತ್ಸಾಧುಪೂಜಕಃ ।
ಊನತ್ರಿಂಶತ್ಸಹಸ್ರಾಣಿ ತಥಾ ಸಪ್ತಶತಾನಿ ವೈ ॥ ೪೩ ॥

ಹರಿವರ್ಮಾಽಕರೋದ್ರಾಜ್ಯಂ ತಸ್ಮಾದ್ದಶರಥೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾದ್ದಿಲ್ಲೀವಯುಸ್ಸುತಃ ॥ ೪೪ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಭೂಪೋ ವಿಶ್ವಾಸಹಸ್ತತಃ ।
ರಾಜ್ಯಂ ದಶಸಹಸ್ರಂ ತನ್ನಿಯಜ್ಞಾಃ ಪ್ರಾಕೃತೋ ನೃಪಃ ॥ ೪೫ ॥

---

೪೧. ಅಶಮುಕನು ಸುದಾಸನಿಗಿಂತಲೂ ನೂರುವರ್ಷ ಕಡಿಮೆಯಾಗಿ ರಾಜ್ಯಭಾರವನ್ನು ಮಾಡಿದನು. ಬಳಿಕ ಹರಿವರ್ಮನು ದೊರೆಯಾದನು. ಸುದಾಸನವರೆಗಿನ ಏಳುಜನ ರಾಜರೂ ವೈಷ್ಣವರೆಂದೆನಿಸಿಕೊಂಡರು.

೪೨. ಸೌದಾಸನು ಗುರುಶಾಪಕ್ಕೀಡಾಗಿ ರಾಜ್ಯಾಂಗವನ್ನು ಗುರುವಿಗೆ ಅರ್ಪಿಸಿ ತಾನು ಶೈವಸಂಪ್ರದಾಯವನ್ನನುಸರಿಸಿ ಗೋಕರ್ಣೇಶ್ವರನ ಭಕ್ತನಾಗಿದ್ದನು.

೪೩-೪೪. ಅಶಮುಕನ ಮಗನಾದ ಹರಿವರ್ಮನು ವೈಶ್ಯನಂತೆ ಸಾಧುಗಳನ್ನು ಪೂಜಿಸುವವನಾಗಿದ್ದನು. ಆತನು ಇಪ್ಪತ್ತೊಂಭತ್ತುಸಾವಿರದ ಏಳುನೂರು ವರ್ಷಕಾಲ ದೊರೆತನವನ್ನು ಮಾಡಿದನು. ಹರಿವರ್ಮನ ಮಗನಾದ ದಶರಥನು ತಂದೆಯಂತೆಯೇ ಅಷ್ಟೇಕಾಲ ದೊರೆತನವನ್ನು ಮಾಡಿದನು, ಇಲೀವಯನೆಂಬುವನು ಆತನ ಮಗ.

೪೫-೪೬. ಇಲೀವಯನೂ ತಂದೆಯಷ್ಟು ಕಾಲವೇ ಆಳುತ್ತಿದ್ದನು! ಆತನ ಬಳಿಕ ವಿಶ್ವಾಸಹಸ್ತನೆಂಬ ದೊರೆಯು ಹತ್ತುಸಾವಿರ ವರ್ಷ ರಾಜ್ಯವನ್ನಾಳಿದನು.

ತದಧರ್ಮಪ್ರತಾಪೇನ ಹ್ಯನಾವೃಷ್ಟಿಸ್ತದಾಽಭವತ್ ।
ಶತವರ್ಷಮನಾವೃಷ್ಟಿಃ ಸರ್ವರಾಜ್ಯಮನಾಶಯತ್ ॥ ೪೬ ॥

ಯಜ್ಞಂ ಕೃತ್ವಾ ವಶಿಷ್ಠಸ್ತು ರಾಜ್ಞೀವಚನತತ್ಪರಃ ।
ಯಜ್ಞಾತ್ಖಟ್ವಾಂಗ ಉತ್ಪನ್ನಃ ಖಟ್ವಾಂಗಂ ಶಸ್ತ್ರಮುದ್ವಹನ್ ॥ ೪೭ ॥

ಇಂದ್ರಸಾಹಾಯ್ಯಮಗಮದ್ರಾಜ್ಯಂ ತ್ರಿಂಶತ್ಸಹಸ್ರಕಂ ।
ಕೃತ್ವಾ ತತ್ರ ವರಂ ಲಬ್ಧ್ವಾ ದೇವೇಭ್ಯೋ ಮುಕ್ತಿತಾಂ ಗತಃ ॥ ೪೮ ॥

ಖಟ್ವಾಂಗಾದ್ದೀರ್ಘಬಾಹುಶ್ಚ ರಾಜ್ಯಂವಿಂಶತ್ಸಹಸ್ರಕಂ ।
ತಸ್ಮಾತ್ಸುದರ್ಶನೋ ಜಾತೋ ದೇವೀಪೂಜನತತ್ಪರಃ ॥ ೪೯ ॥

ವೈಷ್ಣವಾ ದಾಶರಥ್ಯಂತಾಸ್ತ್ರಯೋ ವಿಖ್ಯಾತಸದ್ಬಲಾಃ ।
ಖಟ್ವಾಂಗೋ ದೀರ್ಘಬಾಹುಶ್ಚ ವೈಷ್ಣವೌ ಪರಿಕೀರ್ತಿತೌ ॥ ೫೦ ॥

---

ಆತನ ಬಳಿಕ ನಿಯಜ್ಞನೆಂಬ ನೀಚನು ರಾಜನಾದನು. ಅವನ ಅಧರ್ಮದ ಪ್ರಭಾವದಿಂದ ನೂರುವರ್ಷಗಳ ಕಾಲದ ಅನಾವೃಷ್ಟಿಯು ರಾಜ್ಯವನ್ನೆಲ್ಲಾ ಹಾಳುಮಾಡಿತು.

೪೭-೪೮. ಬಳಿಕ ವಸಿಷ್ಠಮುನಿಯು ರಾಣಿಯಮಾತಿನಂತೆ ಯಜ್ಞವನ್ನು ಮಾಡಿದನು. ಆ ಯಜ್ಞದಿಂದ ಕಯ್ಯಲ್ಲಿ ಖಟ್ವಾಂಗವನ್ನು ಧರಿಸಿದ ಖಟ್ವಾಂಗನೆಂಬುವನುದಿಸಿದನು. ಆತನು ಮೂವತ್ತುಸಾವಿರ ವರ್ಷಕಾಲ ದೊರೆತನಮಾಡಿದನು. ತನ್ನ ಆ ಆಯುಧವನ್ನು ಧರಿಸಿ ಇಂದ್ರನಿಗೆ ಸಹಾಯವನ್ನು ಮಾಡಿ ಅಲ್ಲಿ ದೇವತೆಗಳಿಂದ ವರವನ್ನು ಪಡೆದು, ಮುಕ್ತನಾದನು.

೪೯. ಖಟ್ವಾಂಗನ ಬಳಿಕ ದೀರ್ಘಬಾಹುವೆಂಬುವನು ಇಪ್ಪತ್ತುಸಾವಿರ ವರ್ಷ ರಾಜ್ಯವನ್ನಾಳಿದನು. ಆತನಿಗೆ ದೇವೀಪೂಜೆಯಲ್ಲಿ ನಿರತನಾದ ಸುದರ್ಶನನೆಂಬ ಮಗನು ಜನಿಸಿದನು.

೫೦. ದಶರಥನ ಮಗನಾದ ಇಲೀವಯನವರೆಗಿನ ಮೂವರು ರಾಜರು ವೈಷ್ಣವರು ವಿಷ್ಣುವಿನ ಬಲದಿಂದ ಪ್ರಸಿದ್ಧರಾದವರು ಖಟ್ವಾಂಗ ದೀರ್ಘಬಾಹು ಇವರೂ ವೈಷ್ಣವರೇ ಆಗಿದ್ದರು.

ಸುದರ್ಶನೋ ಮಹಾಪ್ರಾಜ್ಞಃ ಕಾಶೀರಾಜಸುತಾಂ ನೃಪಃ ।
ಉದ್ವಾಹ್ಯ ಭೂಪತೀನ್ಜಿತ್ವಾ ದೇವೀಸೇವಾಪ್ರಸಾದತಃ ॥ ೫೧ ॥

ರಾಜ್ಯಂ ಭರತಖಂಡಾಂತಮದಧದ್ಧರ್ಮತೋ ನೃಪಃ ।
ವರ್ಷಪಂಚಸಹಸ್ರಾಣಿ ರಾಜ್ಯಂ ಚಕ್ರೇ ಸ ಭೂಪತಿಃ ॥ ೫೨ ॥

ಸ್ವಪ್ನಮಧ್ಯೇ ವಚಃ ಪ್ರೋಕ್ತಂ ಮಹಾಕಾಲ್ಯಾ ನೃಪಾಯ ವೈ ।
ವತ್ಸ ತ್ವಂ ಪ್ರಿಯಯಾ ಸಾರ್ಧಂ ವಶಿಷ್ಠಾದಿಭಿರನ್ವಿತಃ ॥ ೫೩ ॥

ಹಿಮಾಲಯಂ ಗಿರಿಂ ಪ್ರಾಪ್ಯ ವಾಸಂ ಕುರು ಮಹಾಮತೇ ।
ಮಹಾವಾಯುಪ್ರಭಾವೇನ ಕ್ಷಯೋ ಭರತಖಂಡಕಃ ॥ ೫೪ ॥

ರತ್ನಾಕರಃ ಪಶ್ಚಿಮೋಽಬ್ಧಿಃ ಸ್ತಸ್ಯ ದ್ವೀಪಾಃ ಕ್ಷಯಂ ಗತಾಃ ।
ಮಹೋದಧಿಃ ಪೂರ್ವತೋಽಬ್ಧಿ ಸ್ತಸ್ಯ ದ್ವೀಪಾಃ ಕ್ಷಯಂ ಗತಾಃ ॥ ೫೫ ॥

---

೫೧-೫೨. ಮಹಾಪ್ರಾಜ್ಞನಾದ ಸುದರ್ಶನರಾಜನು ಕಾಶೀರಾಜಪುತ್ರಿಯನ್ನು ವರಿಸಿ, ದೇವೀಸೇವಾತತ್ಪರನಾಗಿ ಆಕೆಯ ಪ್ರಸಾದದಿಂದ ಇತರ ರಾಜರನ್ನು ಜಯಿಸಿ, ಭರತಖಂಡದ ಕೊನೆಯವರೆಗೂ ರಾಜ್ಯವನ್ನು ವಿಸ್ತರಿಸಿ ಧರ್ಮದಿಂದ ಆಳಿದನು. ಆತನ ರಾಜ್ಯಭಾರವು ಐದುಸಾವಿರವರ್ಷ ಸಾಗಿತು.

೫೩-೫೪. ಮಹಾಕಾಳಿಯು ಆತನಿಗೆ ಕನಸಿನಲ್ಲಿ ಕಾಣಿಸಿಕೊಂಡು ವತ್ಸ, ಮಹಾಮತೀ! ಮಹಾವಾಯುವಿನ ಪ್ರಭಾವದಿಂದ ಭರತಖಂಡವು ನಾಶವಾಗುತ್ತದೆ. ಆದುದರಿಂದ ಪತ್ನಿಯೊಡಗೂಡಿ ನೀನು ವಸಿಷ್ಠಾದಿಗಳೊಡನೆ ಹಿಮಾಲಯಪರ್ವತಕ್ಕೆ ಹೋಗಿ ವಾಸಮಾಡು.

೫೫-೫೬. ರತ್ನಾಕರವೆಂಬ ಹೆಸರಿನ ಪಶ್ಚಿಮಸಮುದ್ರದ ದ್ವೀಪಗಳೂ, ಮಹೋದಧಿಯೆಂಬ ಪೂರ್ವಸಮುದ್ರದ ದ್ವೀಪಗಳೂ, ಬಾಡಬಾಬ್ಧಿಯೆಂಬ ದಕ್ಷಿಣ ಸಮುದ್ರದ ದ್ವೀಪಗಳೂ ನಾಶವಾದುವು. ಸಗರ ಪುತ್ರರು ತೋಡಿದ ಹಿಮಾಬ್ಧಿಯೆಂಬ ಸಮುದ್ರ ಉತ್ತರದಲ್ಲಿದೆಯಷ್ಟೆ. ಅದರಲ್ಲಿದ್ದ ಅತಿ ಪ್ರಸಿದ್ಧವಾದ ಎಲ್ಲಾ ದ್ವೀಪಗಳೂ ಹಾಳಾದವು. ಈ ಭಾರತ ವರ್ಷವು ಇದೇ ವರ್ಷದಲ್ಲಿ ಏಳನೆಯದಿನ ಹಗಲಿನಲ್ಲಿ

ವಾಡವೋಽಬ್ಧಿರ್ದಕ್ಷಿಣೇ ಚ ತಸ್ಯ ದ್ವೀಪಾಃ ಕ್ಷಯಂ ಗತಾಃ ।
ಹಿಮಾಬ್ಧಿರುತ್ತರೇ ತಸ್ಯ ಸಗರೈಃ ಖನಿತೋ ಹಿ ಸಃ ॥ ೫೬ ॥

ಯೇ ದ್ವೀಪಾಸ್ತು ಸುವಿಖ್ಯಾತಾಸ್ತೇಽಪಿ ಸರ್ವೇ ಲಯಂ ಗತಾಃ ।
ಭಾರತೋ ವರ್ಷ ಏವಾಸೌ ವತ್ಸರೇ ಸಪ್ತಮೇಽಹನಿ ॥ ೫೭ ॥

ಸಜೀವಃ ಪ್ರಲಯಂ ಯಾಸ್ಯೇತ್ತಸ್ಮಾತ್ತ್ವಂ ಜೀವಿತೋ ಭವ ।
ತಥೇತಿ ಮತ್ವಾ ಸ ನೃಪಃ ಪರ್ವತಂ ವೈ ಹಿಮಾಲಯಂ ॥ ೫೮ ॥

ಪ್ರಾಪ್ತವಾನ್ಮುಖ್ಯಭೂಪೈಶ್ಚ ಮುಖ್ಯವೈಶ್ಯೈರ್ದ್ವಿಜೈಃ ಸಹ ।
ಪಂಚವರ್ಷಪ್ರಮಾಣೇನ-ವಾಯುಸ್ತೇಜಃಕ್ರಮಾಜ್ಜಲಂ ॥ ೫೯ ॥

ಶರ್ಕರಾ ಚ ಮಹೀಂ ಪ್ರಾಪ್ತಾಸ್ತತೋ ಜೀವಾಃ ಕ್ಷಯಂ ಗತಾಃ ।
ಪಂಚವರ್ಷಮಿತೇ ಕಾಲೇ ಜಲಂ ಜಾತಾ ವಸುಂಧರಾ ॥ ೬೦ ॥

---

ಸಮಸ್ತ ಪ್ರಾಣಿಗಳೊಡನೆ ಪ್ರಲಯ ಹೊಂದುವುದು ನೀನು ಅದರಿಂದ ತಪ್ಪಿಸಿಕೊಂಡು ಬದುಕು ಎಂದು ಹೇಳಿದಳು.

೫೭-೫೮. ಆ ಸುದರ್ಶನ ರಾಜನು ಹಾಗೆಯೇ ಆಗಲಿ ಎಂದು ಹೇಳಿ, ಮುಖ್ಯರಾದ ಆಶ್ರಿತರಾಜರೊಡನೆಯೂ ಪ್ರಮುಖರಾದ ವೈಶ್ಯರೊಡನೆಯೂ ಬ್ರಾಹ್ಮಣರೊಡನೆಯೂ ಹಿಮಾಲಯ ಪರ್ವತಕ್ಕೆ ಹೊರಟು ಹೋದನು.

೫೯-೬೦. ತರುವಾಯ ಐದು ವರ್ಷಗಳವರೆಗೆ ಬಿರುಗಾಳಿಯೂ ಉರಿಬಿಸಿಲೂ ನೀರೂ ಮಳಲೂ ಕ್ರಮವಾಗಿ ಭರತಭೂಮಿಯನ್ನು ಆವರಿಸಿದುವು. ಅದರಿಂದ ಪ್ರಾಣಿಗಳೆಲ್ಲವೂ ನಾಶಹೊಂದಿದುವು. ಈರೀತಿ ಐದು ವರ್ಷಗಳಕಾಲ ಭೂಮಿಯು ನೀರಿಂದ ತುಂಬಿ ಮುಚ್ಚಿಹೋಗಿದ್ದಿತು.

**ಶಾಂತೋ ಭೂತ್ವಾ ಪುನರ್ವಾಯುರ್ಜಲಂ ಸರ್ವಮಶೋಷಯತ್ ।**
**ದಶವರ್ಷಾಂತರೇ ಭೂಮಿಃ ಸ್ಥಲೀ ಭೂತ್ವಾ ಪ್ರದೃಶ್ಯತೇ ॥ ೬೧ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಯುಗ ಖಂಡಾಪರಪರ್ಯಾಯೇ ಕೃತಯುಗ ಭೂಪಾಖ್ಯಾನಂ ನಾಮ ಪ್ರಥಮೋಽಧ್ಯಾಯಃ.**



---

೬೧. ಬಳಿಕ ಗಾಳಿಯು ಶಾಂತವಾಯ್ತು ನೀರನ್ನೆಲ್ಲಾ ಬತ್ತಿಸಿತು. ಹತ್ತು ವರ್ಷಗಳಲ್ಲಿ ಜಲಾವೃತವಾಗಿದ್ದ ಭೂಮಿಯು ನೆಲವಾಗಿ ಕಾಣಿಸಿತು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಪ್ರಥಮ ಖಂಡದಲ್ಲಿ ಮೊದಲನೆಯ ಅಧ್ಯಾಯು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ಪ್ರಥಮಖಂಡೇ
## ದ್ವಿತೀಯೋಽಧ್ಯಾಯಃ

---

॥ ಸೂತ ಉವಾಚ ॥

ವೈಶಾಖಶುಕ್ಲಪಕ್ಷೇ ತು ತೃತೀಯಾಗುರುವಾಸರೇ ।
ಸುದರ್ಶನೋ ಜನೈಃ ಸಾರ್ಧಮಯೋಧ್ಯಾಮಾಗಮತ್ಪುನಃ ॥ ೧ ॥

ಮಾಯಾದೇವೀಪ್ರಭಾವೇನ ಪುರಂ ಸರ್ವಂ ಮನೋಹರಂ ।
ಮಹಾವೃದ್ಧಿಯುತಂ ಪ್ರಾಪ್ತಂ ಬಹ್ವನ್ನಂ ಸರ್ವರತ್ನಕಂ ॥ ೨ ॥

ದಶವರ್ಷಸಹಸ್ರಾಣಿ ರಾಜ್ಯಂ ಕೃತ್ವಾ ಸುದರ್ಶನಃ ।
ಪ್ರಾಪವಾನ್ ಶಾಶ್ವತಂ ಲೋಕಂ ದಿಲೀಪಸ್ತತ್ಸುತೋಽಭವತ್ ॥ ೩ ॥

---

### ಎರಡನೆಯ ಅಧ್ಯಾಯ

೧-೩. ಸೂತಮುನಿವರ್ಯನು ಹೇಳುತ್ತಾನೆ—ವೈಶಾಖ ಶುಕ್ಲ ತದಿಗೆ ಗುರುವಾರ ಸುದರ್ಶನ ರಾಜನು ಜನರೊಂದಿಗೆ ಮತ್ತೆ ಅಯೋಧ್ಯೆಗೆ ಬಂದು ಸೇರಿದನು. ಮಾಯಾದೇವಿಯ ಮಹಿಮೆಯಿಂದ ಅಯೋಧ್ಯೆಯೆಲ್ಲವೂ ಮನೋಹರವೂ ಏಳಿಗೆಯುಳ್ಳದೂ ಸಮೃದ್ಧಿಯಾದ ಆಹಾರ ಪದಾರ್ಥಗಳಿಂದಲೂ ಸರ್ವರತ್ನಗಳಿಂದಲೂ ತುಂಬಿದುದೂ ಆಯಿತು. ಸುದರ್ಶನನು ಹತ್ತುಸಾವಿರ ವರ್ಷ ದೊರೆತನಮಾಡಿ ಶಾಶ್ವತ ಪದವಿಯನ್ನು ಪಡೆದನು ದಿಲೀಪನೆಂಬಾತನು ಸುದರ್ಶನನ ಪುತ್ರ.

ನಂದಿನೀವರದಾನೇನ ತತ್ಪುತ್ರೋ ರಘುರುತ್ತಮಃ ।
ದಶವರ್ಷಸಹಸ್ರಾಣಿ ದಿಲೀಪೋರಾಜ್ಯಸತ್ಕೃತಃ ॥ ೪ ॥

ರಾಜ್ಯಂ ಕೃತಂ ಚ ರಘುಣಾ ದಿಲೀಪಾಂತೇ ಪಿತುಸ್ಸಮಂ ।
ರಘುವಂಶಸ್ತತಃ ಖ್ಯಾತಸ್ತ್ರೇತಾಯಾಂ ಭೃಗುನಂದನ ॥ ೫ ॥

ವಿಪ್ರಸ್ಯ ವರದಾನೇನ ತತ್ಪುತ್ರೋಽಜ ಇತಿ ಸ್ಮೃತಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾದ್ದಶರಥೋಽಭವತ್ ॥ ೬ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾದ್ರಾಮೋ ಹರಿಃ ಸ್ವಯಂ ।
ಏಕಾದಶಸಹಸ್ರಾಣಿ ರಾಮರಾಜ್ಯಂ ಪ್ರಕೀರ್ತಿತಂ ॥ ೭ ॥

ತಸ್ಯ ಪುತ್ರಃ ಕುಶೋ ನಾಮ ರಾಜ್ಯಂ ದಶಸಹಸ್ರಕಂ ।
ಅತಿಥಿರ್ನಾಮ ತತ್ಪುತ್ರಃ ಕೃತಂ ರಾಜ್ಯಂ ಪಿತುಃ ಸಮಂ ॥ ೮ ॥

---

೪. ನಂದಿನೀಧೇನುವಿನ ವರದಿಂದ ದಿಲೀಪನಿಗೆ ರಘುವೆಂಬ ಉತ್ತಮ ಪುತ್ರನು ಜನಿಸಿದನು. ದಿಲೀಪರಾಜನು ಹತ್ತುಸಾವಿರ ವರ್ಷ ರಾಜ್ಯವನ್ನಾಳಿದನು.

೫. ದಿಲೀಪನ ಬಳಿಕ ರಘುರಾಜನೂ ಹತ್ತುಸಾವಿರ ವರ್ಷ ಆಳಿದನು. ಎಲೈ ಭೃಗು ಪುತ್ರನೇ! ತ್ರೇತಾಯುಗದಲ್ಲಿ ಆತನಿಂದ ರಘುವಂಶವೆಂದು ಪ್ರಸಿದ್ಧವಾಯಿತು

೬. ಋಷಿಪುತ್ರನಾದ ಕೌತ್ಸನ ವರದಾನದಿಂದ ರಘುವಿಗೆ ಅಜನೆಂಬ ಪುತ್ರನು ದಿಸಿದನು. ಆತನೂ ತಂದೆಯಂತೆಯೇ ಹತ್ತುಸಾವಿರ ವರ್ಷ ದೊರೆತನಮಾಡಿದನು. ಅಜನ ಪುತ್ರನು ದಶರಥ.

೭. ದಶರಥನೂ ಹತ್ತುಸಾವಿರ ವರ್ಷ ರಾಜ್ಯಭಾರ ಮಾಡಿದನು. ಆತನ ಪುತ್ರನು ಶ್ರೀರಾಮ ಅವನೇ ಸಾಕ್ಷಾದ್ವಿಷ್ಣು. ಶ್ರೀರಾಮನ ರಾಜ್ಯಭಾರವು ಹನ್ನೊಂದು ಸಾವಿರ ವರ್ಷವೆಂದು ಹೇಳಿದೆ.

೮. ಶ್ರೀರಾಮನ ಪುತ್ರನಾದ ಕುಶರಾಜನು ಹತ್ತುಸಾವಿರ ವರ್ಷ ಆಳಿದನು. ಕುಶನ ಮಗನಾದ ಅತಿಥಿರಾಜನೂ ಹತ್ತುಸಾವಿರ ವರ್ಷ ರಾಜ್ಯವನ್ನು ಆಳಿದನು. ಅತಿಥಿಯ ಮಗನಾದ ನಿಬಂಧರಾಜನೂ ಹತ್ತುಸಾವಿರ ವರ್ಷ ರಾಜ್ಯಭಾರಮಾಡಿದನು

ನಿಬಂಧೋ ನಾಮ ತತ್ಪುತ್ರಃ ಕೃತಂ ರಾಜ್ಯಂ ಪಿತುಸ್ಸಮಂ ।
ತಸ್ಮಾಜ್ಜಾತೋ ನಲೋ ನಾಮ ತ್ರೇತಾಯಾಂ ಶಕ್ತಿಪೂಜಕಃ ॥ ೯ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾನ್ನಾಭಃ ಸುತೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಪುಂಡರೀಕಃ ಸುತೋಽಭವತ್ ॥ ೧೦ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಕ್ಷೇಮಧನ್ವಾ ತು ತತ್ಸುತಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ದ್ವಾರಕೋ ನಾಮ ತತ್ಸುತಃ ॥ ೧೧ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾಜ್ಜಾತೋ ಹ್ಯಹೀನಜಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಕುರುರ್ನಾಮ ಸುತಸ್ತತಃ ॥ ೧೨ ॥

ಕುರುಕ್ಷೇತ್ರಂ ಕೃತಂ ತೇನ ತ್ರೇತಾಯಾಂ ಶತಯೋಜನಂ ।
ತ್ರೇತಾಪಾದಸ್ಸಮಾಪ್ತೋಽಯಂ ಪ್ರಥಮೋ ಭಾರತೇಽಂತರೇ ॥ ೧೩ ॥

---

ನಿಬಂಧರಾಜನಿಗೆ ನಲನೆಂಬ ಶಕ್ತಿಪೂಜಕನಾದ ಪುತ್ರನುದಿಸಿದನು. ನಲನೂ ಹತ್ತು ಸಾವಿರ ವರ್ಷ ದೊರೆತನವನ್ನು ಮಾಡಿದನು. ನಾಭನು ಆತನ ಮಗ ನಾಭರಾಜನೂ ಹತ್ತುಸಾವಿರ ವರ್ಷ ಆಳಿದನು. ಪುಂಡರೀಕನು ಆತನ ಪುತ್ರ. ಪುಂಡರೀಕನೂ ಹತ್ತುಸಾವಿರ ವರ್ಷ ಆಳಿದನು. ಕ್ಷೇಮಧನ್ವನು ಆತನ ಪುತ್ರ. ಕ್ಷೇಮಧನ್ವನೂ ಹತ್ತುಸಾವಿರ ವರ್ಷ ಆಳಿದನು. ದ್ವಾರಕನು ಆತನ ಮಗ. ದ್ವಾರಕನೂ ಹತ್ತು ಸಾವಿರ ವರ್ಷ ಆಳಿದನು. ಅಹೀನಜನು ಆತನ ಮಗ. ಅಹೀನಜನೂ ಹತ್ತುಸಾವಿರ ವರ್ಷ ರಾಜ್ಯವಾಳಿದನು. ಕುರುವೆಂಬುವನು ಆತನ ಮಗ.

೧೩. ತ್ರೇತಾಯುಗದಲ್ಲಿ ನೂರುಯೋಜನ ವಿಸ್ತಾರವುಳ್ಳ ಕುರುಕ್ಷೇತ್ರವು ಆ ಕುರುರಾಜನಿಂದಾಯಿತು *ಕುರುರಾಜನಕಾಲಕ್ಕೆ ಭಾರತಾಂತರದಲ್ಲಿ ತ್ರೇತಾಯುಗದ ಮೊದಲನೆಯ ಪಾದವು ಮುಗಿಯಿತು.

* ಮುಂದೆ ೨೨ನೆಯ ಶ್ಲೋಕದಲ್ಲಿ ಸುಸಂಧಿ ರಾಜನ ಕಾಲಕ್ಕೆ ತ್ರೇತಾಯುಗದ ಮೊದಲನೆಯ ಪಾದವು ಕಳೆಯಿತೆಂದು ಹೇಳಿದೆ. ಎರಡನೆಯ ಪಾದವಿರಬಹುದು.

ಪಿತುಸ್ತುಲ್ಯಂ ಕೃತಂ ರಾಜ್ಯಂ ಪಾರಿಯಾತ್ರಃ ಸುತೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ದಲಪಾಲಸ್ತು ತತ್ಸುತಃ ॥ ೧೪ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಛದ್ಮಕಾರೀ ತು ತತ್ಸುತಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾದುಕ್ಥಃ ಸುತೋಽಭವತ್ ॥ ೧೫ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ವಜ್ರನಾಭಿಸ್ತತೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಶಂಖನಾಭಿಸ್ತತೋಽಭವತ್ ॥ ೧೬ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ವ್ಯುತ್ಥಿತಾಭಿಸ್ತತೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ವಿಶ್ವಪಾಲಸ್ತತೋಽಭವತ್ ॥ ೧೭ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಸ್ವರ್ಣನಾಭಿಸ್ತು ತತ್ಸುತಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಪುಷ್ಪಸೇನಸ್ತು ತತ್ಸುತಃ ॥ ೧೮ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಧ್ರುವಸೇಧಿಸ್ತು ತತ್ಸುತಃ ।
ಪಿತುಸ್ತುಲ್ಯಂ ಕೃತಂ ರಾಜ್ಯಮಪವರ್ಮಾ ತು ತತ್ಸುತಃ ॥ ೧೯ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಶೀಘ್ರಗಂತಾ ತು ತತ್ಸುತಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಮರುಪಾಲಸ್ತು ತತ್ಸುತಃ ॥ ೨೦ ॥

---

೧೪-೨೧. ಕುರುವೆಂಬ ಆ ದೊರೆಯು ತಂದೆಯಂತೆಯೇ ಹತ್ತುಸಾವಿರ ವರ್ಷ ಕಾಲ ರಾಜ್ಯಭಾರ ಮಾಡಿದನು. ಆತನಿಗೆ ಪಾರಿಯಾತ್ರನೆಂಬ ಪುತ್ರನುದಿಸಿದನು. ಪಾರಿಯಾತ್ರನಿಗೆ ದಲಪಾಲನೆಂಬ ಮಗನು ಜನಿಸಿದನು. ದಲಪಾಲನ ಮಗನು ಛದ್ಮಕಾರಿ, ಛದ್ಮಕಾರಿಯ ಮಗನು ಉಕ್ಥನೆಂಬವನು. ಉಕ್ಥನ ಮಗನು ವಜ್ರನಾಭಿ, ವಜ್ರನಾಭಿಯ ಮಗನು ಶಂಖನಾಭಿ. ಶಂಖನಾಭಿಯ ಮಗನು ವ್ಯುತ್ಥಿತಾಭಿಯೆಂಬವನು. ವ್ಯುತ್ಥಿತಾಭಿಯ ಮಗನು ವಿಶ್ವಪಾಲ, ಆತನ ಮಗನು ಸ್ವರ್ಣನಾಭಿ, ಸ್ವರ್ಣನಾಭಿಯ ಮಗನು ಪುಷ್ಪಸೇನ, ಅವನ ಮಗನು ಧ್ರುವಸೇಧಿ, ಧ್ರುವಸೇಧಿಯ ಪುತ್ರನು ಅಪವರ್ಮನೆಂಬವನು, ಅಪವರ್ಮನ ಮಗನು ಶೀಘ್ರಗಂತೃ, ಶೀಘ್ರಗಂತೃವಿನ ಮಗನು ಮರುಪಾಲ, ಆತನ ಮಗನು ಪ್ರಸೂವಶ್ರುತ, ಪ್ರಸೂವಶ್ರುತನಿಗೆ ಸುಸಂಧಿಯೆಂಬವನು ಮಗನು, ಪಾರಿಯಾತ್ರನೇ ಮೊದಲಾದ

**ಪಿತುಸ್ತುಲ್ಯಂ ಕೃತಂ ರಾಜ್ಯಂ ಪ್ರಸೂವಶ್ರುತ ಉಚ್ಯತೇ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಸುಸಂಧಿಸ್ತನಯೋಽಭವತ್ ॥ ೨೧ ॥**

**ತ್ರೇತಾಪಾದಃ ಸಮಾಪ್ತೋಽಯಂ ಪ್ರಥಮೋ ಭಾರತೇಂತರೇ ।**
**ಉದಯಾದುದಯಂ ಯಾವದ್ರಾಜ್ಞಾ ತತ್ರ ಸುಸಂಧಿನಾ ॥ ೨೨ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಮಾಮರ್ಬಸ್ತನಯಸ್ತತಃ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಮಹಾಽಶ್ವಸ್ತನಯೋಽಭವತ್ ॥ ೨೩ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಬೃಹದ್ಬಾಲಃ ಸುತಸ್ತತಃ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಬೃಹದ್ಭೈಶಾನ ಏವ ತತ್ ॥ ೨೪ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಮುರುಕ್ಷೇಪಸ್ತತೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ವತ್ಸಪಾಲಸ್ತು ತತ್ಸುತಃ ॥ ೨೫ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ವತ್ಸವ್ಯೂಹಸ್ತತೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಪ್ರತಿವ್ಯೋಮಾ ತತೋ ನೃಪಃ ॥ ೨೬ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಸುತೋ ದೇವಕರಸ್ತತಃ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಸಹದೇವಸ್ತತೋಽಭವತ್ ॥ ೨೭ ॥**

---

ಇವರೆಲ್ಲರೂ ಕುಶನಂತೆಯೇ ಹತ್ತು ಹತ್ತುಸಾವಿರ ವರ್ಷಕಾಲ ದೊರೆತನವನ್ನು ಮಾಡಿದರು.

೨೨-೩೦. ಭಾರತಾಂತದಲ್ಲಿ ಈ ಸುಸಂಧಿಯ ಆಳಿಕೆಗೆ ತ್ರೇತಾಯುಗದಲ್ಲಿ ಮೊದಲನೆಯ ಪಾದವು ಕಳೆಯಿತು. ಸುಸಂಧಿರಾಜನು ಯಾವಾಗಲೂ ತಂದೆಯಂತೆ ಚೆನ್ನಾಗಿ ದೊರೆತನ ಮಾಡುತ್ತಿದ್ದನು. ಮಾಮರ್ಬನೆಂಬವನು ಸುಸಂಧಿರಾಜನ ಮಗನು ಮಾಮರ್ಬನ ಮಗನು ಮಹಾಶ್ವ, ಮಹಾಶ್ವನ ಮಗನು ಬೃಹದ್ಬಾಲ, ಬೃಹದ್ಬಾಲನ ಮಗನು ಬೃಹದ್ಭೈಶಾನ, ಆತನ ಮಗನು ಉರುಕ್ಷೇಪ, ಉರುಕ್ಷೇಪನಿಂದ ವತ್ಸಪಾಲನೆಂಬುವನು ಉದಿಸಿದನು. ಆತನಿಂದ ವತ್ಸವ್ಯೂಹನೆಂಬುವನೂ, ಆತನಿಂದ ಪ್ರತಿವ್ಯೋಮನೆಂಬುವನೂ, ಪ್ರತಿವ್ಯೋಮನಿಂದ ದೇವಕರನೆಂಬುವನೂ, ಆತನಿಂದ ಸಹದೇವನೆಂಬುವನೂ, ಆತನಿಂದ ಬೃಹದಶ್ವನೆಂಬುವನೂ, ಆತನಿಂದ ಭಾನುರತ್ನ

ಪಿತುಸ್ತುಲ್ಯಂ ಕೃತಂ ರಾಜ್ಯಂ ಬೃಹದಶ್ವಸ್ತತೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಭಾನುರತ್ನಸ್ತತೋಽಭವತ್ ॥ ೨೮ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಸುಪ್ರತೀಕಸ್ತತೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಮರುದೇವಸ್ಸುತಸ್ತತಃ ॥ ೨೯ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಸುನಕ್ಷತ್ರಸ್ತತೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಸುತಃ ಕೇಶೀನರಸ್ತತಃ ॥ ೩೦ ॥

ಪಿತುಸ್ತುಲ್ಯಂ ಕೃತಂ ರಾಜ್ಯಮಂತರಿಕ್ಷಸ್ತತೋ ನೃಪಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಸುವರ್ಣಾಂಗೋ ನೃಪೋಽಭವತ್ ॥ ೩೧ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಯ ಪುತ್ರೋ ಹ್ಯಮಿತ್ರಜಿತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಬೃಹದ್ರಾಜಸ್ತತೋಽಭವತ್ ॥ ೩೨ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಧರ್ಮರಾಜಸ್ತತೋ ನೃಪಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾಜ್ಜಾತಃ ಕೃತಂಜಯಃ ॥ ೩೩ ॥

---

ನೆಂಬುವನೂ ಉದಿಸಿದರು. ಭಾನುರತ್ನನ ಮಗನು ಸುಪ್ರತೀಕನೆಂಬುವನು. ಆತನ ಮಗನು ಮರುದೇವ, ಮರುದೇವನ ಮಗನಿಗೆ ಸುನಕ್ಷತ್ರನೆಂದು ಹೆಸರು. ಕೇಶಿಯೆಂಬುವನು ಸುನಕ್ಷತ್ರನ ಮಗನು, ಇವರೆಲ್ಲರೂ ಸುಸಂಧಿರಾಜನಂತೆಯೇ ಹತ್ತು ಹತ್ತುಸಾವಿರ ವರ್ಷ ರಾಜ್ಯಭಾರವನ್ನು ಮಾಡಿದರು.

೩೧. ಕೇಶಿಯ ಮಗನಾದ ಅಂತರಿಕ್ಷನೂ ತಂದೆಯಂತೆ ಹತ್ತುಸಾವಿರ ವರ್ಷ ಆಳಿದನು, ಅಂತರಿಕ್ಷನ ಮಗನಾದ ಸುವರ್ಣಾಂಗನೂ ತಂದೆಯಂತೆ ಹತ್ತುಸಾವಿರ ವರ್ಷ ಆಳಿದನು.

೩೨. ಸುವರ್ಣಾಂಗನ ಮಗ ಅಮಿತ್ರಜಿತ್ತೂ ತಂದೆಯಂತೆ ಹತ್ತುಸಾವಿರ ವರ್ಷ ರಾಜ್ಯವಾಳಿದನು. ಆತನ ಮಗನಾದ ಬೃಹದ್ರಾಜನೂ ತಂದೆಯಂತೆ ಹತ್ತು ಸಾವಿರ ವರ್ಷ ರಾಜ್ಯಭಾರ ಮಾಡಿದನು.

೩೩. ಬೃಹದ್ರಾಜನ ಮಗನಾದ ಧರ್ಮರಾಜನೂ ತಂದೆಯಂತೆ ಹತ್ತುಸಾವಿರ ವರ್ಷ ರಾಜ್ಯಭಾರ ವಹಿಸಿದನು ಧರ್ಮರಾಜನ ಮಗನಾದ ಕೃತಂಜಯನೂ ತಂದೆಯಂತೆ ಹತ್ತುಸಾವಿರ ವರ್ಷಕಾಲ ರಾಜ್ಯವನ್ನಾಳಿದರು.

**ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾಜ್ಜಾತೋ ರಣಂಜಯಃ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಸಂಜಯಸ್ತತ್ಸುತಃ ಸ್ಮೃತಃ ॥ ೩೪ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ತತ್ಪುತ್ರಃ ಶಾಕ್ಯವರ್ಧನಃ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಕ್ರೋಧದಾನಸ್ತು ತತ್ಸುತಃ ॥ ೩೫ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾದತುಲವಿಕ್ರಮಃ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾಜ್ಜಾತಃ ಪ್ರಸೇನಜಿತ್ ॥ ೩೬ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ತತ್ಪುತ್ರಃ ಶೂದ್ರಕಃ ಸ್ಮೃತಃ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಸುರಥಸ್ತತ್ಸುತೋಽಭವತ್ ॥ ೩೭ ॥**

**ಪಿತುರರ್ಧಂ ಕೃತಂ ರಾಜ್ಯಂ ಸರ್ವೇ ತು ರಘುವಂಶಜಾಃ ।**
**ಪಂಚಷಷ್ಟಿಮಿತಾ ಭೂಪಾ ದೇವೀಪೂಜನತತ್ಪರಾಃ ॥ ೩೮ ॥**

---

೩೪. ರಣಂಜಯನೆಂಬ ಆತನ ಪುತ್ರನೂ ತಂದೆಯಂತೆ ಹತ್ತುಸಾವಿರ ವರ್ಷ ಕಾಲ ರಾಜ್ಯವಾಳಿದನು. ರಣಂಜಯನ ಮಗನಾದ ಸಂಜಯನೂ ತಂದೆಯಂತೆ ಹತ್ತುಸಾವಿರ ವರ್ಷ ರಾಜ್ಯವನ್ನು ಆಳಿದನು.

೩೫. ಸಂಜಯನ ಮಗ ಶಾಕ್ಯವರ್ಧನನೂ ತಂದೆಯಂತೆ ಹತ್ತುಸಾವಿರವರ್ಷ ಕಾಲ ರಾಜ್ಯಭಾರ ಮಾಡಿದನು. ಶಾಕ್ಯವರ್ಧನನ ಮಗನಾದ ಕ್ರೋಧದಾನನೂ ತಂದೆಯಂತೆ ಹತ್ತುಸಾವಿರ ವರ್ಷ ರಾಜ್ಯಭಾರ ಮಾಡಿದನು.

೩೬. ಕ್ರೋಧದಾನನ ಮಗನು ಅತುಲವಿಕ್ರಮ. ಆತನೂ ತಂದೆಯಂತೆ ಹತ್ತು ಸಾವಿರ ವರ್ಷ ದೊರೆತನಮಾಡಿದನು. ಅತುಲವಿಕ್ರಮನ ಮಗನಾದ ಪ್ರಸೇನಜಿತ್ತೂ ತಂದೆಯಂದೆ ಹತ್ತುಸಾವಿರ ವರ್ಷ ದೊರೆತನ ಮಾಡಿದರು.

೩೭. ಪ್ರಸೇನಜಿತ್ತಿನ ಮಗನು ಶೂದ್ರಕ. ಆತನೂ ತಂದೆಯಂತೆ ಹತ್ತು ಸಾವಿರ ವರ್ಷ ರಾಜ್ಯವಾಳಿದನು. ಸುರಥನೆಂಬುವನು, ಶೂದ್ರಕರಾಜನ ಮಗನು ಆತನೂ ತಂದೆಯಂತೆಯೇ ಹತ್ತುಸಾವಿರ ವರ್ಷಕಾಲ ರಾಜ್ಯಭಾರಮಾಡಿದನು.

೩೮. ರಘುವಂಶದ ರಾಜರೆಲ್ಲರೂ ಅವರವರ ತಂದೆಯ ಆಳ್ವಿಕೆಯಕಾಲದ ಅರ್ಧದಷ್ಟುಕಾಲ ಆಳಿದರು. ರಘುವಂಶದ ಅರವತ್ತೈದು ಜನ ರಾಜರೂ ದೇವೀ ಪೂಜಾಸಕ್ತರಾಗಿದ್ದರು.

ಹಿಂಸಾಯಜ್ಞಪರಾಃ ಸರ್ವೇ ಸ್ವರ್ಗಲೋಕಮಿತೋ ಗತಾಃ ।
ಬುದ್ಧ್ವಾ ಜಾತಾಶ್ಚ ಯೇ ಪುತ್ರಾಸ್ತೇ ಸರ್ವೇ ವರ್ಣಸಂಕರಾಃ ॥ ೩೯ ॥

ತ್ರೇತಾತೃತೀಯಚರಣ ಪ್ರಾರಂಭೇ ನವತಾಂ ಗತಾಃ ।
ಇಂದ್ರೇಣ ಪ್ರೇಷಿತೋ ಭೂಮೌ ಚಂದ್ರಮಾ ರೋಹಿಣೀಪತಿಃ ॥ ೪೦ ॥

ಪ್ರಯಾಗನಗರೇ ರಮ್ಯೇ ಭೂಮಿರಾಜ್ಯಮಚೀಕರತ್ ।
ವಿಷ್ಣುಭಕ್ತಶ್ಚಂದ್ರಮಾಶ್ಚ ಶಿವಪೂಜನತತ್ಪರಃ ॥ ೪೧ ॥

ಮಾಯಾದೇವೀಪ್ರಸನ್ನಾರ್ಥೇ ಶತಂ ಯಜ್ಞಮಚೀಕರತ್ ।
ಅಷ್ಟಾದಶಸಹಸ್ರಾಣಿ ರಾಜ್ಯಂ ಕೃತ್ವಾ ದಿವಂ ಗತಃ ॥ ೪೨ ॥

ತಸ್ಯ ಪುತ್ರೋ ಬುಧೋ ನಾಮ ತಾರಾದೇವ್ಯಾಸ್ತುಗರ್ಭಜಃ ।
ಇಲಾಮುವಾಹ ಧರ್ಮೇಣ ತಸ್ಮಾಜ್ಜಾತಃ ಪುರೂರವಾಃ ॥ ೪೩ ॥

---

೩೯. ಅವರೆಲ್ಲರೂ ಹಿಂಸಾಯಜ್ಞದಲ್ಲಿ ಆಸಕ್ತರಾಗಿರುತ್ತಾ ಕಾಲಕ್ರಮದಲ್ಲಿ ಸ್ವರ್ಗಲೋಕವನ್ನು ಸೇರಿದರು. ಆ ವಂಶಜರು ಮುಂದೆ ಬೌದ್ಧಮತವನ್ನವಲಂಬಿಸಿ ವರ್ಣಸಂಕರವುಳ್ಳವರಾದರು.

೪೦. ತ್ರೇತಾಯುಗದ ಮೂರನೆಯ ಪಾದದ ಆರಂಭದಲ್ಲಿ ಹೊಸ ರಾಜ ವಂಶವೇರ್ಪಟ್ಟಿತು. ಇಂದ್ರನು ರೋಹಿಣೀಪತಿಯಾದ ಚಂದ್ರನನ್ನು ಭೂಮಿಯಲ್ಲಿ ಆಳುವಂತೆ ಕಳುಹಿಸಿದನು.

೪೧-೪೨. ವಿಷ್ಣುಭಕ್ತನೂ ಶಿವಪೂಜಾಸಕ್ತನೂ ಆದ ಚಂದ್ರನು ಮನೋಹರವಾದ ಪ್ರಯಾಗನಗರದಲ್ಲಿದ್ದು ರಾಜ್ಯವನ್ನಾಳಿದನು. ಮಾಯಾದೇವಿಯ ಅನುಗ್ರಹವನ್ನು ಪಡೆಯಲು ನೂರುಯಜ್ಞಗಳನ್ನು ಮಾಡಿದ ಆತನು ಹದಿನೆಂಟು ಸಾವಿರ ವರ್ಷ ರಾಜ್ಯಭಾರವನ್ನುಮಾಡಿ ದಿವಂಗತನಾದನು.

೪೩. ತಾರಾದೇವಿಯ ಗರ್ಭದಲ್ಲಿ ಜನಿಸಿದ ಬುಧನು ಚಂದ್ರನ ಪುತ್ರ. ಆ ಬುಧನೂ ಧರ್ಮದಿಂದ ಭೂಮಿಯನ್ನಾಳಿದನು. ಪುರೂರವನು ಬುಧನ ಮಗ.

**ಚತುರ್ದಶಸಹಸ್ರಾಣಿ ಭೂಮಿರಾಜ್ಯಮಚೀಕರತ್ ।**
**ಉರ್ವಶೀಂ ಸೋಽಪಿ ಸ್ವರ್ವೇಶ್ಯಾಂ ಸಮಯೇನೈವ ಭುಕ್ತವಾನ್ ॥ ೪೪ ॥**

**ಆಯುರ್ನಾಮ ಸುತೋ ಜಾತೋ ಧರ್ಮಾತ್ಮಾ ವಿಷ್ಣುತತ್ಪರಃ ।**
**ಷಟ್ತ್ರಿಂಶಚ್ಚ ಸಹಸ್ರಾಣಿ ರಾಜ್ಯಂ ಕೃತ್ವಾ ಪುರೂರವಾಃ ॥ ೪೫ ॥**

**ಗಂಧರ್ವಲೋಕಂ ಸಂಪ್ರಾಪ್ಯ ಮೋದತೇ ದಿವಿ ದೇವವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಮಾಯುಷೋ ನಹುಷಸ್ಸುತಃ ॥ ೪೬ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ತತಃ ಶಕ್ರತ್ವಮಾಗತಃ ।**
**ತ್ರಿಲೋಕೀಂ ಸ್ವವಶಂ ಚಕ್ರೇ ವರ್ಷಮೇಕಸಹಸ್ರಕಂ ॥ ೪೭ ॥**

**ಮುನೇರ್ದುರ್ವಾಸಸಃ ಶಾಪಾತ್ ನೃಪೋಽಜಗರತಾಂ ಗತಃ ।**
**ಪಂಚ ಪುತ್ರಾ ಯಯಾತೇಶ್ಚ ತ್ರಯೋ ಮ್ಲೇಚ್ಛತ್ವಮಾಗತಾಃ ॥ ೪೮ ॥**

---

೪೪. ಬುಧನು ಹದಿನಾಲ್ಕುಸಾವಿರವರ್ಷ ಆಳಿದನು. ಅವನ ಮಗ ಪುರೂರವನು ಸ್ವರ್ಗದ ವೇಶ್ಯೆಯಾದ ಊರ್ವಶಿಯನ್ನು ಒಂದು ನಿಬಂಧನೆಯಿಂದ ವರಿಸಿದ್ದನು

೪೫-೪೬. ಪುರೂರವನಿಗೆ ಧರ್ಮಾತ್ಮನೂ ವಿಷ್ಣುಭಕ್ತನೂ ಆದ ಆಯುವೆಂಬ ಪುತ್ರನುದಿಸಿದನು. ಪುರೂರವನು ಮೂವತ್ತಾರುಸಾವಿರವರ್ಷ ದೊರೆತನವನ್ನು ಮಾಡಿ, ಬಳಿಕ ಗಂಧರ್ವಲೋಕವನ್ನು ಸೇರಿ, ಸ್ವರ್ಗದಲ್ಲಿ ದೇವತೆಗಳಂತೆ ಆನಂದಿಸಿದನು. ಆಯುರಾಜನೂ ತಂದೆಯಷ್ಟುಕಾಲವೇ ರಾಜ್ಯವನ್ನಾಳಿದನು. ನಹುಷನು ಆಯುರಾಜನ ಮಗ.

೪೭. ನಹುಷರಾಜನು ತಂದೆಯಷ್ಟುಕಾಲ (೩೬ ಸಾವಿರ ವರ್ಷ) ಭೂಮಿಯಲ್ಲಿ ಆಳಿದನು. ಬಳಿಕ ಇಂದ್ರಪದವಿಯನ್ನೂ ಪಡೆದನು. ಸಾವಿರ ವರ್ಷಕಾಲ ಮೂರು ಲೋಕಗಳನ್ನೂ ತನ್ನ ವಶಪಡಿಸಿಕೊಂಡಿದ್ದನು.

೪೮-೫೦. ನಹುಷನು ದುರ್ವಾಸಮುನಿಯ ಶಾಪದಿಂದ ಅಜಗರ (ಹೆಬ್ಬಾವು) ವಾದನು. ನಹುಷಪುತ್ರನಾದ ಯಯಾತಿರಾಜನಿಗೆ ಐವರು ಗಂಡು ಮಕ್ಕಳು. ಅವರಲ್ಲಿ ಮೂವರು ಮ್ಲೇಚ್ಛರಾದರು. ಇಬ್ಬರು ಆರ್ಯರಾಗಿಯೇ ಇದ್ದರು, ಅವರಲ್ಲಿ

ದ್ವಾ ತಥಾರ್ಯತ್ವಮಾಪನ್ನೌ ಯದುರ್ಜ್ಯೇಷ್ಠಃ ಪುರುರ್ಲಘುಃ ।
ತಪೋಬಲಪ್ರಭಾವೇನ ರಾಜ್ಯಂ ಲಕ್ಷಾಬ್ದಸಮ್ಮಿತಂ ॥ ೪೯ ॥

ಕೃತ್ವಾ ವಿಷ್ಣುಪ್ರಸಾದೇನ ತತೋ ವೈಕುಂಠಮಾಗತಃ ।
ಯದೋಃ ಪುತ್ರಃ ಸ್ಮೃತಃ ಕ್ರೋಷ್ಟಾ ರಾಜ್ಯಂ ಷಷ್ಟಿಸಹಸ್ರಕಂ ॥ ೫೦ ॥

ವೃಜಿನಘ್ನಸ್ಸುತಸ್ತಸ್ಮಾದ್ಧ್ರಾಜ್ಯಂ ವಿಂಶತ್ಸಹಸ್ರಕಂ ।
ತಸ್ಮಾತ್ಸ್ವಾಹಾರ್ಚನಃ ಪುತ್ರಃ ಕೃತಂ ರಾಜ್ಯಂ ಪಿತುಸ್ಸಮಂ ॥ ೫೧ ॥

ತಸ್ಮಾಚ್ಚಿತ್ರರಥಃ ಪುತ್ರಃ ಕೃತಂ ರಾಜ್ಯಂ ಪಿತುಸ್ಸಮಂ ।
ಅರವಿಂದಸ್ಸುತಸ್ತಸ್ಮಾತ್ ಕೃತಂ ರಾಜ್ಯಂ ಪಿತುಸ್ಸಮಂ ॥ ೫೨ ॥

ಅಥಶ್ರವಾಸ್ತತೋ ಜಾತಃ ತೇಜಸ್ವೀ ವಿಷ್ಣುತತ್ಪರಃ ।
ಪಿತುರರ್ಧಂ ಕೃತಂ ರಾಜ್ಯಂ ತತ್ಪುತ್ರಸ್ತಾಮಸಃ ಸ್ಮೃತಃ ॥ ೫೩ ॥

---

ಯದುವೆಂಬವನು ಹಿರಿಯುವನು, ಪುರುವು ಕಿರಿಯುವನು, ಯಯಾತಿಯು ತಪೋಬಲದ ಮಹಿಮೆಯಿಂದ ಲಕ್ಷವರ್ಷಕಾಲ ರಾಜ್ಯವನ್ನಾಳಿ ಬಳಿಕ ವಿಷ್ಣುವಿನ ಅನುಗ್ರಹದಿಂದ ವೈಕುಂಠವನ್ನು ಸೇರಿದನು. ಯದುವಿನ ಮಗನು ಕ್ರೋಷ್ಟನೆಂಬುವನು. ಆತನು ಅರವತ್ತುಸಾವಿರ ವರ್ಷ ದೊರೆತನವನ್ನು ಮಾಡಿದನು.

೫೧. ಕ್ರೋಷ್ಟನ ಮಗ ವೃಜಿನಘ್ನನು ಇಪ್ಪತ್ತುಸಾವಿರ ವರ್ಷ ರಾಜ್ಯವಾಳಿದನು. ಆತನ ಮಗನಾದ ಸ್ವಾಹಾರ್ಚನನೂ ಇಪ್ಪತ್ತುಸಾವಿರ ವರ್ಷ ರಾಜ್ಯವನ್ನಾಳಿದನು.

೫೨. ಸ್ವಾಹಾರ್ಚನ ಪುತ್ರನೆನಿಸಿದ ಚಿತ್ರರಥನೂ ಇಪ್ಪತ್ತುಸಾವಿರ ವರ್ಷ ರಾಜ್ಯಭಾರ ಮಾಡಿದನು ಚಿತ್ರರಥನ ಮಗ ಅರವಿಂದನೂ ಇಪ್ಪತ್ತುಸಾವಿರ ವರ್ಷ ರಾಜ್ಯವನ್ನು ಪರಿಪಾಲಿಸಿದನು.

೫೩. ಅರವಿಂದರಾಜನಿಗೆ ತೇಜಸ್ವಿಯೂ ವಿಷ್ಣುಭಕ್ತನೂ ಆದ ಅಥಶ್ರವನೆಂಬ ಪುತ್ರನು ಜನಿಸಿದನು. ಆತನು ಹತ್ತುಸಾವಿರ ವರ್ಷಕಾಲ ದೊರೆತನಮಾಡಿದನು. ಆತನ ಮಗನು ತಾಮಸಪ್ರಭು.

**ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾದುಶನಶಸ್ಸುತಃ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಶೀತಾಂಶುಕನೃಪೋಽಭವತ್ ॥ ೫೪ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಕಮಲಾಂಶುಸ್ತತೋಽಭವತ್ ॥ ೫೫ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಪಾರಾವತಸುತಸ್ತತಃ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಜಾಮಘಸ್ತತ್ಸುತೋಽಭವತ್ ॥ ೫೬ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ವಿದರ್ಭಸ್ತತ್ಸುತೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಕ್ರಾಥೋ ನಾಮ ಸುತಸ್ತತಃ ॥ ೫೭ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಕುಂತೀಭೋಜಸ್ತು ತತ್ಸುತಃ ॥ ೫೮ ॥**

---

೫೪. ತಾಮಸರಾಜನು ತಂದೆಯಂತೆ ಹತ್ತುಸಾವಿರವರ್ಷ ಆಳಿದನು. ಆತನ ಪುತ್ರನು ಉಶನಶ, ಉಶನಶರಾಜನು ತಂದೆಯಂತೆ ಹತ್ತುಸಾವಿರ ವರ್ಷ ಆಳಿದನು ಆತನ ಪುತ್ರನು ಶೀತಾಂಶುಕ.

೫೫. ಶೀತಾಂಶುಕರಾಜನು ತಂದೆಯಂತೆ ಹತ್ತುಸಾವಿರವರ್ಷ ರಾಜ್ಯವಾಳಿದನು. ಆತನ ಕುಮಾರನು ಕಮಲಾಂಶು.

೫೬. ಕಮಲಾಂಶುಭೂಪತಿಯು ತಂದೆಯಂತೆ ಹತ್ತುಸಾವಿರವರ್ಷ ರಾಜ್ಯವಾಳಿದನು. ಅವನ ಮಗನ ಹೆಸರು ಪಾರಾವತ. ಪಾರಾವತರಾಜನು ತಂದೆಯಂತೆ ಹತ್ತುಸಾವಿರವರ್ಷ ದೊರೆತನಮಾಡಿದನು. ಅವನ ಪುತ್ರನ ಹೆಸರು ಜಾಮಘ.

೫೭. ಜಾಮಘರಾಜನು ತಂದೆಯಂತೆ ಹತ್ತುಸಾವಿರವರ್ಷ ದೊರೆತನ ಮಾಡಿದನು. ಆತನ ಕುಮಾರನೇ ವಿದರ್ಭ. ವಿದರ್ಭಭೂಪನು ತಂದೆಯಂತೆ ಹತ್ತುಸಾವಿರವರ್ಷ ರಾಜ್ಯಭಾರ ಮಾಡಿದನು. ಅವನ ಮಗನೇ ಕ್ರಾಥ.

೫೮. ಕ್ರಾಥರಾಜನು ತಂದೆಯಂತೆ ಹತ್ತುಸಹಸ್ರವರ್ಷ ರಾಜ್ಯಭಾರ ಮಾಡಿದನು. ಅವನ ಮಗನ ಹೆಸರು ಕುಂತಿಭೋಜ.

ಪೂರುರ್ದೈತ್ಯಸುತಾಪುತ್ರಃ ಪಾತಾಲೇ ವೃಷಪರ್ವಣಃ ।
ಉಷಿತ್ವಾ ನಗರೇ ತಸ್ಮಿನ್ ಮಾಯಾವಿದ್ಯಸ್ತತೋಽಭವತ್ ।
ಪ್ರಯಾಗಸ್ಯ ಪ್ರತಿಷ್ಠಾನೇ ಪುರೇ ರಾಜ್ಯಮಥಾಕರೋತ್ ॥ ೫೯ ॥

ದಶವರ್ಷಸಹಸ್ರಾಣಿ ರಾಜ್ಯಂ ಕೃತ್ವಾ ದಿವಂ ಗತಃ ।
ದೇವೀಭಕ್ತಃ ಸ ನೃಪತಿಸ್ತತ್ಪುತ್ರೋ ಜನಮೇಜಯಃ ॥ ೬೦ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಪ್ರಚಿನ್ವಾಂಸ್ತತ್ಸುತೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಪ್ರವೀರಸ್ತನಯೋಽಭವತ್ ॥ ೬೧ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ನಭಸ್ಯಸ್ತನಯೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಭವದಸ್ತತ್ಸುತಃ ಸ್ಮೃತಃ ॥ ೬೨ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಸುದ್ಯುಮ್ನಸ್ತನಯೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಪುತ್ರೋ ಬಾಹುಗರಃ ಸ್ಮೃತಃ ॥ ೬೩ ॥

---

೫೯-೬೦. ವೃಷಪರ್ವ ಪುತ್ರಿಯಾದ ಶರ್ಮಿಷ್ಠೆಯಲ್ಲಿ ಯಯಾತಿಯಿಂದ ಜನಿಸಿದ ಸುತನಾದ ಪೂರುವು ಪಾತಾಳದಲ್ಲಿ ತನ್ನ ಅಜ್ಜನಾದ ವೃಷಪರ್ವನ ನಗರದಲ್ಲಿ ವಾಸಮಾಡಿ, ಮಾಯಾವಿಶಾರದನಾದನು. ಬಳಿಕ ಪ್ರಯಾಗದ ಸಮೀಪದಲ್ಲಿರುವ ಪ್ರತಿಷ್ಠಾನಪುರದಲ್ಲಿ ಆಳಿದನು. ದೇವೀಭಕ್ತನಾದ ಆ ಪುರುವು ಹತ್ತುಸಾವಿರವರ್ಷ ರಾಜ್ಯವನ್ನಾಳಿ ಸ್ವರ್ಗವನ್ನು ಸೇರಿದನು. ಜನಮೇಜಯನೆಂಬವನು ಆತನ ಮಗ.

೬೧-೬೬. ಜನಮೇಜಯರಾಜನು ತಂದೆಯಂತೆಯೇ ಹತ್ತು ಸಾವಿರ ವರ್ಷ ಆಳಿದನು. ಆತನ ಮಗನು ಪ್ರಾಚಿನ್ವಂತ. ಪ್ರಾಚಿನ್ವಂತ ಭೂಪತಿಯು ತಂದೆಯಂತೆಯೇ ಹತ್ತುಸಾವಿರವರ್ಷ ಆಳಿದನು. ಆತನ ಮಗನೇ ಪ್ರವೀರ. ಪ್ರವೀರನು ತಂದೆಯಂತೆಯೇ ಹತ್ತುಸಹಸ್ರ ವರ್ಷಕಾಲ ಆಳಿದನು. ಅವನ ಮಗ ನಭಸ್ಯ. ನಭಸ್ಯ ಜನಪಾಲನೂ ತಂದೆಯಂತೆಯೇ ಹತ್ತುಸಹಸ್ರ ವರ್ಷಗಳು ಆಳಿದನು. ಆತನ ಪುತ್ರನೇ ಭವದ. ಭವದರಾಜನು ಹತ್ತುಸಾವಿರ ವರ್ಷಕಾಲ ತಂದೆಯಂತೆಯೇ ರಾಜ್ಯಭಾರ ಮಾಡಿದನು. ಅವನ ಮಗ ಸುದ್ಯುಮ್ನ. ಸುದ್ಯುಮ್ನಭೂಪಾಲನು ತಂದೆಯಂತೆಯೇ ಹತ್ತುಸಾವಿರ ವರ್ಷ ರಾಜ್ಯಪರಿಪಾಲನ ಮಾಡಿದನು. ಅವನ ಪುತ್ರನೇ ಬಾಹುಗರ. ಬಾಹುಗರರಾಜನು ತಂದೆಯಂತೆ ಹತ್ತುಸಾವಿರವರ್ಷ ದೊರೆ

ಪಿತುಸ್ತುಲ್ಯಂ ಕೃತಂ ರಾಜ್ಯಂ ಸಂಯಾತಿಸ್ತನಯೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಧನಯಾತಿಸ್ತತೋಽಭವತ್ ॥ ೬೪ ॥

ಪಿತುಸ್ತುಲ್ಯಂ ಕೃತಂ ರಾಜ್ಯಮೈಂದ್ರಾಶ್ವಸ್ತನಯೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾದ್ರಂತಿನರಃ ಸುತಃ ॥ ೬೫ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ತತ್ಪುತ್ರಃ ಸುತಪಾಃ ಸ್ಮೃತಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಸಂವರಣಸ್ತನಯಸ್ತತಃ ॥ ೬೬ ॥

ಹಿಮಾಲಯಗಿರೌ ಪ್ರಾಪ್ತೇ ತಪಃ ಕರ್ತುಂ ಮನೋ ದಧತ್ ।
ಶತವರ್ಷಂ ತತಃ ಸೂರ್ಯಸ್ತಪತೀಂ ನಾಮ ಕನ್ಯಕಾಂ ॥ ೬೭ ॥

ಸಂವರಣಾಯ ದದೌ ತುಷ್ಟೋ ರವಿಲೋಕಂ ನೃಪೋ ಗತಃ ।
ತತೋ ಮಾಯಾಪ್ರಭಾವೇನ ಯುಗಂ ಪ್ರಲಯಮಾಗತಂ ॥ ೬೮ ॥

---

ತನ ಮಾಡಿದನು ಅವನ ತನುಜನು ಸಂಯಾತಿ. ಸಂಯಾತಿಯೂ ತಂದೆಯಂತೆ ಹತ್ತುಸಾವಿರ ವರ್ಷಕಾಲ ದೊರೆತನಮಾಡಿದನು. ಅವನ ಮಗ ಧನಯಾತಿಯೂ ತನ್ನ ಜನಕನಂತೆ ಹತ್ತುಸಾವಿರ ವರ್ಷ ರಾಜ್ಯಭಾರ ಮಾಡಿದನು ಅವನ ಮಗನೇ ಐಂದ್ರಾಶ್ವ ಐಂದ್ರಾಶ್ವರಾಜನೂ ತಂದೆಯಂತೆಯೇ ಹತ್ತುಸಾವಿರ ವರ್ಷ ರಾಜ್ಯ ಭಾರ ಮಾಡಿದನು. ಅವನ ಪುತ್ರನೇ ರಂತಿ. ರಂತಿಭೂಪನು ತಂದೆಯಂತೆಯೇ ಹತ್ತು ಸಾವಿರ ವರ್ಷಗಳು ದೊರೆತನ ಮಾಡಿದನು ಅವನ ಮಗ ಸುತಪ. ಸುತಪನೂ ಸಹ ತಂದೆಯಂತೆಯೇ ಹತ್ತುಸಹಸ್ರವರ್ಷ ರಾಜ್ಯಭಾರ ಮಾಡಿದನು. ಅವನ ಪುತ್ರನೇ ಸಂವರ್ಣ.

೬೭-೬೮. ಸಂವರ್ಣನು ಹಿಮಾಲಯ ಪರ್ವತಕ್ಕೆ ಹೋಗಿದ್ದಾಗ ಅಲ್ಲಿ ತಪಸ್ಸನ್ನು ಮಾಡಲು ಮನವುಂಟಾಯಿತು. ಹಾಗೆಯೇ ಅಲ್ಲಿ ಒಂದುನೂರು ವರ್ಷ ಕಾಲ ತಪಸ್ಸನ್ನು ಮಾಡಿದನು. ಇದರಿಂದ ಸೂರ್ಯನು ತೃಪ್ತನಾಗಿ ತಪತಿಯೆಂಬ ತನ್ನ ಮಗಳನ್ನು ಸಂವರ್ಣನಿಗೆ ಪತ್ನಿಯನ್ನಾಗಿ ಕೊಟ್ಟನು. ಸಂವರ್ಣರಾಜನು ಕಡೆಗೆ ಸೂರ್ಯಲೋಕವನ್ನು ಸೇರಿದನು. ಬಳಿಕ ಮಾಯೆಯ ಮಹಿಮೆಯಿಂದ ಯುಗಾಂತ ಪ್ರಳಯವುಂಟಾಯಿತು.

ಚತ್ವಾರಃ ಸಾಗರಾ ವೃದ್ಧಾ ಭಾರತಂ ಕ್ಷಯತಾಂ ಗತಂ ।
ದ್ವಿವರ್ಷೇ ಸಾಗರೇ ಭೂಮಿರುಷಿತ್ವಾ ಭೂಧರೈಸ್ಸಹ ॥ ೬೯ ॥

ಮಹಾವಾಯುಪ್ರಭಾವೇನ ಸಾಗರಾಃ ಶುಷ್ಕತಾಂ ಗತಾಃ ।
ಅಗಸ್ತ್ಯತೇಜಸಾ ಭೂಮಿಃ ಸ್ಥಲೀ ಭೂತ್ವಾ ಪ್ರದೃಶ್ಯತೇ ॥ ೭೦ ॥

ಪಂಚವರ್ಷಾಂತರೇ ಭೂಮಿರ್ವೃಕ್ಷದೂರ್ವಾದಿಸಂಯುತಾ ।
ಸೂರ್ಯಾಜ್ಞಯಾ ಚ ಸಂವರ್ಣಸ್ತಪತ್ಯಾ ಮುನಿನಾ ಸಹ ॥ ೭೧ ॥

ವಶಿಷ್ಠೇನ ತ್ರಿವರ್ಣೈಶ್ಚ ಮುಖ್ಯೈಃ ಸಾರ್ಧಂ ಸಮಾಗತಃ ॥ ೭೨ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ತ್ರೇತಾಯುಗ ಭೂಪಾಖ್ಯಾನಂ ನಾಮ ದ್ವಿತೀಯೋಧ್ಯಾಯಃ.

---

೬೯-೭೦. ಮಹಾವಾಯುಪ್ರಭಾವದಿಂದ ನಾಲ್ಕು ಸಾಗರಗಳೂ ಉಕ್ಕಿದುವು ಭಾರತವರ್ಷವು ನಾಶವಾಯಿತು. ಭೂಮಿಯು ಪರ್ವತಗಳೊಡನೆ ಎರಡುವರ್ಷ ಕಾಲ ಸಾಗರದಲ್ಲಿ ಮುಳುಗಿದ್ದಿತು. ಬಳಿಕ ಅಗಸ್ತ್ಯರ ಮಹಿಮೆಯಿಂದ ಸಾಗರಗಳು ಬತ್ತಿಹೋದುವು. ಭೂಮಿಯು ನೆಲವಾಗಿ ಕಾಣಿಸಿತು.

೭೧-೭೨. ಬಳಿಕ ಐದು ವರ್ಷಗಳಲ್ಲಿ ಭೂಮಿಯು ಮರಗಿಡ ಗರಿಕೆ ಹುಲ್ಲು ನೊದಲಾದವುಗಳೆಲ್ಲಾ ಬೆಳೆಯುವಂತಾಯಿತು. ಸಂವರ್ಣನು ಸೂರ್ಯನ ಅಪ್ಪಣೆಯಂತೆ ತನ್ನ ಪತ್ನಿಯಾದ ತಪತೀ ಸಮೇತನಾಗಿ ವಸಿಷ್ಠಮುನಿಯೊಡನೆಯೂ ಬ್ರಹ್ಮಕ್ಷತ್ರಿಯ ವೈಶ್ಯರೊಡನೆಯೂ ತನ್ನ ರಾಜಧಾನಿಗೆ ಬಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದಲ್ಲಿ ಸೂತಮುನಿಯು ಶೌನಕ ನಿಗೆ ವೈವಸ್ವತಮನ್ವಂತರದ ಇಪ್ಪತ್ತೆಂಟನೆಯ ಚತುರ್ಯುಗದಲ್ಲಿ ಸೇರಿದ ತ್ರೇತಾಯುಗದಲ್ಲಿ ಭಾರತ ವರ್ಷದಲ್ಲಿ ಆಳಿದ ರಾಜರ ವಿಚಾರವನ್ನು ಸಂಗ್ರಹವಾಗಿ ಹೇಳುವಲ್ಲಿಗೆ ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಪ್ರಥಮಖಂಡೇ

## ತೃತೀಯೋಽಧ್ಯಾಯಃ

॥ ಶೌನಕ ಉವಾಚ ॥

ಸಂವರ್ಣಶ್ಚ ಮಹೀಪಾಲಃ ಕಸ್ಮಿನ್ಕಾಲೇ ಸಮಾಗತಃ ।
ಲೋಮಹರ್ಷಣ ಮೇ ಬ್ರೂಹಿ ದ್ವಾಪರಸ್ಯ ನೃಪಾಂಸ್ತಥಾ ॥ ೧ ॥

॥ ಸೂತ ಉವಾಚ ॥

ಭಾದ್ರಸ್ಯ ಕೃಷ್ಣಪಕ್ಷೇ ತು ತ್ರಯೋದಶ್ಯಾಂ ಭೃಗೌ ದಿನೇ ।
ಸಂವರ್ಣೋ ಮುನಿಭಿಸ್ಸಾರ್ಧಂ ಪ್ರತಿಷ್ಠಾನೇ ಸಮಾಗತಃ ॥ ೨ ॥

ಪತಿಷ್ಠಾನಂ ಕೃತಂ ರಮ್ಯಂ ಪಂಚಯೋಜನಮಾಯುತಂ ।
ಅರ್ಧಕ್ರೋಶೋನ್ನತಂ ಹರ್ಮ್ಯಂ ರಚಿತಂ ವಿಶ್ವಕರ್ಮಣಾ ॥ ೩ ॥

---

## ಎರಡನೆಯ ಅಧ್ಯಾಯ

೧. ಶೌನಕನು ಕೇಳಿಕೊಳ್ಳುತ್ತಾನೆ—ರೋಮಹರ್ಷಣನೇ! ಸಂವರ್ಣರಾಜನು ಯಾವ ಕಾಲದಲ್ಲಿ ರಾಜಧಾನಿಗೆ ಹಿಂದಿರುಗಿ ಬಂದನೆಂಬುದನ್ನೂ ದ್ವಾಪರಯುಗದ ರಾಜರನ್ನೂ ನನಗೆ ಹೇಳು.

೨-೩. ಸೂತಮುನಿವರ್ಯನು ಶೌನಕಾದಿ ಮುನಿಗಳನ್ನು ಕುರಿತು ಹೇಳುತ್ತಾನೆ. ಸಂವರ್ಣನು ಭಾದ್ರಪದಮಾಸದ ಕೃಷ್ಣಪಕ್ಷದ ತ್ರಯೋದಶೀ ಶುಕ್ರವಾರ ಮುನಿಗಳೊಡನೆ ಮತ್ತೆ ಪ್ರತಿಷ್ಠಾನಪುರಕ್ಕೆ ಬಂದನು. ವಿಶ್ವಕರ್ಮನು ಪ್ರತಿಷ್ಠಾನಪುರವನ್ನು ರಮ್ಯವಾಗಿ ಮಾಡಿದುದಲ್ಲದೆ ಅಲ್ಲಿ ಐದುಯೋಜನ ವಿಸ್ತಾರವೂ ಅರ್ಧ ಹರಿದಾರಿಯಷ್ಟು ಉನ್ನತವೂ ಆದ ಉಪ್ಪರಿಗೆಯ ಮನೆಯನ್ನು ರಚಿಸಿದನು.

ಬುದ್ಧಿವಂಶೇ ಪ್ರಸೇನಸ್ಯ ಸಕ್ತ್ಯಾಯಾಃ ಭೂಪತಿಃ ಕೃತಃ ।
ಯದುವಂಶೇ ಸಾತ್ವತಶ್ಚ ಮಧುರಾಭೂಪತಿಃ ಕೃತಃ ॥ ೪ ॥

ಮ್ಲೇಚ್ಛವಂಶೇ ಶ್ಮಶ್ರುಪಾಲೋ ಮರುದೇಶಸ್ಯ ಭೂಪತಿಃ ।
ಕ್ರಮೇಣ ವರ್ಧಿತಾ ಭೂಪಾಃ ಪ್ರಜಾಭಿಃ ಸಹಿತಾ ಭುವಿ ॥ ೫ ॥

ದಶವರ್ಷಸಹಸ್ರಾಣಿ ಸಂವರ್ಣೋ ಭೂಪತಿಃ ಸ್ಮೃತಃ ।
ತಸ್ಮಾತ್ಮಜೋಽಯಮರ್ಚಾಜ್ಞಃ ಕೃತಂ ರಾಜ್ಯಂ ಪಿತುಸ್ಸಮಂ ॥ ೬ ॥

ತಸ್ಯ ಪುತ್ರಃ ಸೂರಿಜಾಪೀ ಪಿತುರರ್ಧಂ ಚ ರಾಜ್ಯಕೃತ್ ।
ಸೂರ್ಯಯಜ್ಞಸ್ತಸ್ಯ ಪುತ್ರಃ ಸೌರಯಜ್ಞಪರಾಯಣಃ ॥ ೭ ॥

ಶತಹೀನಂ ಕೃತಂ ರಾಜ್ಯಂ ತಸ್ಮಾದಾದಿತ್ಯವರ್ಧನಃ ।
ಶತಹೀನಂ ಕೃತಂ ರಾಜ್ಯಂ ದ್ವಾದಶಾತ್ಮಾ ತು ತತ್ಸುತಃ ॥ ೮ ॥

---

೪-೬. ಬುದ್ಧಿವಂಶದಲ್ಲಿ ಜನಿಸಿದ ಪ್ರಸೇನನೆಂಬುವನು ಸಕ್ತ್ಯಾಪಟ್ಟಣಕ್ಕೆ ರಾಜನಾದನು. ಯದುವಂಶದ ಸಾತ್ವತನೆಂಬುವನು ಮಧುರೆಗೆ ರಾಜನಾದನು. ಮ್ಲೇಚ್ಛವಂಶದ ಶ್ಮಶ್ರುಪಾಲನೆಂಬುವನು ಮರುದೇಶದ ರಾಜನಾದನು. ಈ ರಾಜ್ಯಗಳಲ್ಲಿ ಕ್ರಮವಾಗಿ ಪ್ರಜೆಗಳೊಡನೆ ರಾಜರೂ ಅಭಿವೃದ್ಧಿಗೆ ಬಂದರು. ಸಂವರ್ಣನು ಹತ್ತುಸಾವಿರ ವರ್ಷ ದೊರೆಯಾಗಿದ್ದನು. ಆತನ ಮಗನಾದ ಅರ್ಚಾಜ್ಞನೆಂಬುವನು ತಂದೆಯಂತೆಯೇ ಹತ್ತುಸಾವಿರವರ್ಷ ರಾಜ್ಯವನ್ನಾಳಿದನು.

೭ ಅರ್ಚಾಜ್ಞನ ಪುತ್ರನಾದ ಸೂರಿಜಾಪಿಯು ತಂದೆಯ ಅರ್ಧದಷ್ಟುಕಾಲ ಎಂದರೆ ಐದುಸಾವಿರ ವರ್ಷಕಾಲ ದೊರೆತನವನ್ನು ಮಾಡಿದನು. ಸೂರ್ಯಯಜ್ಞಾಸಕ್ತನಾದ ಸೂರ್ಯಯಜ್ಞನೆಂಬುವನು ಆತನ ಪುತ್ರನು.

೮. ಸೂರ್ಯಯಜ್ಞನು ನಾಲ್ಕುಸಾವಿರದ ಒಂಭೈನೂರು ವರ್ಷ ರಾಜ್ಯವನ್ನಾಳಿದನು, ಬಳಿಕ ಅವನ ಮಗ ಆದಿತ್ಯವರ್ಧನನು ನಾಲ್ಕುಸಾವಿರದ ಎಂಟುನೂರು ವರ್ಷ ರಾಜ್ಯವನ್ನಾಳಿದನು. ಆತನ ಮಗನು ದ್ವಾದಶಾತ್ಮನೆಂಬುವನು.

**ಶತಹೀನಂ ಕೃತಂ ರಾಜ್ಯಂ ತಸ್ಮಾಜ್ಜಾತೋ ದಿವಾಕರಃ ।**
**ಶತಹೀನಂ ಕೃತಂ ರಾಜ್ಯಂ ತಸ್ಮಾಜ್ಜಾತಃ ಪ್ರಭಾಕರಃ ॥ ೯ ॥**

**ಶತಹೀನಂ ಕೃತಂ ರಾಜ್ಯಂ ಭಾಸ್ವದಾತ್ಮಾ ಚ ತತ್ಸುತಃ ।**
**ಶತಹೀನಂ ಕೃತಂ ರಾಜ್ಯಂ ವಿವಸ್ವಜ್ಞಸ್ತದಾತ್ಮಜಃ ॥ ೧೦ ॥**

**ಶತಹೀನಂ ಕೃತಂ ರಾಜ್ಯಂ ಹರಿದಶ್ವಾರ್ಚನಸ್ತತಃ ।**
**ಶತಹೀನಂ ಕೃತಂ ರಾಜ್ಯಂ ತಸ್ಮಾದ್ವೈಕರ್ತನಃ ಸುತಃ ॥ ೧೧ ॥**

**ಶತಹೀನಂ ಕೃತಂ ರಾಜ್ಯಂ ತಸ್ಮಾದರ್ಕೇಷ್ಟಿಮಾನ್ಸುತಃ ।**
**ಶತಹೀನಂ ಕೃತಂ ರಾಜ್ಯಂ ತಸ್ಮಾನ್ಮಾರ್ತಂಡವತ್ಸಲಃ ॥ ೧೨ ॥**

---

೯. ದ್ವಾದಶಾತ್ಮನು ನೂರುವರ್ಷ ಕಡಿಮೆಯಾಗಿ (೪೭೦೦ ವರ್ಷ) ಆಳಿದನು ಆತನ ಪುತ್ರನು ದಿವಾಕರ. ದಿವಾಕರನು ಇನ್ನೂ ನೂರುವರ್ಷ ಕಡಿಮೆ ಎಂದರೆ ೪೬೦೦ ವರ್ಷ ಆಳಿದನು. ಆತನ ಮಗ ಪ್ರಭಾಕರ.

೧೦. ಪ್ರಭಾಕರನು ಆದಕ್ಕಿಂತ ನೂರುವರ್ಷ ಕಡಿಮೆಯಾಗಿ ಎಂದರೆ ೪೫೦೦ ವರ್ಷ ಆಳಿದನು. ಅವನ ಪುತ್ರನ ಹೆಸರು ಭಾಸ್ವದಾತ್ಮ. ಭಾಸ್ವದಾತ್ಮನು ತಂದೆಗಿಂತ ನೂರುವರ್ಷ ಕಡಿಮೆ ಎಂದರೆ ೪೪೦೦ ವರ್ಷ ಆಳಿದನು. ಅವನ ಮಗ ವಿವಸ್ವಜ್ಞ.

೧೧. ವಿವಸ್ವಜ್ಞನು ಅವನಿಗಿಂತ ನೂರುವರ್ಷ ಕಡಿಮೆಯಾಗಿ (೪೩೦೦ ವರ್ಷ) ಆಳಿದನು. ಆತನ ಮಗ ಹರಿದಶ್ವಾರ್ಚನ. ಹರಿದಶ್ವಾರ್ಚನನು ತಂದೆಗಿಂತ ನೂರು ವರ್ಷ ಕಡಿಮೆಯಾಗಿ (೪೨೦೦ ವರ್ಷ) ದೊರೆಯಾಗಿದ್ದನು ಅವನ ಪುತ್ರ ವೈಕರ್ತನ.

೧೨. ವೈಕರ್ತನನು ಅವನಿಗಿಂತ ನೂರುವರ್ಷ ಕಡಿಮೆ ಎಂದರೆ ೪೧೦೦ ವರ್ಷ ರಾಜ್ಯವಾಳಿದನು. ಅವನ ಮಗ ಅರ್ಕೇಷ್ಟಿಮಂತ. ಅರ್ಕೇಷ್ಟಿಮಂತನು ತಂದೆಗಿಂತ ನೂರುವರ್ಷ ಕಡಿಮೆ ಎಂದರೆ ೪೦೦೦ ವರ್ಷ ರಾಜ್ಯವಾಳಿದನು. ಅವನ ಮಗ ಮಾರ್ತಂಡವತ್ಸಲ.

ಶತಹೀನಂ ಕೃತಂ ರಾಜ್ಯಂ ಮಿಹಿರಾರ್ಥಸ್ತು ತತ್ಸುತಃ ।
ಶತಹೀನಂ ಕೃತಂ ರಾಜ್ಯಂ ತಸ್ಮಾದರುಣಪೋಷಣಃ ॥ ೧೩ ॥

ಶತಹೀನಂ ಕೃತಂ ರಾಜ್ಯಂ ತಸ್ಮಾದ್ದ್ಯುಮಣಿವತ್ಸಲಃ ।
ಶತಹೀನಂ ಕೃತಂ ರಾಜ್ಯಂ ತಸ್ಮಾತ್ತರಣಿಯಜ್ಞಕಃ ॥ ೧೪ ॥

ಶತಹೀನಂ ಕೃತಂ ರಾಜ್ಯಂ ತಸ್ಮಾನ್ಮೈತ್ರೇಷ್ಟಿವರ್ಧನಃ ।
ಶತಹೀನಂ ಕೃತಂ ರಾಜ್ಯಂ ಚಿತ್ರಭಾನೂರ್ಜಕಸ್ತತಃ ॥ ೧೫ ॥

ಶತಹೀನಂ ಕೃತಂ ರಾಜ್ಯಂ ತಸ್ಮಾದ್ವೈರೋಚನಃ ಸ್ಮೃತಃ ।
ಶತಹೀನಂ ಕೃತಂ ರಾಜ್ಯಂ ಹಂಸನ್ಯಾಯೀ ತು ತತ್ಸುತಃ ॥ ೧೬ ॥

ಶತಹೀನಂ ಕೃತಂ ರಾಜ್ಯಂ ತಸ್ಮಾದ್ವೇದಪ್ರವರ್ಧನಃ ।
ಶತಹೀನಂ ಕೃತಂ ರಾಜ್ಯಂ ತಸ್ಮಾತ್ಸಾವಿತ್ರ ಉಚ್ಯತೇ ॥ ೧೭ ॥

---

೧೩. ಮಾರ್ತಂಡವತ್ಸಲನು ಅವನಿಗಿಂತ ನೂರುವರ್ಷ ಕಮ್ಮಿ (೩೯೦೦ ವರ್ಷ) ಆಳಿದನು. ಅವನ ಪುತ್ರ ಮಿಹಿರಾರ್ಥ, ಮಿಹಿರಾರ್ಥನು ತಂದೆಗಿಂತ ನೂರು ವರ್ಷ ಕಡಿಮೆ (೩೮೦೦ ವರ್ಷ) ಆಳಿದನು, ಅವನ ಮಗನೇ ಅರುಣಪೋಷಣ

೧೪. ಅರುಣಪೋಷಣನು ಮಿಹಿರಾರ್ಥನಿಗಿಂತಲೂ ನೂರುವರ್ಷ ಕಡಿಮೆಯಾಗಿ (೩೭೦೦ ವರ್ಷ) ಆಳಿದನು. ಬಳಿಕ ದ್ಯುಮಣಿವತ್ಸಲನು ಇನ್ನೂ ನೂರು ವರ್ಷ ಕಡಿಮೆಯಾಗಿ (೩೬೦೦ ವರ್ಷ) ಆಳಿದನು.

೧೫. ಅವನಾದಮೇಲೆ ತರಣಿಯಜ್ಞನು ಅವನಿಗಿಂತ ನೂರುವರ್ಷ ಕಡಿಮೆಯಾಗಿ (೩೫೦೦ ವರ್ಷ) ರಾಜ್ಯವಾಳಿದನು. ಆಮೇಲೆ ಮೈತ್ರೇಷ್ಟಿವರ್ಧನನು ಇನ್ನೂ ನೂರುವರ್ಷ ಕಡಿಮೆಯಾಗಿ (೩೪೦೦ ವರ್ಷ) ರಾಜ್ಯವಾಳಿದನು.

೧೬. ಅನಂತರ ಚಿತ್ರಭಾನುರ್ಜಕನು ಇನ್ನೂ ನೂರುವರ್ಷಗಳು ಕಡಿಮೆಯಾಗಿ (೩೩೦೦ ವರ್ಷಕಾಲ) ಆಳಿದನು. ಬಳಿಕ ವೈರೋಚನನು ಅವನಿಗಿಂತಲೂ ನೂರು ವರ್ಷಗಳ ಕಡಿಮೆಯಾಗಿ (೩೨೦೦ ವರ್ಷಗಳು) ಆಳಿದನು.

೧೭. ವೈರೋಚನಪುತ್ರ ಹಂಸನ್ಯಾಯಿಯು ತಂದೆಗಿಂತ ನೂರುವರ್ಷ ಕಡಿಮೆಯಾಗಿ ೩೧೦೦ ವರ್ಷ ಆಳಿದನು. ಬಳಿಕ ವೇದಪ್ರವರ್ಧನನು ಅವನಿಗಿಂತಲೂ ನೂರುವರ್ಷ ಕಡಿಮೆ ಎಂದರೆ ೩೦೦೦ ವರ್ಷಕಾಲ ಆಳಿದನು.

ಶತಹೀನಂ ಕೃತಂ ರಾಜ್ಯಂ ಧನಪಾಲಸ್ತತೋಽಭವತ್ ।
ಶತಹೀನಂ ಕೃತಂ ರಾಜ್ಯಂ ಮ್ಲೇಚ್ಛಹಂತಾ ಸುತಃ ಸ್ಮೃತಃ ॥ ೧೮ ॥

ಶತಹೀನಂ ಕೃತಂ ರಾಜ್ಯಂ ತಸ್ಮಾದಾನಂದವರ್ಧನಃ ।
ಶತಹೀನಂ ಕೃತಂ ರಾಜ್ಯಂ ಧರ್ಮಪಾಲಸುತಸ್ತತಃ ॥ ೧೯ ॥

ಶತಹೀನಂ ಕೃತಂ ರಾಜ್ಯಂ ಬ್ರಹ್ಮಭಕ್ತಸ್ಸುತಸ್ತತಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾದ್ಬ್ರಹ್ಮೇಷ್ಟಿವರ್ಧನಃ ॥ ೨೦ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾದಾತ್ಮಪ್ರಪೂಜಕಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಪರಮೇಷ್ಠೀಸುತಸ್ತತಃ ॥ ೨೧ ॥

---

೧೮. ಅನಂತರ ಸಾವಿತ್ರನು ತಂದೆಗಿಂತಲೂ ನೂರುವರ್ಷ ಕಡಮೆ ಎಂದರೆ ೨೯೦೦ ವರ್ಷಗಳು ಆಳಿದನು. ಆಮೇಲೆ ಧನಪಾಲನು ಅವನಿಗಿಂತಲೂ ನೂರು ವರ್ಷ ಕಡಮೆಯಾಗಿ (೨೮೦೦ ವರ್ಷಕಾಲ) ರಾಜ್ಯಭಾರಮಾಡಿದನು.

೧೯. ಧನಪಾಲನ ಮಗ ಮ್ಲೇಚ್ಛಹಂತೃವು ತಂದೆಗಿಂತ ನೂರುವರ್ಷ ಕಡಿಮೆಯಾಗಿ (೨೭೦೦ ವರ್ಷ) ಆಳಿದನು. ಬಳಿಕ ಆನಂದವರ್ಧನನು ಮ್ಲೇಚ್ಛಹಂತೃವಿಗಿಂತ ನೂರುವರ್ಷ ಕಡಿಮೆಯಾಗಿ (೨೬೦೦ ವರ್ಷ) ಆಳಿದನು.

೨೦. ಆನಂದವರ್ಧನನ ಮಗನಾದ ಧರ್ಮಪಾಲನು, ಆನಂದವರ್ಧನನಿಗಿಂತಲೂ ಒಂದುನೂರು ವರ್ಷ ಕಡಿಮೆಯಾಗಿ ಎಂದರೆ ೨೫೦೦ ವರ್ಷಗಳಕಾಲ ಆಳಿದನು. ಬ್ರಹ್ಮಭಕ್ತನೆಂಬುವನು ಧರ್ಮಪಾಲನ ಪುತ್ರ. ಬ್ರಹ್ಮಭಕ್ತನು ತಂದೆಯಂತೆಯೇ ೨೫೦೦ ವರ್ಷಗಳಕಾಲ ರಾಜ್ಯವನ್ನಾಳಿದನು, ಬ್ರಹ್ಮೇಷ್ಟಿವರ್ಧನನು ಬ್ರಹ್ಮಭಕ್ತನ ಪುತ್ರ.

೨೧. ಬ್ರಹ್ಮೇಷ್ಟಿವರ್ಧನನೂ ತಂದೆಯಂತೆಯೇ ೨೫೦೦ ವರ್ಷ ಆಳಿದನು. ಆತನ ಮಗನು ಆತ್ಮಪ್ರಪೂಜಕ. ಆತನೂ ತನ್ನ ತಂದೆಯಂತೆಯೇ ೨೫೦೦ ವರ್ಷ ಆಳಿದನು. ಆತನ ಪುತ್ರನೇ ಪರಮೇಷ್ಠಿ.

ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾದ್ಧೈರಣ್ಯವರ್ಧನಃ ।
ಶತಹೀನಂ ಕೃತಂ ರಾಜ್ಯಂ ಧಾತೃಯಾಜೀ ತು ತತ್ಸುತಃ ॥ ೨೨ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ತದ್ವಿಧಾತೃಪ್ರಪೂಜಕಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾದ್ವೈ ದ್ರುಹಿಣಃ ಕ್ರತುಃ ॥ ೨೩ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾದ್ವೈರಂಚ್ಯ ಉಚ್ಯತೇ ।
ಶತಹೀನಂ ಕೃತಂ ರಾಜ್ಯಂ ತತ್ಪುತ್ರಃ ಕಮಲಾಸನಃ ॥ ೨೪ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಸಮವರ್ತಾ ತು ತತ್ಸುತಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಶ್ರಾದ್ಧದೇವಸ್ತು ತತ್ಸುತಃ ॥ ೨೫ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾದ್ವೈ ಪಿತೃವರ್ಧನಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಸೋಮದತ್ತಸ್ತು ತತ್ಸುತಃ ॥ ೨೬ ॥

---

೨೨. ಪರಮೇಷ್ಠಿಯೂ ಕೂಡ ತಂದೆಯ ಹಾಗೆಯೇ ೨೫೦೦ ವರ್ಷ ಆಳಿದನು ಅವನ ಮಗನ ಹೆಸರು ಹೈರಣ್ಯವರ್ಧನ. ಹೈರಣ್ಯವರ್ಧನನು ತಂದೆ ಆಳಿದುದಕ್ಕಿಂತ ನೂರುವರ್ಷಗಳು ಕಡಿಮೆಯಾಗಿ ಎಂದರೆ ೨೪೦೦ ವರ್ಷ ದೊರೆತನ ಮಾಡಿದನು. ಧಾತೃಯಾಜಿಯೆಂಬುವನು ಹೈರಣ್ಯವರ್ಧನನ ಮಗ.

೨೩. ಧಾತೃಯಾಜಿಯು ತಂದೆಯಂತೆ ೨೪೦೦ ವರ್ಷ ಆಳಿದನು. ವಿಧಾತೃಪ್ರಪೂಜಕನೆಂಬುವನು ಆತನ ಮಗ. ವಿಧಾತೃಪ್ರಪೂಜಕನೂ ತಂದೆಯಂತೆ ೨೪೦೦ ವರ್ಷ ಆಳಿದನು. ದ್ರುಹಿಣಕ್ರತುವು ಆತನ ಪುತ್ರ

೨೪. ದ್ರುಹಿಣಕ್ರತುವೂ ಸಹ ತಂದೆಯಂತೆ ೨೪೦೦ ವರ್ಷ ರಾಜ್ಯವಾಳಿದನು. ವೈರಂಚ್ಯನು ಆತನ ಮಗ. ವೈರಂಚ್ಯನು ತಂದೆಗಿಂತ ನೂರುವರ್ಷ ಕಡಿಮೆಯಾಗಿ ಎಂದರೆ ೨೩೦೦ ವರ್ಷಕಾಲ ಆಳಿದನು.

೨೫. ವೈರಂಚ್ಯಪುತ್ರನಾದ ಕಮಲಾಸನನು ತಂದೆಯಂತೆ ೨೩೦೦ ವರ್ಷ ಆಳಿದನು ಆತನ ಪುತ್ರನು ಸಮವರ್ತ, ಸಮವರ್ತನೂ ತನ್ನ ತಂದೆಯಂತೆ ೨೩೦೦ ವರ್ಷಕಾಲ ರಾಜ್ಯವಾಳಿದನು. ಅವನ ಮಗ ಶ್ರಾದ್ಧದೇವ.

೨೬. ಶ್ರಾದ್ಧದೇವನೂ ಕೂಡ ತಂದೆಯಂತೆಯೇ ೨೩೦೦ ವರ್ಷಕಾಲ ರಾಜ್ಯವಾಳಿದನು. ಆತನ ಪುತ್ರ ಪಿತೃವರ್ಧನ. ಪಿತೃವರ್ಧನನೂ ತನ್ನ ತಂದೆಯಂತೆ ೨೩೦೦ ವರ್ಷಕಾಲ ರಾಜ್ಯವಾಳಿದನು. ಆತನ ಪುತ್ರ ಸೋಮದತ್ತ.

ಪಿತುಸ್ತುಲ್ಯಂ ಕೃತಂ ರಾಜ್ಯಂ ಸೌಮುದತ್ತಿಸ್ತದಾತ್ಮಜಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾದ್ವೈ ಸೋಮವರ್ಧನಃ ॥ ೨೭ ॥

ಪಿತುಸ್ತುಲ್ಯಂ ಕೃತಂ ರಾಜ್ಯಮವತಂಸಃ ಸುತಸ್ತತಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಪ್ರತಂಸಸ್ತನಯಸ್ತತಃ ॥ ೨೮ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಪರಾತಂಸಸ್ತದಾತ್ಮಜಃ ।
ಪಿತುಸ್ತುಲ್ಯಂ ಕೃತಂ ರಾಜ್ಯಮಯುತಂಸಸ್ತತೋಽಭವತ್ ॥ ೨೯ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಸಮಾತಂಸಸ್ತು ತತ್ಸುತಃ ।
ಪಿತುಸ್ತುಲ್ಯಂ ಕೃತಂ ರಾಜ್ಯಮನುತಂಸಸ್ತದಾತ್ಮಜಃ ॥ ೩೦ ॥

ಪಿತುಸ್ತುಲ್ಯಂ ಕೃತಂ ರಾಜ್ಯಮಧಿತಂಸಸ್ತತೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಮಭಿತಂಸಸ್ತದಾತ್ಮಜಃ ॥ ೩೧ ॥

---

೨೭. ಸೋಮದತ್ತನೂ ತನ್ನ ತಂದೆಯಂತೆ ೨೩೦೦ ವರ್ಷಗಳು ಆಳಿದನು ಅವನ ಮಗನೇ ಸೌಮುದತ್ತಿ. ಸೌಮುದತ್ತಿಯೂ ತಂದೆಯಂತೆಯೇ ೨೩೦೦ ವರ್ಷ ಕಾಲ ರಾಜ್ಯವಾಳಿದನು. ಆತನ ಮಗ ಸೋಮವರ್ಧನ.

೨೮. ಸೋಮವರ್ಧನನೂ ತಂದೆಯಂತೆಯೇ ೨೩೦೦ ವರ್ಷ ಆಳಿದನು. ಆತನ ಮಗನು ಅವತಂಸ. ಅವತಂಸನೂ ತನ್ನ ತಂದೆಯಂತೆಯೇ ೨೩೦೦ ವರ್ಷ ಆಳಿದನು. ಆತನ ಪುತ್ರನು ಪ್ರತಂಸ.

೨೯. ಪ್ರತಂಸನೂ ಕೂಡ ತಂದೆಯು ಆಳಿದಷ್ಟು ವರ್ಷಗಳೇ ರಾಜ್ಯವಾಳಿದನು ಅವನ ಮಗ ಪರಾತಂಸ. ಪರಾತಂಸನೂ ತನ್ನ ತಂದೆಯಂತೆ ೨೩೦೦ ವರ್ಷ ಆಳಿದನು. ಆತನ ಪುತ್ರನು ಅಯುತಂಸ.

೩೦. ಅಯುತಂಸನೂ ತನ್ನ ತಂದೆಯು ರಾಜ್ಯವಾಳಿದಷ್ಟು ವರ್ಷನೇ ಆಳಿದನು. ಅವನ ಮಗ ಸಮಾತಂಸ, ಸಮಾತಂಸನೂ ತಂದೆಯಂತೆಯೇ ೨೩೦೦ ವರ್ಷ ರಾಜ್ಯವಾಳಿದನು. ಅವನ ಮಗ ಅನುತಂಸ.

೩೧. ಅನುತಂಸನೂ ತನ್ನ ತಂದೆಯು ರಾಜ್ಯವಾಳಿದಷ್ಟುಕಾಲ ಆಳುತ್ತಿದ್ದನು. ಅವನ ಪುತ್ರ ಅಧಿತಂಸ. ಅಧಿತಂಸನೂ ತನ್ನ ತಂದೆಯಂತೆಯೇ ೨೩೦೦ ವರ್ಷ ರಾಜ್ಯವಾಳಿದನು. ಅವನ ಮಗ ಅಭಿತಂಸ

ಪಿತುಸ್ತುಲ್ಯಂ ಕೃತಂ ರಾಜ್ಯಂ ಸಮುತ್ತಂಸತೋऽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ತಂಸೋನಾಮಸ್ತುತೋऽಭವತ್ ॥ ೩೨ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ದುಷ್ಯಂತಸ್ತನಯಸ್ತತಃ ।
ಶಕುಂತಲಾಯಾಂ ತಸ್ಮಾಚ್ಚ ಭರತೋನಾಮ ಭೂಪತಿಃ ॥ ೩೩ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ದುಷ್ಯಂತಃ ಸ್ವರ್ಗತಿಂ ಗತಃ ।
ಭರತೋ ನಾಮ ತತ್ಪುತ್ರೋ ದೇವಪೂಜನತತ್ಪರಃ ॥ ೩೪ ॥

ಮಹಾಮಾಯಾಪ್ರಭಾವೇನ ಷಟ್ತ್ರಿಂಶದ್ವರ್ಷಜೀವನಂ ।
ಷಟ್ ತ್ರಿಂಶಾಬ್ದಸಹಸ್ರಾಣಿ ನೃಪಾಯುರ್ವರ್ಧಿತಂ ತಥಾ ॥ ೩೫ ॥

ತಸ್ಯ ನಾಮ್ನಾ ಸ್ಮೃತಃ ಖಂಡೋ ಭಾರತೋ ನಾಮ ವಿಶ್ರುತಃ ।
ತೇನ ಭೂಮೇರ್ವಿಭಾಗಶ್ಚ ಕೃತಂ ರಾಜ್ಯಂ ಪೃಥಕ್ ಚಿರಂ ॥ ೩೬ ॥

---

೩೨. ಅಭಿತಂಸನೂ ತನ್ನ ತಂದೆಯಂತೆಯೇ ೨೩೦೦ ವರ್ಷ ದೊರೆಯಾಗಿದ್ದನು ಅವನ ಮಗ ಸಮುತ್ತಂಸನೂ ತಂದೆಯಂತೆ ೨೩೦೦ ವರ್ಷಗಳು ರಾಜ್ಯಭಾರ ಮಾಡಿದನು. ಅವನ ಮಗನ ಹೆಸರು ತಂಸ.

೩೩. ತಂಸನೂ ತನ್ನ ತಂದೆಯು ಆಳಿದಷ್ಟು ವರ್ಷಗಳಕಾಲ ಆಧಿಪತ್ಯ ಮಾಡಿದನು. ಅವನ ಮಗ ದುಷ್ಯಂತ. ದುಷ್ಯಂತರಾಜನಿಗೆ ಶಕುಂತಲೆಯಲ್ಲಿ ಭರತನೆಂಬ ಮಗನು ಜನಿಸಿದನು.

೩೪. ದುಷ್ಯಂತನೂ ತನ್ನ ತಂದೆಯಂತೆಯೇ ೨೩೦೦ ವರ್ಷ ರಾಜ್ಯಭಾರವನ್ನು ವಹಿಸಿದ್ದು ಬಳಿಕ ಸ್ವರ್ಗಸ್ಥನಾದನು. ಆತನ ಪುತ್ರನಾದ ಭರತನು ದೇವಪೂಜಾಸಕ್ತನು.

೩೫-೩೬. ಭರತರಾಜನ ಆಯುಸ್ಸು ಮೂವತ್ತಾರು ವರ್ಷವಿದ್ದುದು ಮಹಾಮಾಯೆಯ ಮಹಿಮೆಯಿಂದ ಮೂವತ್ತಾರು ಸಾವಿರವರ್ಷಕ್ಕೆ ಹೆಚ್ಚಿತು. ಭರತನ ಹೆಸರಿನಿಂದ ಕರೆಯುವ ಖಂಡವೇ ಭರತಖಂಡವೆಂದೂ ಭಾರತಭೂಮಿಯೆಂದೂ ಪ್ರಖ್ಯಾತವಾಗಿದೆ. ಭರತನು ಭೂವಿಭಾಗವನ್ನು ಮಾಡಿ ಬೇರೆ ಬೇರೆ ರಾಜ್ಯವನ್ನಾಗಿ ಮಾಡಿದನು.

ದಿವ್ಯಂ ವರ್ಷಶತಂ ರಾಜ್ಯಂ ತಸ್ಮಾಜ್ಜಾತೋ ಮಹಾಬಲಃ ।
ದಿವ್ಯಂ ವರ್ಷಶತಂ ರಾಜ್ಯಂ ಭರದ್ವಾಜಸ್ತತೋಽಭವತ್ ॥ ೩೭ ॥

ದಿವ್ಯಂ ವರ್ಷಶತಂ ರಾಜ್ಯಂ ತಸ್ಮಾದ್ಭವನಮನ್ಯುಮಾನ್ ।
ಅಷ್ಟಾದಶಸಹಸ್ರಾಣಿ ಸಮಾ ರಾಜ್ಯಂ ಪ್ರಕೀರ್ತಿತಂ ॥ ೩೮ ॥

ಬೃಹತ್‌ಕ್ಷೇತ್ರಸ್ತತೋ ಹ್ಯಾಸೀತ್ಪಿತುಸ್ತುಲ್ಯಂ ಕೃತಂ ಪದಂ ।
ಸುಹೋತ್ರಸ್ತನಯಸ್ತಸ್ಯ ಪಿತುಸ್ತುಲ್ಯಂ ಕೃತಂ ಪದಂ ॥ ೩೯ ॥

ವೀತಿಹೋತ್ರಸ್ತಸ್ಯ ಸುತೋ ರಾಜ್ಯಂದಶಸಹಸ್ರಕಂ ।
ಯಜ್ಞಹೋತ್ರಸ್ತತೋಽಪ್ಯಾಸೀತ್ಪಿತುಸ್ತುಲ್ಯಂ ಕೃತಂ ಪದಂ ॥ ೪೦ ॥

ಶಕ್ರಹೋತ್ರಸ್ತತೋ ಜಾತಃ ಪಿತುಸ್ತುಲ್ಯಂ ಕೃತಂ ಪದಂ ।
ಪ್ರಸನ್ನೋ ಭಗವಾನಿಂದ್ರಸ್ತಂ ನೃಪಂ ಸ್ವರ್ಗಮಾಪ್ತವಾನ್ ॥ ೪೧ ॥

---

೩೭. ಭರತನು ದೇವಮಾನದ ನೂರುವರ್ಷ ಆಳಿದನು, ಆತನ ಪುತ್ರನು ಮಹಾಬಲ. ಆ ಮಹಾಬಲನೂ ದೇವಮಾನದ ನೂರುವರ್ಷಕಾಲ ಆಳಿದನು, ಅವನ ಪುತ್ರನು ಭರದ್ವಾಜ.

೩೮. ಭರದ್ವಾಜನೂ ದೇವಮಾನದ ನೂರುವರ್ಷಕಾಲ ರಾಜ್ಯವಾಳಿದನು, ಅವನ ಮಗನು ಭವನಮನ್ಯುಮಂತ, ಆತನು ಹದಿನೆಂಟುಸಾವಿರವರ್ಷ ರಾಜ್ಯವನ್ನಾಳಿದನು.

೩೯. ಬಳಿಕ ಆತನ ಮಗನಾದ ಬೃಹತ್‌ಕ್ಷೇತ್ರನೂ ತಂದೆಯಷ್ಟುಕಾಲವೇ ಆಳಿದನು, ಆಮೇಲೆ ಆತನ ಮಗನಾದ ಸುಹೋತ್ರನೂ ತಂದೆ ಆಳಿದಷ್ಟುಕಾಲ ರಾಜ್ಯವಾಳಿದನು.

೪೦. ಬಳಿಕ ಅವನ ಮಗನಾದ ವೀತಿಹೋತ್ರನು ಹತ್ತುಸಾವಿರ ವರ್ಷ ಆಳಿದನು. ಅನಂತರ ಆತನ ಪುತ್ರನಾದ ಯಜ್ಞಹೋತ್ರನೂ ಹತ್ತುಸಾವಿರ ವರ್ಷ ರಾಜ್ಯವಾಳಿದನು.

೪೧. ಆ ಬಳಿಕ ಅವನ ಕುಮಾರ ಶಕ್ರಹೋತ್ರನೂ ಹತ್ತುಸಾವಿರ ವರ್ಷಗಳು ದೊರೆಯಾಗಿದ್ದನು, ಪೂಜ್ಯನಾದ ಇಂದ್ರನು ಆತನಿಗೆ ಪ್ರಸನ್ನನಾಗಿ ಆ ದೊರೆಯನ್ನು ಸ್ವರ್ಗಕ್ಕೆ ಕರೆದುಕೊಂಡು ಹೋದನು.

ತದಾಯೋಧ್ಯಾಪತಿಃ ಶ್ರೀಮಾನ್ ಪ್ರತಾಪೇಂದ್ರೋ ಮಹಾಬಲಃ ।
ಭಾರತಂ ವರ್ಷಮುದಧದ್ವರ್ಷಂ ದಶಸಹಸ್ರಕಂ ॥ ೪೨ ॥

ಮಂಡಲೀಕಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ।
ವಿಜಯೇಂದ್ರಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ॥ ೪೩ ॥

ಧನುರ್ದೀಪ್ತಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ।
ಇಂದ್ರಾಜ್ಞಯಾ ಶಕ್ರಹೋತ್ರೋ ಘೃತಾಚ್ಯಾ ಸಹ ಭೂತಲೇ ॥ ೪೪ ॥

ಪ್ರಾಪ್ತವಾನ್ಸಧನುರ್ದೀಪ್ತಂ ಜಿತ್ವಾ ರಾಜ್ಯಮಚೀಕರತ್ ।
ಹಸ್ತೀನಾಮ ಸುತೋ ಜಾತ ಐರಾವತಸುತಂ ಗಜಂ ॥ ೪೫ ॥

ಆರುಹ್ಯ ಪಶ್ಚಿಮೇ ದೇಶೇ ಹಸ್ತಿನಾನಗರೀ ಕೃತಾ ।
ದಶಯೋಜನವಿಸ್ತೀರ್ಣಾ ಸ್ವರ್ಗಂಗಾಯಾಸ್ತಟೇ ಶುಭಾ ॥ ೪೬ ॥

---

೪೨. ಆ ಕಾಲದಲ್ಲಿ ಮಹಾಬಲಶಾಲಿಯೂ ಶ್ರೀಮಂತನೂ ಅಯೋಧ್ಯಾಧಿಪತಿಯೂ ಆದ ಪ್ರತಾಪೇಂದ್ರನೆಂಬುವನು ಹತ್ತುಸಾವಿರ ವರ್ಷಕಾಲ ಭಾರತವರ್ಷವನ್ನು ಆಳುತ್ತಿದ್ದನು.

೪೩. ಪ್ರತಾಪೇಂದ್ರನ ಮಗ ಮಂಡಲೀಕನೂ ಹತ್ತುಸಾವಿರವರ್ಷ ಆಳಿದನು ಮಂಡಲೀಕನ ಮಗ ವಿಜಯೇಂದ್ರನೂ ಹತ್ತುಸಹಸ್ರ ವರ್ಷಕಾಲ ಆಳಿದನು.

೪೪. ವಿಜಯೇಂದ್ರನ ಮಗ ಧನುರ್ದೀಪ್ತನೂ ಹತ್ತುಸಹಸ್ರ ವರ್ಷಗಳು ರಾಜ್ಯಭಾರ ಮಾಡಿದನು.

೪೫-೪೬. ಬಳಿಕ ಇಂದ್ರನ ಆಜ್ಞೆಯಿಂದ ಶಕ್ರಹೋತ್ರನು ಅಪ್ಸರ ಸ್ತ್ರೀಯಾದ ಘೃತಾಚಿಯೆಂಬುವಳೊಡನೆ ಮತ್ತೆ ಭೂಮಿಗೆ ಬಂದು ತಾನು ಪಡೆದಿದ್ದ ಹೊಳೆಯುವ ಬಿಲ್ಲಿನಿಂದ ಇಲ್ಲಿನ ರಾಜರನ್ನು ಜಯಿಸಿ, ತಾನೇ ರಾಜ್ಯಭಾರಮಾಡಿದನು. ಆತನಿಗೆ ಹಸ್ತಿಯೆಂಬ ಹೆಸರಿನ ಪುತ್ರನುದಿಸಿದನು. ಆತನು ಐರಾವತದಿಂದುಸಿದ ಆನೆಯನ್ನು ಏರಿ ಪಶ್ಚಿಮದೇಶದಲ್ಲಿ ಗಂಗಾನದಿಯ ದಡದಲ್ಲಿ ಹತ್ತುಯೋಜನ ವಿಸ್ತಾರವುಳ್ಳ ಹಸ್ತಿನಾಪಟ್ಟಣವನ್ನು ನಿರ್ಮಿಸಿದನು.

ರಾಜ್ಯಂ ದಶಸಹಸ್ರಂ ಚ ತತ್ರ ವಾಸಂ ಚಕಾರ ಸಃ ।
ತತ್ಪುತ್ರಸ್ತ್ವಜಮೀಢಾಖ್ಯಃ ಪಿತುಸ್ತುಲ್ಯಂ ಕೃತಂ ಪದಂ ॥ ೪೭ ॥

ತಸ್ಮಾಜ್ಜಾತೋ ರಕ್ಷಪಾಲಃ ಪಿತುಸ್ತುಲ್ಯಂ ಕೃತಂ ಪದಂ ।
ಸುಶಮ್ಯರ್ಣಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ॥ ೪೮ ॥

ತಸ್ಯ ಪುತ್ರಃ ಕುರುರ್ನಾಮ ಪಿತುರರ್ಧಂ ಕೃತಂ ಪದಂ ।
ಇಂದ್ರಸ್ಯ ವರದಾನೇನ ಸದೇಹಃ ಸ್ವರ್ಗಮಾಗತಃ ॥ ೪೯ ॥

ತದಾ ಸಾತ್ವತವಂಶೇಽಸ್ಮಿನ್ ವೃಷ್ಣಿರ್ನಾಮ ಮಹಾಬಲಃ ।
ಮಥುರಾಯಾಂ ಸ್ಥಿತೋ ರಾಜ್ಯಂ ಸರ್ವಂ ಸ್ವವಶಮಾಪ್ತವಾನ್ ॥ ೫೦ ॥

ಭಗವದ್ವರದಾನೇನ ಹರೇರದ್ಭುತಕರ್ಮಣಃ ।
ಪಂಚವರ್ಷಸಹಸ್ರಂ ವೈ ಸರ್ವಂ ರಾಜ್ಯಂ ವಶೀಕೃತಂ ॥ ೫೧ ॥

---

೪೭. ಹಸ್ತಿರಾಜನು ಹಸ್ತಿನಾನಗರದಲ್ಲಿ ವಾಸಮಾಡುತ್ತ ಹತ್ತುಸಾವಿರವರ್ಷ ರಾಜ್ಯಭಾರ ಮಾಡಿದನು. ಆತನ ಮಗನಾದ ಅಜಮೀಢನೆಂಬುವನೂ ತಂದೆಯಷ್ಟೇ ಕಾಲ ಆಳಿದನು.

೪೮. ಅಜಮೀಢನ ಮಗನಾದ ರಕ್ಷಪಾಲನೂ ಹತ್ತುಸಾವಿರವರ್ಷ ಅಳಿದನು. ರಕ್ಷಪಾಲನ ಮಗನಾದ ಸುಶಮ್ಯರ್ಣನೂ ಹತ್ತುಸಾವಿರವರ್ಷ ರಾಜ್ಯವನ್ನಾಳಿದನು.

೪೯. ಸುಶಮ್ಯರ್ಣನ ಮಗನಾದ ಕುರುವೆಂಬುವನು ಐದುಸಾವಿರ ವರ್ಷ ಆಳಿದನು ಆತನು ಇಂದ್ರನ ವರದಿಂದ ಮನುಷ್ಯದೇಹದಿಂದಲೇ ಸ್ವರ್ಗವನ್ನು ಸೇರಿದನು.

೫೦-೫೧. ಆಗ ಸಾತ್ವತವಂಶದಲ್ಲಿ ಮಹಾಬಲಶಾಲಿಯಾಗಿದ್ದ ವೃಷ್ಣಿಯೆಂಬುವನು ಮಥುರೆಯಲ್ಲಿದ್ದುಕೊಂಡು ರಾಜ್ಯವೆಲ್ಲವನ್ನೂ ತನ್ನ ವಶಪಡಿಸಿಕೊಂಡನು. ಅದ್ಭುತಕಾರ್ಯಗಳನ್ನು ಮಾಡುವ ಭಗವಂತನಾದ ಹರಿಯ ವರದಿಂದ ಐದುಸಾವಿರ ವರ್ಷಕಾಲ ರಾಜ್ಯವೆಲ್ಲವೂ ಆತನ ಅಧೀನದಲ್ಲಿದ್ದಿತು.

ನಿರಾವೃತ್ತಿಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ।
ದಶಾರೀ ತಸ್ಯ ತನಯಃ ಪಿತುಸ್ತುಲ್ಯಂ ಕೃತಂ ಪದಂ ॥ ೫೨ ॥

ವಿಯೂಮುನಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ।
ಜೀಮೂತಸ್ತಸ್ಯ ತನಯಃ ಪಿತುಸ್ತುಲ್ಯಂ ಕೃತಂ ಪದಂ ॥ ೫೩ ॥

ವಿಕೃತಿಸ್ತಸ್ಯ ತನಯಃ ಪಿತುಸ್ತುಲ್ಯಂ ಕೃತಂ ಪದಂ ।
ತಸ್ಮಾಜ್ಜಾತೋ ಭೀಮರಥಃ ಪಿತುಸ್ತುಲ್ಯಂ ಕೃತಂ ಪದಂ ॥ ೫೪ ॥

ತಸ್ಮಾಜ್ಜಾತೋ ನವರಥಃ ಪಿತುಸ್ತುಲ್ಯಂ ಕೃತಂ ಪದಂ ।
ತಸ್ಮಾಜ್ಜಾತೋ ದಶರಥಃ ಪಿತುಸ್ತುಲ್ಯಂ ಕೃತಂ ಪದಂ ॥ ೫೫ ॥

ತಸ್ಮಾಜ್ಜಾತಶ್ಚ ಶಕುನಿಃ ಪಿತುಸ್ತುಲ್ಯಂ ಕೃತಂ ಪದಂ ।
ತಸ್ಮಾಜ್ಜಾತಃ ಕುಸುಂಭಶ್ಚ ಪಿತುಸ್ತುಲ್ಯಂ ಕೃತಂ ಪದಂ ॥ ೫೬ ॥

---

೫೨. ನಿರಾವೃತ್ತಿಯೆಂಬುವನು ಪೃಷ್ಣಿಯ ಪುತ್ರನು. ಆತನೂ ತಂದೆಯಂತೆಯೇ ಐದುಸಾವಿರವರ್ಷ ಆಳಿದನು. ದಶಾರಿಯೆಂಬುವನು ನಿರಾವೃತ್ತಿಯ ಪುತ್ರ. ಆತನೂ ಐದುಸಾವಿರವರ್ಷ ಆಳಿದನು.

೫೩. ದಶಾರಿಯ ಮಗನಾದ ವಿಯೂಮುನನೂ ತಂದೆಯಂತೆ ಐದುಸಾವಿರ ವರ್ಷ ಆಳಿದನು. ವಿಯೂಮುನನ ಪುತ್ರನಾದ ಜೀಮೂತನೂ ತಂದೆಯಂತೆ ಐದು ಸಾವಿರವರ್ಷಕಾಲ ಆಳಿದನು.

೫೪. ಜೀಮೂತನ ಮಗನಾದ ವಿಕೃತಿಯೂ ತನ್ನ ತಂದೆಯಂತೆ ಐದು ಸಾವಿರ ವರ್ಷಕಾಲ ಆಳಿದನು. ವಿಕೃತಿಯ ಕುಮಾರನಾದ ಭೀಮರಥನೂ ತನ್ನ ತಂದೆಯಂತೆ ಐದುಸಾವಿರ ವರ್ಷಗಳು ಆಳಿದನು.

೫೫. ಭೀಮರಥನ ಪುತ್ರನಾದ ನವರಥನೂ ಕೂಡ, ತಂದೆಯು ಆಳಿದಷ್ಟು ಕಾಲ ಎಂದರೆ ಐದುಸಾವಿರವರ್ಷ ಆಳಿದನು. ನವರಥನ ಸುತನಾದ ದಶರಥನೂ ಸಹ ತಂದೆಯು ಆಳಿದಂತೆ ಐದುಸಾವಿರವರ್ಷ ಆಳಿದನು.

೫೬. ದಶರಥನ ಮಗನಾದ ಶಕುನಿಯೂ ತಂದೆಯಂತೆ ಐದುಸಾವಿರ ವರ್ಷ ಆಳಿದನು. ಶಕುನಿಯ ಪುತ್ರನಾದ ಕುಸುಂಭನೂ ತಂದೆಯಂತೆ ಐದುಸಾವಿರ ವರ್ಷ ರಾಜ್ಯವಾಳಿದನು.

**ತಸ್ಮಾಜ್ಜಾತೋ ದೇವರಥಃ ಪಿತುಸ್ತುಲ್ಯಂ ಕೃತಂ ಪದಂ ।**
**ದೇವಕ್ಷೇತ್ರಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ॥ ೫೭ ॥**

**ತಸ್ಯ ಪುತ್ರೋ ಮಧುರ್ನಾಮ ಪಿತುಸ್ತುಲ್ಯಂ ಕೃತಂ ಪದಂ ।**
**ತತೋ ನವರಥಃ ಪುತ್ರಃ ಪಿತುಸ್ತುಲ್ಯಂ ಕೃತಂ ಪದಂ ॥ ೫೮ ॥**

**ಕುರುವತ್ಸಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ।**
**ತಸ್ಮಾದನುರಥಃ ಪುತ್ರಃ ಪಿತುಸ್ತುಲ್ಯಂ ಕೃತಂ ಪದಂ ॥ ೫೯ ॥**

**ಪುರುಹೋತ್ರಃ ಸುತಸ್ತಸ್ಯ ಪಿತುಸ್ತುಲ್ಯಂ ಕೃತಂ ಪದಂ ।**
**ವಿಚಿತ್ರಾಂಗಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ॥ ೬೦ ॥**

**ತಸ್ಮಾತ್ಸಾತ್ವತವಾನ್ಪುತ್ರಃ ಪಿತುಸ್ತುಲ್ಯಂ ಕೃತಂ ಪದಂ ।**
**ಭಜಮಾನಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ॥ ೬೧ ॥**

---

೫೭. ಕುಸುಂಭನ ಪ್ರಿಯಪುತ್ರ ದೇವರಥನೂ ತಂದೆಯಂತೆ ಐದುಸಾವಿರ ವರ್ಷ ರಾಜ್ಯಭಾರ ಮಾಡಿದನು. ದೇವರಥನ ಕುಮಾರನಾದ ದೇವಕ್ಷೇತ್ರನೂ ಸಹ ತಂದೆಗೆ ಸಮನೆನಿಸಿ ಐದುಸಾವಿರವರ್ಷ ಆಳಿದನು.

೫೮. ದೇವಕ್ಷೇತ್ರನ ಮಗನಾದ ಮಧುವೂ ತಂದೆಯಂತೆ ಐದುಸಾವಿರ ವರ್ಷ ಆಳಿದನು, ಮಧುವಿನ ಸುಪುತ್ರನಾದ ನವರಥನೂ ತಂದೆಯಂತೆ ಐದುಸಾವಿರ ವರ್ಷ ಆಳಿದನು,

೫೯. ನವರಥನ ನಂದನನಾದ ಕುರುವತ್ಸನೂ ತಂದೆಯಂತೆ ಐದುಸಾವಿರ ವರ್ಷ ಆಳಿದನು. ಕುರುವತ್ಸನ ಸುತನಾದ ಅನುರಥನೂ ತಂದೆಯಂತೆ ಐದುಸಾವಿರ ವರ್ಷ ರಾಜ್ಯವಾಳಿದನು.

೬೦, ಅನುರಥನ ಪುತ್ರನಾದ ಪುರುಹೋತ್ರನೂ ತಂದೆಯಂತೆ ಐದುಸಾವಿರ ವರ್ಷ ದೊರೆತನಮಾಡಿದನು. ಪುರುಹೋತ್ರನ ಮಗನಾದ ವಿಚಿತ್ರಾಂಗನೂ ತಂದೆಯ ಹಾಗೆಯೇ ಐದುಸಾವಿರ ವರ್ಷ ಆಳಿದನು.

೬೧. ವಿಚಿತ್ರಾಂಗನ ತನುಜ ಸಾತ್ವತವಂತನೂ ಕೂಡ ತಂದೆಯಂತೆ ಐದು ಸಾವಿರ ವರ್ಷ ಆಳಿದನು. ಸಾತ್ವತವಂತನ ಪುತ್ರ ಭಜಮಾನನೂ ಸಹ ತಂದೆಯಂತೆ ಐದುಸಾವಿರ ವರ್ಷ ಆಳಿದನು.

ವಿದೂರಥಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ।
ಸುರಭಕ್ತಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ॥ ೬೨ ॥

ತಸ್ಮಾಚ್ಚ ಸುಮನಾಃ ಪುತ್ರಃ ಪಿತುಸ್ತುಲ್ಯಂ ಕೃತಂ ಪದಂ ।
ತತಿಕ್ಷೇತ್ರಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ॥ ೬೩ ॥

ಸ್ವಾಯಂಭುವಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ।
ಹರಿದೀಪಕ ಏವಾಸೌ ತಸ್ಯ ರಾಜ್ಯಂ ಪಿತುಸ್ಸಮಂ ॥ ೬೪ ॥

ದೇವಮೇಧಾಸ್ಸುತಸ್ತಸ್ಯ ಪಿತುಸ್ತುಲ್ಯಂ ಕೃತಂ ಪದಂ ।
ಸುರಪಾಲಸ್ತದಾ ಜಾತಃ ಪಿತುಸ್ತುಲ್ಯಂ ಕೃತಂ ಪದಂ ॥ ೬೫ ॥

ಶಕ್ರಾಜ್ಞಯಾ ಕುರುಶ್ಚೈವ ದ್ವಾಪರತ್ರಿತಯೇ ಪದೇ ।
ವ್ಯತೀತೇ ಚ ಸುಕೇಶ್ಯಾಸ್ಸ ಸ್ವರ್ವೇಶ್ಯಾಯಾಃ ಪತಿಃ ಪ್ರಭುಃ ॥ ೬೬ ॥

---

೬೨. ಭಜಮಾನನ ಕುಮಾರನಾದ ವಿದೂರಥನೂ ತಂದೆಯಂತೆ ಐದು ಸಾವಿರ ವರ್ಷಕಾಲ ಆಳಿದನು. ವಿದೂರಥನ ಪ್ರೇಮಪುತ್ರ ಸುರಭಕ್ತನೂ ತಂದೆಯಂತೆ ಐದುಸಾವಿರ ವರ್ಷ ರಾಜ್ಯವಾಳಿದನು.

೬೩. ಸುರಭಕ್ತನ ಪುತ್ರನಾದ ಸುಮನಸನೂ ತಂದೆಯಂತೆ ಐದುಸಾವಿರ ವರ್ಷ ರಾಜ್ಯಭಾರಮಾಡಿದನು. ಸುಮನಸನ ಪುತ್ರನಾದ ತತಿಕ್ಷೇತ್ರನೂ ತಂದೆಯಂತೆ ಐದುಸಾವಿರ ವರ್ಷ ರಾಜ್ಯಭಾರ ಮಾಡಿದನು.

೬೪. ತತಿಕ್ಷೇತ್ರನ ಮಗನಾದ ಸ್ವಾಯಂಭುವನೂ ತಂದೆಯಂತೆ ಐದುಸಾವಿರ ವರ್ಷ ರಾಜ್ಯಭಾರ ಮಾಡಿದನು. ಸ್ವಾಯಂಭುವನ ಸುತನೆನಿಸಿದ ಹರಿದೀಪಕನೂ ತಂದೆಯಂತೆ ಐದುಸಾವಿರ ವರ್ಷ ರಾಜ್ಯವನ್ನಾಳಿದನು.

೬೫. ಹರಿದೀಪಕನ ಕುಮಾರ ದೇವಮೇಧಸನು ತಂದೆಯಂತೆಯೇ ಐದು ಸಾವಿರ ವರ್ಷ ರಾಜ್ಯವಾಳಿದನು. ದೇವಮೇಧಸನ ಪುತ್ರನಾದ ಸುರಪಾಲನೂ ತಂದೆಯಂತೆಯೇ ಐದುಸಾವಿರ ವರ್ಷ ದೊರೆತನ ಮಾಡಿದನು.

೬೬-೬೭. ಹಿಂದೆ ಸಶರೀರನಾಗಿ ಸ್ವರ್ಗಕ್ಕೆ ಹೋಗಿದ್ದ ಕುರುವೆಂಬ ರಾಜನು ದ್ವಾಪರಯುಗದ ಮೂರನೆಯ ಪಾದವು ಕಳೆಯಲಾಗಿ ದೇವೇಂದ್ರನ ಅಪ್ಪಣೆಯಂತೆ

ಆಗತೋ ಭಾರತೇ ಖಂಡೇ ಕುರುಕ್ಷೇತ್ರಂ ತದಾ ಕೃತಂ ।
ವಿಂಶಯೋಜನವಿಸ್ತೀರ್ಣಂ ಪುಣ್ಯಕ್ಷೇತ್ರಂ ಸ್ಮೃತಂ ಬುಧೈಃ ॥ ೬೭ ॥

ದ್ವಾದಶಾಬ್ದಸಹಸ್ರಂ ಚ ಕುರುಣಾ ರಾಜ್ಯಸಾತ್ಕೃತಂ ।
ತಸ್ಮಾಜ್ಜಹ್ನುಸ್ಸುತೋ ಜಾತಃ ಪಿತುಸ್ತುಲ್ಯಂ ಕೃತಂ ಪದಂ ॥ ೬೮ ॥

ತಸ್ಮಾಚ್ಚ ಸುರಥೋ ಜಾತಃ ಪಿತುಸ್ತುಲ್ಯಂ ಕೃತಂ ಪದಂ ।
ವಿದೂರಥಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ॥ ೬೯ ॥

ಸಾರ್ವಭೌಮಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ।
ಜಯಸೇನಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ॥ ೭೦ ॥

ತಸ್ಮಾದರ್ಣವ ಏವಾಸೌ ಪಿತುಸ್ತುಲ್ಯಂ ಕೃತಂ ಪದಂ ।
ಚತುಸ್ಸಾಗರಗಾಮೀ ಚ ಪಿತುಸ್ತುಲ್ಯಂ ಕೃತಂ ಪದಂ ॥ ೭೧ ॥

---

ಅಪ್ಸರ ವನಿತೆಯೂ ತನ್ನ ಪತ್ನಿಯೂ ಆದ ಸುಕೇಶಿಯೊಡನೆ ಭರತಖಂಡಕ್ಕೆಬಂದನು ಆಗ ಇಪ್ಪತ್ತುಯೋಜನ ವಿಸ್ತಾರವಾದ ಕುರುಕ್ಷೇತ್ರವು ಏರ್ಪಟ್ಟಿತು. ಅದನ್ನು ವಿದ್ವಾಂಸರು ಪುಣ್ಯಕ್ಷೇತ್ರವೆನ್ನುವರು.

೬೮-೬೯. ಕುರುರಾಜನು ಹನ್ನೆರಡುಸಾವಿರ ವರ್ಷ ರಾಜ್ಯವನ್ನು ಪರಿಪಾಲಿಸಿದನು. ಅವನ ಮಗ ಜಹ್ನುಸುತನೂ ಹನ್ನೆರಡುಸಾವಿರ ವರ್ಷಗಳಕಾಲ ರಾಜ್ಯವನ್ನು ಪರಿಪಾಲಿಸಿದನು. ಅವನ ಮಗನಾದ ಸುರಥನೂ ಹನ್ನೆರಡುಸಾವಿರ ವರ್ಷಗಳಕಾಲ ರಾಜ್ಯಭಾರ ಮಾಡುತ್ತಿದ್ದನು. ಸುರಥಪುತ್ರನಾದ ವಿದೂರಥನೂ ತಂದೆಯಂತೆ ಹನ್ನೆರಡುಸಾವಿರ ವರ್ಷಕಾಲ ರಾಜ್ಯಭಾರ ಮಾಡಿದನು.

೭೦-೭೧ ವಿದೂರಥನ ಮಗನಾದ ಸಾರ್ವಭೌಮನೂ ಹನ್ನೆರಡುಸಾವಿರ ವರ್ಷ ಆಳಿದನು. ಸಾರ್ವಭೌಮನ ಮಗನಾದ ಜಯಸೇನನೂ ಹನ್ನೆರಡುಸಾವಿರ ವರ್ಷ ಆಳಿದನು. ಜಯಸೇನನ ಮಗನಾದ ಅರ್ಣವನೆಂಬುವನೂ ಹನ್ನೆರಡುಸಾವಿರ ವರ್ಷ ಆಳಿದನು. ಬಳಿಕ ಚತುಸ್ಸಾಗರಗಾಮಿಯೆಂಬುವನೂ ಹನ್ನೆರಡುಸಾವಿರ ವರ್ಷ ಆಳಿದನು.

ಅಯುತಾಯುಸ್ತಸ್ಯ ಸುತೋ ರಾಜ್ಯಂ ದಶಸಹಸ್ರಕಂ ।
ಆಕ್ರೋಧನಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ॥ ೭೨ ॥

ತಸ್ಮಾದ್ದೃಕ್ಷಸ್ಸುತೋ ಜಾತಃ ಪಿತುಸ್ತುಲ್ಯಂ ಕೃತಂ ಪದಂ ।
ಭೀಮಸೇನಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ॥ ೭೩ ॥

ದಿಲೀಪಸ್ತಸ್ಯ ತನಯಃ ಪಿತುಸ್ತುಲ್ಯಂ ಕೃತಂ ಪದಂ ।
ಪ್ರತೀಪಸ್ತಸ್ಯ ತನಯೋ ರಾಜ್ಯಂ ಪಂಚಸಹಸ್ರಕಂ ॥ ೭೪ ॥

ಶಂತನುಸ್ತಸ್ಯ ಪುತ್ರಶ್ಚ ರಾಜ್ಯಮೇಕಸಹಸ್ರಕಂ ।
ವಿಚಿತ್ರವೀರ್ಯಸ್ತತ್ಪುತ್ರೋ ರಾಜ್ಯಂ ವೈ ದ್ವಿಶತಂ ಸಮಾಃ ॥ ೭೫ ॥

ಪಾಂಡುಶ್ಚ ತನಯೋ ಯಸ್ಮಿನ್ ರಾಜ್ಯಂ ಪಂಚಶತಂ ಕೃತಂ ।
ಯುಧಿಷ್ಠಿರಸ್ತಸ್ಯ ಸುತೋ ರಾಜ್ಯಂ ಪಂಚಾಶದಬ್ದಕಂ ॥ ೭೬ ॥

---

೭೨. ಚತುಸ್ಸಾಗರಗಾಮಿಯ ಮಗನಾದ ಅಯುತಾಯುವೆಂಬುವನು ಹತ್ತು ಸಾವಿರ ವರ್ಷ ರಾಜ್ಯರಕ್ಷಣೆ ಮಾಡಿದನು. ಆತನ ಮಗನಾದ ಅಕ್ರೋಧನನೂ ಹತ್ತುಸಾವಿರ ವರ್ಷ ರಾಜ್ಯವಾಳಿದನು.

೭೩. ಅಕ್ರೋಧನ ಪುತ್ರನಾದ ಋಕ್ಷನೂ ಹತ್ತುಸಾವಿರ ವರ್ಷ ರಾಜ್ಯವನ್ನಾಳಿದನು. ಋಕ್ಷನ ಪುತ್ರನಾದ ಭೀಮಸೇನನೂ ಹತ್ತುಸಾವಿರ ವರ್ಷಗಳು ರಾಜ್ಯಭಾರ ಮಾಡಿದನು.

೭೪. ಭೀಮಸೇನನ ಕುಮಾರನಾದ ದಿಲೀಪನೂ ಕೂಡ ಹತ್ತುಸಾವಿರವರ್ಷ ದೊರೆತನ ಮಾಡುತ್ತಿದ್ದನು. ದೀಲಿಪನ ಮಗನಾದ ಪ್ರತೀಪನು ಐದುಸಾವಿರವರ್ಷ ರಾಜ್ಯಭಾರ ಮಾಡಿದನು.

೭೫. ಪ್ರತೀಪನ ಮಗನಾದ ಶಂತನುವು ಒಂದುಸಾವಿರವರ್ಷ ರಾಜ್ಯವನ್ನು ಪರಿಪಾಲಿಸಿದನು: ಶಂತನುವಿನ ಕುಮಾರನಾದ ವಿಚಿತ್ರವೀರ್ಯನು ಇನ್ನೂರು ವರ್ಷ ರಾಜ್ಯಭಾರ ವಹಿಸಿದ್ದನು.

೭೬. ವಿಚಿತ್ರವೀರ್ಯನ ಪುತ್ರನಾದ ಪಾಂಡುರಾಜನು ಐನೂರುವರ್ಷ ರಾಜ್ಯವನ್ನು ಆಳುತ್ತಿದ್ದನು. ಪಾಂಡುರಾಜನ ಪುತ್ರನಾದ ಯುಧಿಷ್ಠಿರನು ಐವತ್ತುವರ್ಷ ಕಾಲ ದೊರೆತನ ಮಾಡುತ್ತಿದ್ದನು.

ಸುಯೋಧನೇನ ಷಷ್ಟ್ಯಬ್ದಂ ಕೃತಂ ರಾಜ್ಯಂ ತತಃ ಪರಂ ।
ಯುಧಿಷ್ಠಿರೇಣ ನಿಧನಂ ತಸ್ಯ ಪ್ರಾಪ್ತಂ ಕುರುಸ್ಥಲೇ ॥ ೭೭ ॥

ಪೂರ್ವಂ ದೇವಾಸುರೇ ಯುದ್ಧೇ ಯೇ ದೈತ್ಯಾಶ್ಚ ಸುರೈರ್ಹತಾಃ ।
ತೇ ಸರ್ವೇ ಶಂತನೋರಾಜ್ಯೇ ಜನ್ಮವಂತಃ ಪ್ರತಸ್ಥಿರೇ ॥ ೭೮ ॥

ಲಕ್ಷಮಕ್ಷೌಹಿಣೀ ತೇಷಾಂ ತದ್ಭಾರೇಣ ವಸುಂಧರಾ ।
ಶಕ್ರಸ್ಯ ಶರಣಂ ಪ್ರಾಪ್ತಾವತಾರಂ ಚ ತತೋ ಹರೇಃ ॥ ೭೯ ॥

ಸೂರಸ್ಯ ವಸುದೇವಸ್ಯ ದೇವಕ್ಯಾಂ ಜನ್ಮನಾವಿಶತ್ ।
ಏವಂ ಕೃಷ್ಣೋ ಮಹಾವೀರ್ಯೋ ರೋಹಿಣೀನಿಧನಂಗತಾ ॥ ೮೦ ॥

ಪಂಚತ್ರಿಂಶದುತ್ತರಂ ಚ ಶತಂ ವರ್ಷಂ ಚ ಭೂತಲೇ ।
ಉಷಿತ್ವಾ ಕೃಷ್ಣಚಂದ್ರಶ್ಚ ತತೋ ಗೋಲೋಕಮಾಗತಃ ॥ ೮೧ ॥

---

೭೭. ಬಳಿಕ ಅರವತ್ತು ವರ್ಷಕಾಲ ದುರ್ಯೋಧನನು ರಾಜ್ಯಭಾರ ಮಾಡಿದನು. ಕುರುಕ್ಷೇತ್ರ ಯುದ್ಧದಲ್ಲಿ ಯುಧಿಷ್ಠಿರನಿಂದ ದುರ್ಯೋಧನನಿಗೆ ಮರಣವುಂಟಾಯಿತು.

೭೮-೭೯. ಪೂರ್ವದಲ್ಲಿ ದೇವಾಸುರ ಯುದ್ಧದಲ್ಲಿ ದೇವತೆಗಳಿಂದ ಹತರಾದ ರಾಕ್ಷಸರೆಲ್ಲರೂ ಶಂತನು ಚಕ್ರವರ್ತಿಯ ರಾಜ್ಯದಲ್ಲಿ ಜನ್ಮವನ್ನು ತಾಳಿದ್ದರು. ಅವರ ಸಂಖ್ಯೆಯು ಲಕ್ಷ ಅಕ್ಷೌಹಿಣಿಯಾಗಿತ್ತು. ಅವರ ಭಾರವನ್ನು ಸಹಿಸಲಾರದ ಭೂದೇವಿಯು ಇಂದ್ರನನ್ನು ಮರೆಹೊಕ್ಕಳು, ಬಳಿಕ ಹರಿಯು ಭೂಮಿಯಲ್ಲವತರಿಸಿದನು

೮೦. ಆ ವಿಷ್ಣುವು ಶೂರನೆಂಬುವನ ಮಗನಾದ ವಸುದೇವನಿಗೆ ದೇವಕೀದೇವಿಯಲ್ಲಿ ಪುತ್ರನಾಗಿ ಜನಿಸಿ ಕೃಷ್ಣನೆಂಬ ಹೆಸರಿನಿಂದ ಮಹಾವೀರನಾಗಿದ್ದನು. ಕೃಷ್ಣನ ಬಲತಾಯಾದ ರೋಹಿಣೀದೇವಿಯು ಮೃತಳಾದಳು.

೮೧. ಕೃಷ್ಣಚಂದ್ರನು ಒಂದುನೂರ ಮೂವತ್ತೈದುವರ್ಷ ಭೂಮಿಯಲ್ಲಿ ವಾಸಿಸಿ, ಬಳಿಕ ಸ್ವರ್ಗಲೋಕಕ್ಕೆ ಹೊರಟುಹೋದನು.

ಚತುರ್ಥಚರಣಾಂತೇ ಚ ಹರೇರ್ಜನ್ಮ ಸ್ಮೃತಂ ಬುಧೈಃ ।
ಹಸ್ತಿನಾಪುರಮಧ್ಯಾಸ್ಯಾಭಿಮನ್ಯೋಸ್ತನಯಸ್ತತಃ ॥ ೮೨ ॥

ರಾಜ್ಯಮೇಕಸಹಸ್ರಂ ಚ ತತೋಽಭೂಜ್ಜನಮೇಜಯಃ ।
ತ್ರಿಸಹಸ್ರಂ ಕೃತಂ ರಾಜ್ಯಂ ಶತಾನೀಕಸ್ತತೋಽಭವತ್ ॥ ೮೩ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಯಜ್ಞದತ್ತಸ್ತತಃ ಸುತಃ ।
ರಾಜ್ಯಂ ಪಂಚಸಹಸ್ರಂ ಚ ನಿಶ್ಚಕ್ರಸ್ತನಯೋಽಭವತ್ ॥ ೮೪ ॥

ಸಹಸ್ರಮೇಕಂ ರಾಜ್ಯಂ ತದುಷ್ಟ್ರಪಾಲಸ್ತತೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾಚ್ಚಿತ್ರರಥಸ್ಸುತಃ ॥ ೮೫ ॥

ಪಿತುಸ್ತುಲ್ಯಂ ಕೃತಂ ರಾಜ್ಯಂ ಧೃತಿಮಾಂಸ್ತನಯಸ್ತತಃ ।
ಪಿತುಸ್ತುಲ್ಯಂ ಕೃತಂ ರಾಜ್ಯಂ ಸುಷೇಣಸ್ತನಯೋಽಭವತ್ ॥ ೮೬ ॥

---

೮೨-೮೩. ಕೃಷ್ಣನ ಅವತಾರವು ದ್ವಾಪರಯುಗದ ನಾಲ್ಕನೆಯ ಪಾದದಲ್ಲಿ ಆಯಿತೆಂದು ಪಂಡಿತರು ಹೇಳುವರು. ಧರ್ಮರಾಜನ ಬಳಿಕ, ಅಭಿಮನ್ಯುವಿನ ಪುತ್ರನಾದ ಪರೀಕ್ಷಿದ್ರಾಜನು ಹಸ್ತಿನಾಪುರದಲ್ಲಿದ್ದುಕೊಂಡು ಒಂದುಸಾವಿರ ವರ್ಷ ರಾಜ್ಯಭಾರವನ್ನು ಮಾಡಿದನು. ಪರೀಕ್ಷಿದ್ರಾಜನಿಗೆ ಜನಮೇಜಯನೆಂಬ ಪುತ್ರನುದಿಸಿದನು. ಜನಮೇಜಯರಾಜನು ಮೂರುಸಾವಿರವರ್ಷ ರಾಜ್ಯವನ್ನಾಳಿದನು. ಶತಾನೀಕನೆಂಬುವನು ಜನಮೇಜಯನ ಮಗ.

೮೪. ಶತಾನೀಕರಾಜನೂ ತಂದೆಯಂತೆಯೇ ಮೂರು ಸಾವಿರವರ್ಷ ರಾಜ್ಯವನ್ನಾಳಿದನು. ಯಜ್ಞದತ್ತನೆಂಬುವನು ಶತಾನೀಶಕನ ಮಗ. ಆತನು ಐದು ಸಾವಿರ ವರ್ಷ ದೊರೆತನವನ್ನು ಮಾಡಿದನು. ನಿಶ್ಚಕ್ರನೆಂಬುದನು ಯಜ್ಞದತ್ತನ ಪುತ್ರ.

೮೫-೯೦. ನಿಶ್ಚಕ್ರನು ಒಂದುಸಾವಿರ ವರ್ಷಕಾಲ ರಾಜ್ಯಭಾರ ಮಾಡಿದನು. ಆತನ ಮಗನಾದ ಉಷ್ಟ್ರಪಾಲನೂ ತಂದೆಯಂತೆ ಒಂದುಸಾವಿರವರ್ಷ ಆಳಿದನು. ಆತನ ಮಗ ಚಿತ್ರರಥ. ಚಿತ್ರರಥನೂ ತಂದೆಯಂತೆಯೇ ಸಾವಿರವರ್ಷ ಆಳಿದನು. ಆತನ ಮಗನು ಧೃತಿಮಂತ. ಧೃತಿಮಂತನೂ ತಂದೆಯಂತೆಯೇ ಸಾವಿರ ವರ್ಷ ಆಳಿದನು. ಆತನ ಪುತ್ರನು ಸುಷೇಣ. ಸುಷೇಣನೂ ಕೂಡ ತಂದೆಯು ಆಳಿದಷ್ಟೇ ಎಂದರೆ ಸಾವಿರವರ್ಷ ಆಳಿದನು. ಆತನ ಮಗ ಸುನೀಥ. ಸುನೀಥನೂ ತಂದೆ

**ಪಿತುಸ್ತುಲ್ಯಂ ಕೃತಂ ರಾಜ್ಯಂ ಸುನೀಥಸ್ತನಯೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಮಖಪಾಲಃ ಸುತೋಽಭವತ್ ॥ ೮೭ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ನಚಕ್ಷುಸ್ತನಯಸ್ತತಃ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಸುಖವಂತಸ್ತತೋಽಭವತ್ ॥ ೮೮ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾತ್ಪಾರಿಪ್ಲವಸ್ಸುತಃ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ಸುನಯಸ್ತತ್ಸುತೋಽಭವತ್ ॥ ೮೯ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಮೇಧಾವೀ ತತ್ಸುತೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾಜ್ಜಾತೋ ನೃಪಂಜಯಃ ॥ ೯೦ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಮೃದುಸ್ತತ್ತನಯೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ತಿಗ್ಮಜ್ಯೋತಿಸ್ತು ತತ್ಸುತಃ ॥ ೯೧ ॥**

---

ಯಂತೆಯೇ ಒಂದುಸಾವಿರವರ್ಷ ರಾಜ್ಯವಾಳಿದನು. ಅವನ ಮಗ ಮಖಪಾಲ. ಮಖಪಾಲನೂ ಸಹ ಒಂದುಸಾವಿರವರ್ಷ ತಂದೆಯಂತೆಯೇ ದೊರೆತನ ಮಾಡಿದನು ಅವನ ಮಗ ನಚಕ್ಷು. ನಚಕ್ಷುವೂ ತಂದೆಯಂತೆಯೇ ಒಂದುಸಾವಿರವರ್ಷ ರಾಜ್ಯ ಭಾರ ಮಾಡಿದನು. ಅವನ ಮಗ ಸುಖವಂತ ಸುಖವಂತನೂ ತಂದೆಯಂತೆಯೇ ಸಾವಿರವರ್ಷಕಾಲ ರಾಜ್ಯವನ್ನಾಳಿದನು. ಅವನ ಪುತ್ರ ಪಾರಿಪ್ಲವ. ಪಾರಿಪ್ಲವನೂ ಸಹ ತಂದೆಯು ಆಳಿದಂತೆ ಸಾವಿರವರ್ಷಗಳಕಾಲ ಆಳಿದನು. ಆತನ ಮಗ ಸುನಯ. ಸುನಯನೂ ಕೂಡ ತಂದೆಯ ಸಮನಾಗಿ ಸಾವಿರವರ್ಷಗಳು ರಾಜ್ಯವಾಳಿದನು. ಅವನ ಮಗ ಮೇಧಾವಿ. ಮೇಧಾವಿಯೂ ಕೂಡ ತಂದೆಯು ಆಳಿದಂತೆ ಸಾವಿರ ವರ್ಷ ರಾಜ್ಯವಾಳಿದನು. ಅವನ ಮಗ ನೃಪಂಜಯ.

೯೧. ನೃಪಂಜಯನೂ ತಂದೆಯಂತೆ ಸಾವಿರವರ್ಷ ದೊರೆತನ ಮಾಡಿದನು. ಆತನ ಪುತ್ರನು ಮೃದು. ಮೃದುರಾಜನೂ ತಂದೆಯಂತೆ ಸಾವಿರವರ್ಷ ದೊರೆತನ ಮಾಡಿದನು. ಆತನ ಮಗ ತಿಗ್ಮಜ್ಯೋತಿ.

**ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾಜ್ಜಾತೋ ಬೃಹದ್ರಥಃ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ವಸುದಾನಸ್ತತೋಽಭವತ್ ॥ ೯೨ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಶತಾನೀಕಸ್ತತೋಽಭವತ್ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾದುದ್ಯಾನ ಉಚ್ಯತೇ ॥ ೯೩ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ತಸ್ಮಾಜ್ಜಾತೋ ಹ್ಯಹೀನರಃ ।**
**ಪಿತುಸ್ತುಲ್ಯಂ ಕೃತಂ ರಾಜ್ಯಂ ನಿರ್ಮಿತ್ರಸ್ತನಯೋಽಭವತ್ ॥ ೯೪ ॥**

**ಪಿತುಸ್ತುಲ್ಯಂ ಕೃತಂ ರಾಜ್ಯಂ ಕ್ಷೇಮಕಸ್ತತ್ಸುತೋಽಭವತ್ ।**
**ರಾಜ್ಯಂ ತ್ಯಕ್ತ್ವಾ ಸ ಮೇಧಾವೀ ಕಲಾಪಗ್ರಾಮಶ್ರಿತಃ ॥ ೯೫ ॥**

**ಮ್ಲೇಚ್ಛೈಶ್ಚ ಮರಣಂ ಪ್ರಾಪ್ತೋ ಯಮಲೋಕಮಿತೋ ಗತಃ ।**
**ನಾರದಸ್ಯೋಪದೇಶೇನ ಪ್ರದ್ಯೋತಸ್ತನಯಸ್ತತಃ ॥ ೯೬ ॥**

---

೯೨. ತಿಗ್ಮಜ್ಯೋತಿರಾಜನೂ ಸಾವಿರವರ್ಷಕಾಲ ತಂದೆಯಂತೆಯೇ ರಾಜ್ಯ ವಾಳಿದನು. ಅವನ ಮಗ ಬೃಹದ್ರಥನೂ ತಂದೆಯಂತೆ ಸಾವಿರ ವರ್ಷಗಳು ರಾಜ್ಯ ಭಾರ ಮಾಡಿದನು. ಅವನ ಪುತ್ರ ವಸುದಾನ.

೯೩. ವಸುದಾನನೂ ತಂದೆಯಂತೆ ಸಾವಿರ ವರ್ಷಗಳು ದೊರೆತನ ಮಾಡಿದನು. ಆತನ ಮಗ ಶತಾನೀಕನೂ ಕೂಡ ತಂದೆಯಂತೆ ಸಾವಿರ ವರ್ಷಗಳು ದೊರೆತನ ಮಾಡಿದನು. ಆತನ ಮಗ ಉದ್ಯಾನ.

೯೪. ಉದ್ಯಾನನೂ ಸಹ ತಂದೆಯಂತೆ ಸಾವಿರ ವರ್ಷಗಳು ದೊರೆತನ ಮಾಡಿದನು. ಅವನ ಮಗ ಅಹೀನರ. ಅಹೀನರನೂ ತಂದೆಯಂತೆ ಒಂದು ಸಾವಿರ ವರ್ಷ ರಾಜ್ಯಭಾರ ಮಾಡಿದನು. ಅವನ ಮಗನ ಹೆಸರು ನಿರ್ಮಿತ್ರ.

೯೫-೯೬. ನಿರ್ಮಿತ್ರನೂ ಸಹ ತಂದೆಯಂತೆ ಒಂದುಸಾವಿರವರ್ಷಕಾಲ ರಾಜ್ಯ ವಾಳಿದನು ಅವನ ಮಗನೇ ಕ್ಷೇಮಕ. ಆ ಮೇಧಾವಿಯು ರಾಜ್ಯವನ್ನು ತ್ಯಜಿಸಿ ಕಲಾಪಗ್ರಾಮವನ್ನು ಆಶ್ರಯಿಸಿ, ಮ್ಲೇಚ್ಛರಿಂದ ಮರಣವನ್ನು ಪಡೆದು ಯಮಲೋ

ಮ್ಲೇಚ್ಛಯಜ್ಞಃ ಕೃತಸ್ತೇನ ಮ್ಲೇಚ್ಛಾ ಹನನಮಾಗತಾಃ		॥ ೯೭ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಾಪರ
ನೃಪೋಪಾಖ್ಯಾನೇ ತೃತೀಯೋಧ್ಯಾಯಃ



---

ಕಕ್ಕೆ ಹೋದನು. ಆತನ ಮಗನಾದ ಪ್ರದ್ಯೋತನು ನಾರದಮುನಿಯ ಉಪದೇಶ ದಿಂದ ಮ್ಲೇಚ್ಛಯಜ್ಞವನ್ನು ಮಾಡಿದನು. ಆದರಿಂದ ಮ್ಲೇಚ್ಛರು ಹತರಾದರು.

ಸೂತಮುನಿಯು ಶೌನಕನಿಗೆ ಇಪ್ಪತ್ತೆಂಟನೆಯ ಚತುರ್ಯುಗಕ್ಕೆ ಸೇರಿದ
ದ್ವಾಪರಯುಗದಲ್ಲಿ ಭರತಖಂಡದಲ್ಲಿ ಆಳಿದ ರಾಜರನ್ನೂ ಅವರು
ಎಷ್ಟುಕಾಲ ಆಳಿದರೆಂಬುದನ್ನೂ ಹೇಳುವಲ್ಲಿಗೆ ಭವಿಷ್ಯ
ಮಹಾಪುರಾಣದ ಪ್ರತಿಸರ್ಗಪರ್ವದಲ್ಲಿ ಮೂರ
ನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ಪ್ರಥಮಖಂಡೇ
## ಚತುರ್ಥೋಽಧ್ಯಾಯಃ

---

॥ ಶೌನಕ ಉವಾಚ ॥

ಕಥಂ ಯಜ್ಞಃ ಕೃತಸ್ತೇನ ಪ್ರದ್ಯೋತೇನ ವಿಚಕ್ಷಣ ।
ಸರ್ವಂ ಕಥಯ ಮೇ ತಾತ ತ್ರಿಕಾಲಜ್ಞ ಮಹಾಮುನೇ ॥ ೧ ॥

॥ ಸೂತ ಉವಾಚ ॥

ಏಕದಾ ಹಸ್ತಿನಗರೇ ಪ್ರದ್ಯೋತಃ ಕ್ಷೇಮಕಾತ್ಮಜಃ ।
ಆಸ್ಥಿತಃ ಸ ಕಥಾಮಧ್ಯೇ ನಾರದೋಽಭ್ಯಾಗಮತ್ತದಾ ॥ ೨ ॥

ತಂ ದೃಷ್ಟ್ವಾ ಹರ್ಷಿತೋ ರಾಜಾ ಪೂಜಯಾಮಾಸ ಧರ್ಮವಿತ್ ।
ಸುಖೋಪವಿಷ್ಟಃ ಸ ಮುನಿಃ ಪ್ರದ್ಯೋತಂ ನೃಪಮಬ್ರವೀತ್ ॥ ೩ ॥

---

## ನಾಲ್ಕನೆಯ ಅಧ್ಯಾಯ

೧ ಶೌನಕನು ಪ್ರಾರ್ಥಿಸಿ ಕೇಳಿಕೊಳ್ಳುತ್ತಾನೆ. ಅಯ್ಯಾ ವಿದ್ವಾಂಸನೂ ತ್ರಿಕಾಲಜ್ಞನೂ ಆದ ಮಹಾಮುನಿಯೇ ! ಆ ಪ್ರದ್ಯೋತನು ಮ್ಲೇಚ್ಛಯಜ್ಞವನ್ನು ಹೇಗೆ ಮಾಡಿದನು ? ಅದೆಲ್ಲವನ್ನೂ ನನಗೆ ಹೇಳು.

೨-೩. ಸೂತಮುನಿ ವರ್ಯನು ಹೇಳುತ್ತಾನೆ—ಒಂದಾನೊಂದು ಕಾಲದಲ್ಲಿ ಕ್ಷೇಮಕರಾಜನ ಪುತ್ರನಾದ ಪ್ರದ್ಯೋತನು (ಸಭೆಯಲ್ಲಿ) ಮಾತನಾಡುತ್ತಿರುವಾಗ ನಾರದಮುನಿಯು ಅವನಲ್ಲಿಗೆ ಬಂದನು. ಅವನನ್ನು ಕಂಡು ಸಂತೋಷಗೊಂಡ ಧರ್ಮಜ್ಞನಾದ ದೊರೆಯು ಆತನನ್ನು ಪೂಜಿಸಿದನು. ಬಳಿಕ ಸುಖದಿಂದ ಕುಳಿತು ಕೊಂಡು ಮುನಿಯು ಪ್ರದ್ಯೋತರಾಜನನ್ನು ನೋಡಿ, ನಿನ್ನ ತಂದೆಯು ಮ್ಲೇಚ್ಛ

ಮ್ಲೇಚ್ಛೈರ್ಹತಸ್ತವ ಪಿತಾ ಯಮಲೋಕಮಿತೋ ಗತಃ ।
ಮ್ಲೇಚ್ಛಯಜ್ಞಪ್ರಭಾವೇನ ಸ್ವರ್ಗತಿರ್ಭವಿತಾ ಹಿ ಸಃ ॥ ೪ ॥

ತಚ್ಛ್ರುತ್ವಾ ಕ್ರೋಧತಾಮ್ರಾಕ್ಷೋ ಬ್ರಾಹ್ಮಣಾನ್ವೇದವಿತ್ತಮಾನ್ ।
ಆಹೂಯ ಸ ಕುರುಕ್ಷೇತ್ರೇ ಮ್ಲೇಚ್ಛಯಜ್ಞಂ ಸಮಾರಭತ್ ॥ ೫ ॥

ಯಜ್ಞಕುಂಡಂ ಚತುಷ್ಕೋಣಂ ಯೋಜನಾನ್ಯೇವ ಷೋಡಶ ।
ರಚಿತ್ವಾ ದೇವತಾ ಧ್ಯಾತ್ವಾ ಮ್ಲೇಚ್ಛಾಂಶ್ಚ ಜುಹುಯಾನ್ನೃಪಃ ॥ ೬ ॥

ಹಾರಹೂಣಾನ್ಬರ್ಬರಾಂಶ್ಚ ಗುರುಂಡಾಂಶ್ಚ ಶಕಾನ್ಖಸಾನ್ ।
ಯವನಾನ್ಪಲ್ಲವಾಂಶ್ಚೈವ ರೋಮಜಾನ್ಖರಸಂಭವಾನ್ ॥ ೭ ॥

ದ್ವೀಪಸ್ಥಿತಾನ್ಕಾಮರೂಶ್ಚ ಚೀನಾನ್ಸಾಗರಮಧ್ಯಗಾನ್ ।
ಪ್ರಾಹೂಯ ಭಸ್ಮಸಾತ್ಕುರ್ವನ್ವೇದಮಂತ್ರಪ್ರಭಾವತಃ ॥ ೮ ॥

---

ರಿಂದ ಹತನಾಗಿ ಯಮಲೋಕವನ್ನೈದಿದನು. ನೀನು ಮ್ಲೇಚ್ಛಯಜ್ಞವನ್ನು ಮಾಡಿದರೆ ಅದರ ಮಹಿಮೆಯಿಂದ ಆತನಿಗೆ ಸ್ವರ್ಗಲೋಕ ಪ್ರಾಪ್ತಿಯಾಗುವುದು" ಎಂದು ಹೇಳಿದನು.

೫. ಅದನ್ನು ಕೇಳಿ ಕೋಪದಿಂದ ಕೆಂಪಾದ ಕಣ್ಣುಳ್ಳ ಆ ಪ್ರದ್ಯೋತನು ವೇದವಿದೋತ್ತಮರಾದ ಬ್ರಾಹ್ಮಣರನ್ನು ಕರೆಯಿಸಿ ಕುರುಕ್ಷೇತ್ರದಲ್ಲಿ ಮ್ಲೇಚ್ಛ ಯಜ್ಞವನ್ನಾರಂಭಿಸಿದನು.

೬. ಹದಿನಾರು ಯೋಜನದಳತೆಯುಳ್ಳುದೂ ಚತುಷ್ಕೋಣಾಕೃತಿಯುಳ್ಳುದೂ ಆದ ಯಜ್ಞಕುಂಡವನ್ನು ರಚಿಸಿ ದೇವತೆಗಳನ್ನು ಧ್ಯಾನಿಸಿ ದೊರೆಯು ಮ್ಲೇಚ್ಛರನ್ನು ಹೋಮಮಾಡಿದನು.

೭-೯. ಹಾರಹೂಣರನ್ನೂ, ಬರ್ಬರರನ್ನೂ, ಗುರುಂಡರನ್ನೂ, ಶಕರನ್ನೂ ಖಸರನ್ನೂ, ಯವನರನ್ನೂ, ಪಲ್ಲವರನ್ನೂ, ರೋಮಜರನ್ನೂ, ಕಾಮರೂಜನರನ್ನೂ, ಚೀಣರನ್ನೂ ಖರಜರನ್ನೂ ಸಾಗರಮಧ್ಯದಲ್ಲಿ ದ್ವೀಪಗಳಲ್ಲಿದ್ದವರನ್ನೂ ಬಿಡದೆ ವೇದ ಮಂತ್ರ ಪ್ರಭಾವದಿಂದ ಬರಮಾಡಿ ಸುಟ್ಟು ಬೂದಿಮಾಡಿದ್ದನು. ಬಳಿಕ ಬ್ರಾಹ್ಮಣ ರಿಗೆ ದಕ್ಷಿಣೆಯನ್ನು ಕೊಟ್ಟು ಅವಭೃಥಸ್ನಾನವನ್ನು ನೆರವೇರಿಸಿದನು. ಈ ಕಾರಣ

ಬ್ರಾಹ್ಮಣಾನ್ದಕ್ಷಿಣಾಂ ದತ್ವಾ ಅಭಿಷೇಕಮಕಾರಯತ್ ।
ಕ್ಷೇಮಕೋ ನಾಮ ನೃಪತಿಃ ಸ್ವರ್ಗಲೋಕಂ ತತೋ ಗತಃ ॥ ೯ ॥

ಮ್ಲೇಚ್ಛಹಂತಾ ನಾಮ ತಸ್ಯ ವಿಖ್ಯಾತಂ ಭುವಿ ಸರ್ವತಃ ।
ರಾಜ್ಯಂ ದಶಸಹಸ್ರಾಬ್ದಂ ಕೃತಂ ತೇನ ಮಹಾತ್ಮನಾ ॥ ೧೦ ॥

ಸ್ವರ್ಗಲೋಕಂ ಗತೋ ರಾಜಾ ತತ್ಪುತ್ರೋ ವೇದವಾನ್ ಸ್ಮೃತಃ ।
ದ್ವಿಸಹಸ್ರಂ ಕೃತಂ ರಾಜ್ಯಂ ತದಾ ಮ್ಲೇಚ್ಛಃ ಕಲಿಃ ಸ್ವಯಂ ॥ ೧೧ ॥

ನಾರಾಯಣಂ ಪೂಜಯಿತ್ವಾ ದಿವ್ಯಾಂ ಸ್ತುತಿಮಥಾಕರೋತ್ ।

॥ ಕಲಿರುವಾಚ ॥

ನಮೋಽನಂತಾಯ ಮಹತೇ ಸರ್ವಕಾಲಪ್ರವರ್ತಿನೇ ॥ ೧೨ ॥

ಚತುರ್ಯುಗಕೃತೇ ತುಭ್ಯಂ ವಾಸುದೇವಾಯ ಸಾಕ್ಷಿಣೇ ।
ದಶಾವತಾರಾಯ ಹರೇ ನಮಸ್ತುಭ್ಯಂ ನಮೋನಮಃ ॥ ೧೩ ॥

ದಿಂದ ಕ್ಷೇಮಕರಾಜನಿಗೆ ಯಮಲೋಕವಾಸವು ಪರಿಹಾರವಾಗಿ ಸ್ವರ್ಗಲೋಕ ಪ್ರಾಪ್ತಿಯಾಯಿತು.

೧೦-೧೧ ಬಳಿಕ ಪ್ರದ್ಯೋತರಾಜನಿಗೆ ಮ್ಲೇಚ್ಛಹಂತೃವೆಂಬ ಹೆಸರು ಭೂಮಿಯಲ್ಲೆಲ್ಲಾ ಪ್ರಸಿದ್ಧವಾಯಿತು. ಆ ಮಹಾತ್ಮನು ಹತ್ತುಸಾವಿರವರ್ಷಕಾಲ ರಾಜ್ಯವನ್ನಾಳಿ ಬಳಿಕ ಸ್ವರ್ಗಸ್ಥನಾದನು. ಪ್ರದ್ಯೋತರಾಜನಿಗೆ ವೇದವಂತನೆಂಬ ಮಗನಾದನು. ಆ ವೇದವಂತನು ಎರಡುಸಾವಿರ ವರ್ಷಕಾಲ ದೊರೆತನವನ್ನು ಮಾಡಿದನು. ಆ ಕಾಲದಲ್ಲಿ ಕಲಿಯು ತಾನೇ ಮ್ಲೇಚ್ಛನಾಗಿ ನಾರಾಯಣನನ್ನು ಪೂಜಿಸಿ, ಬಳಿಕ ದಿವ್ಯವಾದ ಸ್ತುತಿಯಿಂದ ಪ್ರಾರ್ಥಿಸಿದನು.

೧೨-೧೩ ಕಲಿಯು ಹೇಳುತ್ತಾನೆ—ಅನಂತನೂ, ಮಹಾತ್ಮನೂ ಯಾವಾಗಲೂ ಇರುವವನೂ ಚತುರ್ಯುಗಕಾರಿಯೂ, ಸರ್ವಸಾಕ್ಷಿಯೂ, (ವಸುದೇವಪುತ್ರ) ಕೃಷ್ಣನೂ ಆದ ನಿನಗೆ ನಮಸ್ಕಾರ. ದಶಾವತಾರಗಳನ್ನು ಮಾಡಿದ ಹರಿಯೇ! ನಿನಗೆ ಅನೇಕ ನಮಸ್ಕಾರ.

**ನಮಃ ಶಕ್ತ್ಯವತಾರಾಯ ರಾಮಕೃಷ್ಣಾಯ ತೇ ನಮಃ ।**
**ನಮೋ ಮತ್ಸ್ಯಾವತಾರಾಯ ಮಹತೇ ಗೌರವಾಸಿನೇ ॥ ೧೪ ॥**

**ನಮೋ ಭಕ್ತಾವತಾರಾಯ ಕಲ್ಪಕ್ಷೇತ್ರನಿವಾಸಿನೇ ।**
**ರಾಜ್ಞಾ ವೇದತಾ ನಾಥ ಮಮ ಸ್ಥಾನಂ ವಿನಾಶಿತಂ ॥ ೧೫ ॥**

**ಮಮ ಪ್ರಿಯಸ್ಯ ಮ್ಲೇಚ್ಛಸ್ಯ ತತ್ಪಿತ್ರಾ ವಂಶನಾಶನಂ ।**
**॥ ಸೂತ ಉವಾಚ ॥**
**ಇತಿ ಸ್ತುತಸ್ತು ಕಲಿನಾ ಮ್ಲೇಚ್ಛಸ್ಯ ಸಹ ಭಾರ್ಯಯಾ ॥ ೧೬ ॥**

**ಪ್ರಾಪ್ತವಾನ್ಸ ಹರಿಃ ಸಾಕ್ಷಾತ್ ಭಗವಾನ್ಭಕ್ತವತ್ಸಲಃ ।**
**ಕಲಿಂ ಪ್ರೋವಾಚ ಸ ಹರಿರ್ಯುಷ್ಮದರ್ಥೇ ಯುಗೋತ್ತಮಂ**
**ಬಹುರೂಪಮಹಂ ಕೃತ್ವಾ ತವೇಚ್ಛಾಂ ಪೂರಯಾಮ್ಯಹಂ ॥ ೧೭ ॥**

**ಆದಮೋ ನಾಮ ಪುರುಷಃ ಪತ್ನೀ ಹವ್ಯವತೀ ತಥಾ ।**
**ವಿಷ್ಣುಕರ್ದಮತೋ ಜಾತೌ ಮ್ಲೇಚ್ಛವಂಶಪ್ರವರ್ಧನೌ ॥ ೧೮ ॥**

---

೧೪ ಶಕ್ತಿಯಿಂದ ಅವತರಿಸಿದ ರಾಮನೂ, ಕೃಷ್ಣನೂ ಆದ ನಿನಗೆ ನಮಸ್ಕಾರ. ಮತ್ಸ್ಯರೂಪನಾದ ನಿನಗೆ ನಮಸ್ಕಾರ, ಪೀತಾಂಬರಧಾರಿಯಾದ ಮಹಾತ್ಮ! ನಿನಗೆ ನಮಸ್ಕಾರ.

೧೫-೧೬. ಭಕ್ತರಿಗಾಗಿ ಅವತಾರ ಮಾಡುವವನೂ ಕಲ್ಪಕ್ಷೇತ್ರಗಳಲ್ಲಿ ವಾಸಿಸುವವನೂ ಆದ ನಿನಗೆ ನಮಸ್ಕಾರ. ಓ ಪ್ರಭುವೇ ! ದೊರೆಯಾದ ವೇದವಂತನು ನನ್ನ ಸ್ಥಾನವನ್ನು ನಾಶಪಡಿಸಿ ನನಗೆಡೆಯಿಲ್ಲದಂತೆ ಮಾಡಿದನು ಅವನ ತಂದೆಯು ನನಗೆ ಪ್ರಿಯನಾದ ಮ್ಲೇಚ್ಛನ ವಂಶವನ್ನು ನಾಶಮಾಡಿದನು.

೧೭. ಸೂತಮುನಿವರ್ಯನು ಹೇಳುತ್ತಾನೆ:—ಮ್ಲೇಚ್ಛನ ಹೆಂಡತಿಯೊಡನೆ ಕಲಿಯು ಹೀಗೆ ತನ್ನನ್ನು ಸ್ತುತಿಸಲು ಭಕ್ತವತ್ಸಲನೂ, ಭಗವಂತನೂ, ಆದ ಸಾಕ್ಷಾದ್ವಿಷ್ಣುವು ಅವನಿಗೆ ಪ್ರತ್ಯಕ್ಷನಾದನು. ಅಲ್ಲದೆ ಆ ಹರಿಯು "ನಾನು ನಿನಗೋಸ್ಕರ ಉತ್ತಮವಾದ ಕಲಿಯುಗವನ್ನು ಬಹುರೂಪವಾಗಿ ಏರ್ಪಡಿಸಿ ನಿನ್ನ ಇಷ್ಟವನ್ನು ಪೂರ್ತಿಮಾಡುವೆನು" ಎಂದು ಆ ಕಲಿಗೆ ಹೇಳಿದನು.

೧೮-೧೯. ಅಲ್ಲಿಯೇ ವಿಷ್ಣುಕರ್ದಮದಿಂದ ಮ್ಲೇಚ್ಛವಂಶಪ್ರವರ್ಧಕರಾದ ಆದಮನೆಂಬ ಪುರುಷನೂ, ಅವನಿಗೆ ಹೆಂಡತಿಯಾದ ಹವ್ಯವತಿಯೆಂಬ ಹೆಂಗಸೂ,

ಹರಿಸ್ತ್ವಂತರ್ದಧೇ ತತ್ರ ಕಲಿರಾನಂದಸಂಕುಲಃ ।
ಗಿರಿಂ ನೀಲಾಚಲಂ ಪ್ರಾಪ್ಯ ಕಂಚಿತ್ಕಾಲಮುವಾಸಯುತ್ ॥ ೧೯ ॥

ಪುತ್ರೋ ವೇದವತೋ ಜಾತಃ ಸುನಂದೋ ನಾಮ ಭೂಪತಿಃ ॥ ೨೦ ॥

ಪಿತುಸ್ತುಲ್ಯಂ ಕೃತಂ ರಾಜ್ಯಮನಪತ್ಯೋ ಮೃತಿಂ ಗತಃ ।
ಆರ್ಯದೇಶಾಃ ಕ್ಷೀಣವಂತೋ ಮ್ಲೇಚ್ಛವಂಶಾ ಬಲಾನ್ವಿತಾಃ ॥ ೨೧ ॥

ಭವಿಷ್ಯಂತಿ ಭೃಗುಶ್ರೇಷ್ಠ ತಸ್ಮಾಚ್ಚ ತುಹಿನಾಚಲಂ ।
ಗತ್ವಾ ವಿಷ್ಣುಂ ಸಮಾರಾಧ್ಯ ಗಮಿಷ್ಯಾಮೋ ಹರೇಃ ಪದಂ ॥ ೨೨ ॥

ಇತಿ ಶ್ರುತ್ವಾ ದ್ವಿಜಾಸ್ಸರ್ವೇ ನೈಮಿಷಾರಣ್ಯ ವಾಸಿನಃ ।
ಅಷ್ಟಾಶೀತಿಸಹಸ್ರಾಣಿ ಗತಾಸ್ತೇ ತುಹಿನಾಚಲಂ ॥ ೨೩ ॥

ವಿಶಾಲಾಯಾಂ ಸಮಾಸಾದ್ಯ ವಿಷ್ಣುಗಾಥಾಂ ಪ್ರಚಕ್ಷಿರೇ ।
ಇತಿ ವ್ಯಾಸೇನ ಕಥಿತಂ ವಾಕ್ಯಂ ಕಲಿವಿಶಾರದಂ ॥ ೨೪ ॥

---

ಹುಟ್ಟಿದರು. ವಿಷ್ಣುವು ಅಲ್ಲೇ ಮಾಯವಾದನು. ಆನಂದರಾಶಿಯಾದ ಕಲಿಯು ನೀಲಗಿರಿಗೆ ಹೋಗಿ ಅಲ್ಲಿ ಕೆಲವುಕಾಲ ವಾಸಮಾಡಿದನು.

೨೦. ಇತ್ತ ವೇದವಂತರಾಜನಿಗೆ ಸುನಂದನೆಂಬ ಪುತ್ರನುದಿಸಿದನು.

೨೧-೨೨. ಸುನಂದರಾಜನು ತಂದೆಯಂತೆಯೇ ಎರಡುಸಾವಿರ ವರ್ಷಕಾಲ ಆಳಿದನು. ಆತನು ಮಕ್ಕಳಿಲ್ಲದವನಾಗಿ ಮೃತನಾದನು. ಹೇ ಭೃಗುಶ್ರೇಷ್ಠನೇ ! ಆರ್ಯದೇಶಗಳು ಕ್ಷೀಣವಾಗುತ್ತಲೂ ಮ್ಲೇಚ್ಛದೇಶಗಳು ಬಲವಾಗುತ್ತಲೂ ಬರುತ್ತಿವೆ. ಆದುದರಿಂದ ನಾವು ಹಿಮಾಚಲಕ್ಕೆ ಹೋಗಿ ವಿಷ್ಣುವನ್ನು ಚೆನ್ನಾಗಿ ಆರಾಧಿಸಿ ವಿಷ್ಣು ಪದವನ್ನು ಪಡೆಯೋಣ" ಎಂದು ಹೇಳಿದರು.

೨೩. ನೈಮಿಷಾರ್ಣ್ಯದಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣರೆಲ್ಲರೂ ಸೂತಮುನಿಯ ಈ ಮಾತನ್ನು ಕೇಳಿ ಅವರು ಎಂಭತ್ತೆಂಟುಸಾವಿರ ಜನರೂ ಹಿಮಾಚಲಕ್ಕೆ ಹೊರಟು ಹೋದರು.

೨೪. ಅಲ್ಲಿ ವಿಶಾಲಾ ಎಂಬ ಸ್ಥಳದಲ್ಲಿ ಸೇರಿ ಸರ್ವರೂ ವಿಷ್ಣು ಕಥೆಯನ್ನು (ಪುರಾಣವನ್ನು) ಶ್ರವಣಮಾಡಿದರು.

**ಶ್ರೋತಾರಂ ಸ ಮನಃ ಕೃತ್ವಾ ಭವಿಷ್ಯಂ ಸಮುದೀರಯತ್ ।**
**॥ ವ್ಯಾಸ ಉವಾಚ ॥**
**ಮನಃ ಶೃಣು ತತೋ ಗಾಥಾಂ ಭಾವೀಂ ಸುತೇನ ವರ್ಣಿತಾಂ ॥ ೨೫ ॥**

**ಕಲೇರ್ಯುಗಸ್ಯ ಪೂರ್ಣಾಂ ತಾಂ ತಚ್ಛ್ರುತ್ವಾ ತೃಪ್ತಿಮಾವಹ ।**
**॥ ಸೂತ ಉವಾಚ ॥**
**ಷೋಡಶಾಬ್ದಸಹಸ್ರೇ ಚ ಶೇಷೇ ತದ್ದ್ವಾಪರೇ ಯುಗೇ ॥ ೨೬ ॥**

**ಬಹುಕೀರ್ತಿಮತೀ ಭೂಮಿರಾರ್ಯದೇಶಸ್ಯ ಕೀರ್ತಿತಾ ।**
**ಕ್ವಚಿದ್ವಿಪ್ರಾಃ ಸ್ಮೃತಾ ಭೂಪಾಃ ಕ್ವಚಿದ್ರಾಜನ್ಯವಂಶಜಾಃ ॥ ೨೭ ॥**

**ಕ್ವಚಿದ್ವೈಶ್ಯಾಃ ಕ್ವಚಿಚ್ಛೂದ್ರಾಃ ಕುತ್ರಚಿದ್ವರ್ಣಸಂಕರಃ ।**
**ದ್ವಿಶತಾಷ್ಟಸಹಸ್ರೇಽಬ್ದೇ ಶೇಷೇ ತು ದ್ವಾಪರೇ ಯುಗೇ ॥ ೨೮ ॥**

---

೨೫. ಮತ್ತು ಸೂತಮಹರ್ಷಿಯು ಹಿಂದೆ ವ್ಯಾಸಮಹರ್ಷಿಯಿಂದ ತಮಗೆ ತಿಳಿಸಲ್ಪಟ್ಟ ಕಲಿಯುಗದ ಭವಿಷ್ಯವನ್ನು ವಿವರಿಸಲಾರಂಭಿಸಿದನು. ವ್ಯಾಸರಾದರೋ ತಮ್ಮ ಮನಸ್ಸನ್ನೇ ಶ್ರೋತೃವನ್ನಾಗಿ ಭಾವಿಸಿ ಕಲಿಯುಗ ಭವಿಷ್ಯವನ್ನು ಹಿಂದೆ ಹೇಳಿದ್ದರು. ಹೇಗೆಂದರೆ: ಎಲೈ ಮನಸ್ಸೇ! ಮುಂದೆ ಸೂತನು ಯುಗಧರ್ಮವನ್ನು ವಿವರಿಸುವನು. ಅದನ್ನೇ ಈಗ ನಿನಗೆ ಸ್ವಲ್ಪಮಟ್ಟಿಗೆ ತಿಳಿಸುವೆನು. ಅದರಲ್ಲಿ ಕಲಿಯುಗದಲ್ಲಿ ನಡೆಯುವ ಸಂಪೂರ್ಣ ವಿಷಯಗಳು ನಿನಗೆ ತಿಳಿದಂತಾಗುವುದು. ಅದರಿಂದ ನೀನು ತೃಪ್ತನಾಗು" ಎಂದು ಹೇಳಿದ್ದರು.

೨೬-೨೭. ದ್ವಾಪರಯುಗವು ಪೂರ್ಣವಾಗುವುದಕ್ಕೆ ಹದಿನಾರುಸಾವಿರ ವರ್ಷ ಉಳಿದಿರುವಾಗ ಆರ್ಯದೇಶದ ರಾಜ್ಯಗಳು ಬಹಳ ಯಶಸ್ವಿತೆಯನ್ನು ಪಡೆವುವು. ಕೆಲವರು ಬ್ರಾಹ್ಮಣರು ಪ್ರಭುಗಳು, ಕೆಲವರು ಹೀನವಂಶದ ಕ್ಷತ್ರಿಯರು ರಾಜರು. ಕೆಲವರು ವೈಶ್ಯ ಪ್ರಭುಗಳು, ಕೆಲವುಕಡೆ ಶೂದ್ರ ಜಾತಿಯವರು ಪ್ರಭುಗಳು ಆಗುವರು.

೨೮. ಎಲ್ಲೆಲ್ಲಿಯೂ (ವರ್ಣ) ಜಾತಿಸಾಂಕರ್ಯವು ಕಾಣುವುದು. ದ್ವಾಪರ ಯುಗದಲ್ಲಿ ಎಂಟುಸಾವಿರ ವರ್ಷಗಳು ಉಳಿದಿದೆ ಎನ್ನುವಾಗ ಮ್ಲೇಚ್ಛರಾಜ್ಯವು ಕೀರ್ತಿಯುತವಾಗುವುದು.

ಮ್ಲೇಚ್ಛದೇಶಸ್ಯ ಯಾ ಭೂಮಿರ್ಭವಿತಾ ಕೀರ್ತಿಮಾಲಿನೀ ।
ಇಂದ್ರಿಯಾಣಿ ದಮಿತ್ವಾ ಯೋ ಹ್ಯಾತ್ಮಧ್ಯಾನಪರಾಯಣಃ ॥ ೨೯ ॥

ತಸ್ಮಾದಾದಮನಾಮಾಸೌ ಪತ್ನೀ ಹವ್ಯವತೀ ಸ್ಮೃತಾ ।
ಪ್ರದಾನನಗರಸ್ಯೈವ ಪೂರ್ವಭಾಗೇ ಮಹಾವನಂ ॥ ೩೦ ॥

ಈಶ್ವರೇಣ ಕೃತಂ ರಮ್ಯಂ ಚತುಃಕ್ರೋಶಾಯತಂ ಸ್ಮೃತಂ ।
ಪಾಪವೃಕ್ಷತಲೇ ಗತ್ವಾ ಪತ್ನೀದರ್ಶನತತ್ಪರಃ ॥ ೩೧ ॥

ಕಲಿಸ್ತತ್ರಾಗತಸ್ತೂರ್ಣಂ ಸರ್ಪರೂಪಂ ಹಿ ತತ್ಕೃತಂ ।
ವಂಚಿತಾ ತೇನ ಧೂರ್ತೇನ ವಿಷ್ಣ್ವಾಜ್ಞಾಭಂಗತಾಂ ಗತಾ ॥ ೩೨ ॥

ಖಾದಿತ್ವಾ ತತ್ಫಲಂ ರಮ್ಯಂ ಲೋಕಮಾರ್ಗಪ್ರದಂ ಪತಿಃ ।
ಉದುಂಬರಸ್ಯ ಪತ್ರೈಶ್ಚ ತಾಭ್ಯಾಂ ವಾಯ್ವಶನಂ ಕೃತಂ ॥ ೩೩ ॥

---

೨೯-೩೦. ಪರಮಾತ್ಮಧ್ಯಾನದಲ್ಲಿ ಆಸಕ್ತನಾಗಿ ಇಂದ್ರಿಯಗಳನ್ನು ದಮನ ಮಾಡಿದವನಾದ್ದರಿಂದ ಆದಮನೆಂಬ ಹೆಸರುಳ್ಳ ಮಹಾತ್ಮನು ಅಲ್ಲಿರುವನು. ಅವನಿಗೆ ಹವ್ಯವತೀಯೆಂಬ ಪತ್ನಿಯಿರುವಳು. ಪ್ರಧಾನನಗರದ ಪೂರ್ವದಿಗ್ಭಾಗದಲ್ಲಿ ನಾಲ್ಕು ಕ್ರೋಶ ವಿಸ್ತೀರ್ಣವುಳ್ಳದ್ದೂ ಈಶ್ವರನಿಂದ ರಚಿತವಾಗಿ ರಮ್ಯವಾದುದೂ ಆದ ಮಹಾ ವನವೆಂಬುದು ಇರುವುದು.

೩೧-೩೨. ಕಲಿಯು ಆತನ ಪತ್ನಿಯನ್ನು ನೋಡಲು ಆಸಕ್ತನಾಗಿ ಸರ್ಪ ರೂಪದಿಂದ ಆ ಮಹಾವನದಲ್ಲಿದ್ದ ಪಾಪವೃಕ್ಷದ ಮೂಲಕ್ಕೆ ತೀವ್ರವಾಗಿ ಬಂದನು. ಅಲ್ಲಿ ಆ ಧೂರ್ತನಾದ ಕಲಿಯು ಆಕೆಗೆ ವಂಚನೆಮಾಡಿ ಕಾರ್ಯಸಾಧಿಸಿಕೊಂಡನು. ಇದರಿಂದ ವಿಷ್ಣುವಿನ ಅಜ್ಞೆಯನ್ನು ಆಕೆ ಉಲ್ಲಂಘಿಸಿದ ಹಾಗಾಯಿತು.

೩೩ ಅಲ್ಲಿ ಲೋಕದ ಅಭಿವೃದ್ಧಿಗೆ ಮಾರ್ಗವೆನಿಸಿದುದೂ ರಮ್ಯವಾದುದೂ ಆದ ಆ ಪಾಪಫಲವನ್ನು ಸವಿದರು (ಎಂದರೆ ಅವರು ಪಾಪಕಾರ್ಯವನ್ನು ಆಚರಿಸಿದರು.) ಕಲಿಯು ಆಕೆಯ ಪಾತಿವ್ರತ್ಯವನ್ನು ಕೆಡಿಸಿದನು ಅವರು ಅತ್ತಿಯ ಎಲೆಗಳು ವಾಯು ಇವುಗಳನ್ನೇ ಆಗ ಆಹಾರವಾಗಿ ಸೇವಿಸುತ್ತಿದ್ದರು

**ಸುತಾಃ ಪುತ್ರಾಸ್ತತೋ ಜಾತಾಃ ಸರ್ವೇ ಮ್ಲೇಚ್ಛಾ ಬಭೂವಿರೇ ।**
**ತ್ರಿಂಶೋತ್ತರಂ ನವಶತಂ ತಸ್ಯಾಯುಃ ಪರಿಕೀರ್ತಿತಂ ॥ ೩೪ ॥**

**ಫಲಾನಾಂ ಹವನಂ ಕುರ್ವನ್ ಪತ್ನ್ಯಾ ಸಹ ದಿವಂಗತಃ ।**
**ತಸ್ಮಾಜ್ಜಾತಃ ಸುತಃ ಶ್ರೇಷ್ಠಃ ಶ್ವೇತನಾಮೇತಿ ವಿಶ್ರುತಃ ॥ ೩೫ ॥**

**ದ್ವಾದಶೋತ್ತರವರ್ಷಂ ಚ ತಸ್ಯಾಯುಃ ಪರಿಕೀರ್ತಿತಂ ।**
**ಅನುಹಸ್ತಸ್ಯ ತನಯಃ ಶತಹೀನಂ ಕೃತಂ ಪದಂ ॥ ೩೬ ॥**

**ಕೀನಾಶಸ್ತಸ್ಯ ತನಯಃ ಪಿತಾಮಹಸಮಂ ಪದಂ ।**
**ಮಹಲಲಸ್ತಸ್ಯ ಸುತಃ ಪಂಚಹೀನಂ ಶತಂ ನವ ॥ ೩೭ ॥**

**ತೇನ ರಾಜ್ಯಂ ಕೃತಂ ತತ್ರ ತಸ್ಮಾನ್ನಾಮ್ನಾ ನಗರಂ ಸ್ಮೃತಂ ।**
**ತಸ್ಮಾಚ್ಚ ವಿರದೋ ಜಾತೋ ರಾಜ್ಯಂ ಷಷ್ಟ್ಯುತ್ತರಂ ಸಮಾಃ ॥ ೩೮ ॥**

---

೩೪. ಬಳಿಕ ಆ ಹವ್ಯವತಿಯಲ್ಲಿ ಗಂಡುಮಕ್ಕಳೂ, ಹೆಣ್ಣುಮಕ್ಕಳೂ ಉತ್ಪನ್ನರಾದರು, ಅವರೆಲ್ಲರೂ ಮ್ಲೇಚ್ಛರೆನಿಸಿದರು ಅವರಿಗೆ ಒಂಭೈನೂರ ಮೂವತ್ತು ವರ್ಷಗಳು ಆಯುಸ್ಸು ಎಂಬಡಾಗಿ ಉಕ್ತವಾಗಿದೆ.

೩೫ ಅವನು ಹಣ್ಣುಗಳನ್ನು ಆಹಾರಮಾಡಿಕೊಂಡಿದ್ದು ಹೆಂಡತಿ ಸಮೇತನಾಗಿ ಸ್ವರ್ಗಸ್ಥನಾದನು. ಅವರಿಗೆ ಶ್ವೇತನೆಂಬ ಹೆಸರಿನಿಂದ ಪ್ರಸಿದ್ಧನಾದ ಪುತ್ರಶ್ರೇಷ್ಠನು ಜನಿಸಿದನು.

೩೬. ಅತನಿಗೆ ಹನ್ನೆರಡು ವರ್ಷ ಆಯುಸ್ಸೆಂದು ಉಕ್ತವಾಗಿದ್ದಿತು. ಶ್ವೇತನ ಮಗನಾದ ಅನುಹನು ಅವನಿಗಿಂತ ನೂರುವರ್ಷ ಕಡಮೆಕಾಲ ರಾಜ್ಯವನ್ನು ಆಳಿದನು.

೩೭-೩೮. ಅನುಹನ ಮಗನಾದ ಕೀನಾಶನು ತನ್ನ ಅಜ್ಜನು ಆಳಿದಷ್ಟು ವರ್ಷಗಳಕಾಲ ರಾಜ್ಯಭಾರ ಮಾಡಿದನು ಅವನ ಪುತ್ರನಾದ ಮಹಲ್ಲಲನು ಐದು ವರ್ಷ ಕಡಮೆ, ಒಂಭಯ್ನೂರು ವರ್ಷಗಳು ಆಳಿದನು. (ಆದರಿಂದ ಅದಕ್ಕೆ ಮಾನಗರವೆಂದು ಹೆಸರಾಯಿತು) ಅವನ ಹೆಸರಿನಲ್ಲಿ ನಗರವೊಂದು ರಚಿತವಾಯಿತು. ಅವನಿಗೆ ವಿರದನೆಂಬ ಪುತ್ರನಾದನು ಆತನು ಒಂಭೈನೂರ ಅರವತ್ತು ವರ್ಷ

**ಜ್ಞೇಯಂ ನವಶತಂ ತಸ್ಯ ಸ್ವನಾಮ್ನಾ ನಗರಂ ಕೃತಂ ।**
**ಹನೂಕಸ್ತಸ್ಯ ತನಯೋ ವಿಷ್ಣುಭಕ್ತಿಪರಾಯಣಃ ॥ ೩೯ ॥**

**ಫಲಾನಾಂ ಹವನಂ ಕುರ್ವಂಸ್ತತ್ತ್ವಂ ಹ್ಯಸಿ ಜಯನ್ಸದಾ ।**
**ತ್ರಿಶತಂ ಪಂಚಷಷ್ಟಿಶ್ಚ ರಾಜ್ಯಂ ವರ್ಷಾಣಿ ತತ್ಕೃತಂ ॥ ೪೦ ॥**

**ಸದೇಹಃ ಸ್ವರ್ಗಮಾಯಾತೋ ಮ್ಲೇಚ್ಛಧರ್ಮಪರಾಯಣಃ ।**
**ಆಚಾರಶ್ಚ ವಿವೇಕಶ್ಚ ದ್ವಿಜತಾ ದೇವಪೂಜನಂ ॥ ೪೧ ॥**

**ಕೃತಾನ್ಯೇತಾನಿ ತೇನೈವ ತಸ್ಮಾನ್ಮ್ಲೇಚ್ಛಃ ಸ್ಮೃತೋ ಬುಧೈಃ ।**
**ವಿಷ್ಣುಭಕ್ತ್ಯಗ್ನಿಪೂಜಾ ಚ ಹ್ಯಹಿಂಸಾ ಚ ತಪೋ ದಮಃ ॥ ೪೨ ॥**

**ಧರ್ಮಾಣ್ಯೇತಾನಿ ಮುನಿಭಿಃ ಮ್ಲೇಚ್ಛಾನಾಂ ಹಿ ಸ್ಮೃತಾನಿ ವೈ ।**
**ಮತೋಚ್ಛಿಲಸ್ತಸ್ಯ ಸುತೋ ಹನುಕಸ್ಯೈವ ಭಾರ್ಗವ ॥ ೪೩ ॥**

---

ಆಳಿದನೆಂದು ತಿಳಿಯಬರುವುದು, ಅವನ ಹೆಸರಿನಲ್ಲೂ ಒಂದು ನಗರವನ್ನು ಕಟ್ಟಿದರು ಅವನ ಮಗನಾದ ಹನೂಕನೆಂಬವನು ವಿಷ್ಣುಭಕ್ತನಾಗಿದ್ದನು.

೪೦. ಅವನು ಫಲವನ್ನೇ ಆಹಾರವಾಗಿ ಸೇವಿಸುತ್ತಾ "ತತ್ವಂ ಹ್ಯಸಿ" ಎಂಬುದನ್ನು ಸದಾ ಜಪಮಾಡುತ್ತಾ ಮುನ್ನೂರ ಅರವತ್ತೈದು ವರ್ಷ ರಾಜ್ಯವಾಳಿದನು ಎಂದು ತಿಳಿ.

೪೧. ಹೀಗೆ ಜಪಮಾಡಿದುದರಿಂದ ಇವನು ಮ್ಲೇಚ್ಛಧರ್ಮಾನುಯಾಯಿಯಾಗಿದ್ದರೂ ಸಶರೀರನಾಗಿ ಸ್ವರ್ಗಕ್ಕೆ ಹೋದನು. ಜನ್ಮತಃ ಮ್ಲೇಚ್ಛನಾದಾಗ್ಯೂ ಆಚಾರ ಶೀಲತೆ, ಯುಕ್ತಾಯುಕ್ತಪರಿಜ್ಞಾನ, ದೇವಬ್ರಾಹ್ಮಣಪೂಜೆ, ಮುಂತಾದುವನ್ನು ತಪ್ಪದೆ ನಡೆಯಿಸುತ್ತಿದ್ದನು.

೪೨. ಆದರೂ ವಿದ್ವಾಂಸರು ಅವನನ್ನು ಮ್ಲೇಚ್ಛನೆಂದೇ ಹೇಳುತ್ತಿದ್ದರು. ವಿಷ್ಣುಭಕ್ತಿ, ಅಗ್ನಿಪೂಜೆ, ಅಹಿಂಸೆ, ತಪಸ್ಸು, ಬಹಿರಿಂದ್ರಿಯನಿಗ್ರಹ, ಇವುಗಳೂ ಮ್ಲೇಚ್ಛಧರ್ಮಗಳೆಂದು ಮುನಿಗಳು ತಿಳಿದಿದ್ದಾರೆ.

೪೩. ಅಯ್ಯಾ ಭೃಗುನಂದನನೇ! ಹನೂಕನ ಪುತ್ರನಾದ ಮತೋಚ್ಛಿಲನೆಂಬುವನು ತಂದೆಯ ರಾಜ್ಯವನ್ನು ಒಂಭೈನೂರ ಎಪ್ಪತ್ತು ವರ್ಷಗಳು ಆಳಿದನೆಂದು ಹೇಳಿದೆ.

**ರಾಜ್ಯಂ ನವಶತಂ ತಸ್ಯ ಸಪ್ತತಿಶ್ಚ ಸ್ಮೃತಾಃ ಸಮಾಃ ।**
**ಲೋಮಕಸ್ತಸ್ಯ ತನಯೋ ರಾಜ್ಯಂ ಸಪ್ತಶತಂ ಸಮಾಃ ॥ ೪೪ ॥**

**ಸಪ್ತಸಪ್ತತಿರೇವಾಸ್ಯ ತತ್ಪಶ್ಚಾತ್ಸ್ವರ್ಗತಿಂ ಗತಃ ।**
**ತಸ್ಮಾಜ್ಜಾತಃ ಸುತೋ ನ್ಯೂಹೋ ನಿರ್ಗತಸ್ತೂಹ ಏವ ಸಃ ॥ ೪೫ ॥**

**ತಸ್ಮಾನ್ನ್ಯೂಹಃ ಸ್ಮೃತಃ ಪ್ರಾಜ್ಞೈ ರಾಜ್ಯಂ ಪಂಚಶತಂ ಕೃತಂ ।**
**ಸೀಮಃ ಶಮಶ್ಚ ಭಾವಶ್ಚ ತ್ರಯಃ ಪುತ್ರಾ ಬಭೂವಿರೇ ॥ ೪೬ ॥**

**ನ್ಯೂಹಃ ಸ್ಮೃತೋ ವಿಷ್ಣುಭಕ್ತಸ್ಸೋಽಹಂ ಧ್ಯಾನಪರಾಯಣಃ ।**
**ಏಕದಾ ಭಗವಾನ್ವಿಷ್ಣುಃ ತತ್ಸ್ವಪ್ನೇ ತು ಸಮಾಗತಃ ॥ ೪೭ ॥**

**ವತ್ಸ ನ್ಯೂಹ ಶೃಣುಷ್ವೇದಂ ಪ್ರಲಯಂ ಸಪ್ತಮೇಽಹನಿ ।**
**ಭವಿತಾ ತ್ವಂ ಜನೈಸ್ಸಾರ್ಧಂ ನಾವಮಾರುಹ್ಯ ಸತ್ವರಂ ॥ ೪೮ ॥**

---

೪೪. ಆವನ ಮಗನಾದ ಲೋಮಕನೆಂಬುವನು ಏಳುನೂರ ಎಪ್ಪತ್ತೇಳು ವರ್ಷಕಾಲ ರಾಜ್ಯವಾಳಿದನು. ಆ ಬಳಿಕ ಆವನು ಸ್ವರ್ಗಸ್ಥನಾದನು.

೪೫. ಆಲೋಮನಿಗೆ ನ್ಯೂಹನೆಂಬ ಮಗನಾದನು. ಅವನು ಹುಟ್ಟಿದೊಡನೆ ಊಹನಾಗಿ ನಿರ್ಗಮನಮಾಡಿದ ಕಾರಣದಿಂದ ಅವನಿಗೆ ನ್ಯೂಹನೆಂಬ ಹೆಸರನ್ನು ಪ್ರಾಜ್ಞರು ಇಟ್ಟರು.

೪೬. ಆತನು ಐನೂರು ವರ್ಷಕಾಲ ರಾಜ್ಯವನ್ನು ಆಳಿದನು. ಆನ್ಯೂಹನಿಗೆ ಸಿಮ, ಶಮ, ಭಾವ, ಎಂಬ ಮೂವರು ಮಕ್ಕಳಾದರು.

೪೭. ಆ ನ್ಯೂಹನು ವಿಷ್ಣುವಿನಲ್ಲಿ ಪರಮಭಕ್ತಿಯುಳ್ಳವನಾಗಿ ಸೋಹಂಭಾವದಿಂದ ಕೂಡಿ ಆತ್ಮಧ್ಯಾನಾಸಕ್ತನಾದನು. ಒಂದಾನೊಂದು ದಿವಸ ವಿಷ್ಣುವು ಆತನ ಸ್ವಪ್ನದಲ್ಲಿ ಕಾಣಿಸಿಕೊಂಡನು.

೪೮ ಆ ರೀತಿ ಪ್ರತ್ಯಕ್ಷನಾಗಿ ಅಪ್ಪಾ! ನ್ಯೂಹ, ನಾನು ಹೇಳುವುದನ್ನು ಗಮನವಿಟ್ಟು ಲಾಲಿಸು. ಇಂದಿಗೆ ಏಳನೆಯ ದಿವಸಕ್ಕೆ ಜಗತ್ಪ್ರಳಯ ಸಂಭವಿಸುವುದು. ನೀನು ನಿನ್ನವರೆಲ್ಲರ ಸಮೇತ ಜಾಗ್ರತೆಯಲ್ಲಿ ನಾವೆಯನ್ನೇರಿ ಕುಳಿತುಕೊಳ್ಳಬೇಕು.

ಜೀವನಂ ಕುರು ಭಕ್ತೇಂದ್ರ ಸರ್ವಶ್ರೇಷ್ಠೋ ಭವಿಷ್ಯಸಿ ।
ತಥೇತಿ ಮತ್ವಾ ಸ ಮುನಿರ್ನಾವಂ ಕೃತ್ವಾ ಸುಪುಷ್ಟಿತಾಂ ॥ ೪೯ ॥

ಹಸ್ತತ್ರಿಶತಲಂಬಾಂ ಚ ಪಂಚಾಶದ್ಧಸ್ತವಿಸ್ತೃತಾಂ ।
ತ್ರಿಂಶದ್ಧಸ್ತೋಚ್ಛ್ರಿತಾಂ ರಮ್ಯಾಂ ಸರ್ವಜೀವಸಮನ್ವಿತಾಂ ॥ ೫೦ ॥

ಆರುಹ್ಯ ಸ್ವಕುಲೈಃ ಸಾರ್ಧಂ ವಿಷ್ಣುಧ್ಯಾನಪರೋಽಭವತ್ ।
ಸಾಂವರ್ತಕೋ ಮೇಘಗಣೋ ಮಹೇಂದ್ರೇಣ ಸಮನ್ವಿತಃ ॥ ೫೧ ॥

ಚತ್ವಾರಿಂಶದ್ದಿನಾನ್ಯೇವ ಮಹದ್ವೃಷ್ಟಿಮಕಾರಯತ್ ।
ಸರ್ವಂ ತು ಭಾರತಂ ವರ್ಷಂ ಜಲೈಃ ಪ್ಲಾವ್ಯತು ಸಿಂಧವಃ ॥ ೫೨ ॥

ಚತ್ವಾರೋ ಮಿಲಿತಾಃ ಸರ್ವೇ ವಿಶಾಲಾಯಾಂ ನ-ಚಾಗತಾಃ ।
ಅಷ್ಟಾಶೀತಿಸಹಸ್ರಾಣಿ ಮುನಯೋ ಬ್ರಹ್ಮವಾದಿನಃ ॥ ೫೩ ॥

---

೪೯. ಎಲೈ ಭಕ್ತಾಗ್ರೇಸರನೇ ! ನಾನು ಹೇಳಿದಂತೆ ನಾವೆಯನ್ನೇರಿ ಕುಳಿತು ಜೀವಸಹಿತ ಬದುಕಿಕೊ. ಮುಂದೆ ಸರ್ವಶ್ರೇಷ್ಠನೆನಿಸಿಕೊಳ್ಳುವೆ. ಎಂಬುದಾಗಿ (ಸ್ವಪ್ನದಲ್ಲಿ)ಹೇಳಿದನು. ಮುನಿವೃತ್ತಿಯುವನಾದ ನ್ಯೂಹನು ಹಾಗೆಯೇ ಮಾಡ ಬೇಕೆಂದು ನಿಶ್ಚಯಮಾಡಿಕೊಂಡನು.

೫೦-೫೧. ಬಳಿಕ ಅವನು ಮುನ್ನೂರು ಹಸ್ತಉದ್ದ, ಐವತ್ತು ಹಸ್ತ ಅಗಲ, ಮುವ್ವತ್ತು ಹಸ್ತ ಎತ್ತರ ಉಳ್ಳದ್ದಾಗಿ ಸುಂದರವೂ ದೃಢವೂ ಆಗಿರುವ ನಾವೆಯನ್ನು ನಿರ್ಮಿಸಿ ಅದರಲ್ಲಿ ತಮ್ಮ ಉಪಯೋಗಕ್ಕೆ ಬೇಕಾದ ಸರ್ವಜೀವಿಗಳನ್ನೂ ಇರಿಸಿ ತನ್ನವರೆಲ್ಲ ಜನರೊಡನೆ ಆ ನಾವೆಯಲ್ಲಿ ಕುಳಿತು ಮಹಾವಿಷ್ಣುವನ್ನು ಧ್ಯಾನಮಾಡು ವುದರಲ್ಲಿ ಆಸಕ್ತನಾದನು.

೫೨-೫೩. ಬಳಿಕ ಜಗತ್ಪ್ರಳಯಾರ್ಥವಾಗಿ ಸಂವರ್ತಕವೆಂಬ ಮೇಘ ಸಮೂಹವು ಮಹೇಂದ್ರನ ಸಾನ್ನಿಧ್ಯವುಳ್ಳದ್ದಾಗಿ ಬಂದು ನಲವತ್ತನಾಲ್ಕು ದಿವಸಗಳ ವರೆಗೆ ಅಮೃತವಾಗಿ ಮಳೆಯನ್ನು ಸುರಿಸಿದುವು. ಭಾರತ ವರ್ಷವೆಲ್ಲವೂ ನೀರಿನಿಂದ ಮುಳುಗಿತು. ನಾಲ್ಕು ಸಮುದ್ರಗಳೂ ಪರಸ್ಪರ ಏಕವಾದುವು.

ನ್ಯೂಹಶ್ಚ ಸ್ವಕುಲೈಸ್ಸಾರ್ಧಂ ಶೇಷಾಸ್ಸರ್ವೇ ವಿನಾಶಿತಾಃ ।
ತದಾ ಚ ಮುನಯಸ್ಸರ್ವೇ ವಿಷ್ಣುಮಾಯಾಂ ಪ್ರತುಷ್ಟುವುಃ ॥ ೫೪ ॥

॥ ಮುನಯ ಊಚುಃ ॥

ನಮೋ ದೇವ್ಯೈ ಮಹಾಕಾಲ್ಯೈ ದೇವಕ್ಯೈ ಚ ನಮೋನಮಃ ।
ಮಹಾಲಕ್ಷ್ಮ್ಯೈ ವಿಷ್ಣುಮಾತ್ರೇ ರಾಧಾದೇವ್ಯೈ ನಮೋನಮಃ ॥ ೫೫ ॥

ರೇವತ್ಯೈ ಪುಷ್ಪವತ್ಯೈ ಚ ಸ್ವರ್ಣವತ್ಯೈ ನಮೋನಮಃ ।
ಕಾಮಾಕ್ಷ್ಯಾಯೈ ಚ ಮಾಯಾಯೈ ನಮೋ ಮಾತ್ರೇ ನಮೋನಮಃ ॥೫೬॥

ಮಹಾವಾತಪ್ರಭಾವೇನ ಮಹಾಮೇಘರವೇಣ ಚ ।
ಜಲಧಾರಾಭಿರುಗ್ರಾಭಿರ್ಭಯಂ ಜಾತಂ ಹಿ ದಾರುಣಂ ॥ ೫೭ ॥

ತಸ್ಮಾದ್ಭಯಾದ್ಭೈರವಿ ತ್ವಮಸ್ಮಾನ್ ಸಂರಕ್ಷ ಕಿಂಕರಾನ್ ।
ತದಾ ಪ್ರಸನ್ನಾ ಸಾ ದೇವೀ ಜಲಂ ಶಾಂತಂ ತಯಾ ಕೃತಂ ॥ ೫೮ ॥

---

೫೪. ಇಷ್ಟಾದರೂ ವಿಶಾಲಾ ಎಂಬ ಆ ಪ್ರದೇಶಕ್ಕೆ ಜಲವು ವ್ಯಾಪಿಸಲಿಲ್ಲ. ಋಷಿಗಳು, ಬ್ರಹ್ಮವಾದಿಗಳು ಮೊದಲಾದ ಎಂಭತ್ತೆಂಟು ಸಾವಿರ ಮಂದಿಯೂ ಮತ್ತು ಸಪರಿವಾರನಾದ ನ್ಯೂಹನೂ ಮಾತ್ರ ಉಳಿದರು, ಮಿಕ್ಕವರೆಲ್ಲಾ ನಾಶವಾದರು. ಆಗ ಋಷಿಗಳೆಲ್ಲರೂ ವಿಷ್ಣುವಿನ ಮಾಯೆಯನ್ನು ಹೊಗಳಿದರು.

೫೫ ಋಷಿಗಳು ಹೊಗಳಿದರೀತಿ— ಮಹಾದೇವಿಯೇ, ಮಹಾಕಾಲಿಯೇ ನಮಸ್ಕಾರ, ದೇವಕೀದೇವಿಯೇ ನಮಸ್ಕಾರ. ಮಹಾಲಕ್ಷ್ಮಿಯೇ, ವಿಷ್ಣುಶಕ್ತಿಯೇ, ರಾಧಾದೇವಿಯೇ ನಿನಗೆ ನಮಸ್ಕಾರ.

೫೬ ರೇವತೀದೇವಿ, ಪುಷ್ಪವತೀದೇವಿ ಸ್ವರ್ಣವತೀದೇವಿ, ನಿನಗೆ ನಮಸ್ಕಾರ, ಕಾಮಾಕ್ಷೀದೇವಿಯೇ, ಆದಿಮಾಯೆಯೇ, ಜಗದಂಬೇ ನಿನಗೆ ನಮಸ್ಕಾರ.

೫೭ ಈಗ ಭೋರ್ಗರೆಯುವ ಬಿರುಗಾಳಿಯ ರಭಸದಿಂದಲೂ ಸಿಡಿಲು ಗುಡುಗುಗಳ ಅದ್ಭುತ ಶಬ್ದದಿಂದಲೂ ಭಯಂಕರವಾದ ಈ ಮಹಾವೃಷ್ಟಿಯಿಂದಲೂ ಎಲ್ಲರಿಗೂ ದಾರುಣವಾದ ಭಯವುಂಟಾಗಿದೆ.

೫೮. ಎಲೌ ಭೈರವಿಯೇ! ಕಿಂಕರರಾದ ನಮ್ಮನ್ನು ಈ ಭಯದಿಂದ ರಕ್ಷಿಸು.'' ಎಂದು ಸ್ತುತಿಸಿದರು. ಆಗ ದೇವಿಯು ಪ್ರಸನ್ನೆಯಾಗಿ ಉಕ್ಕಿ ಬರುತ್ತಿದ್ದ ಜಲರಾಶಿಯನ್ನು ಶಮನಮಾಡಿದಳು.

ಅಬ್ದಾಂತರೇ ಮಹೀ ಸರ್ವಾ ಸ್ಥಲೀ ಭೂತ್ವಾ ಪ್ರದೃಶ್ಯತೇ ।
ಆರಾಚ್ಚ ಶಿಷಿಣಾ ನಾಮ ಹಿಮಾದ್ರೇಸ್ತಟ ಭೂಮಯಃ ॥ ೫೯ ॥

ನ್ಯೂಹಸ್ತತ್ರ ಸ್ಥಿತೋ ನಾವಮಾರುಹ್ಯ ಸ್ವಕುಲೈಸ್ಸಹ ।
ಜಲಾಂತೇ ಭೂಮಿಮಾಗತ್ಯ ತತ್ರ ವಾಸಂ ಕರೋತಿ ಸಃ ॥ ೬೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಯುಗ
ಖಂಡಾಪರಪರ್ಯಾಯೇ ದ್ವಾಪರನೃಪೋಪಾಖ್ಯಾನಂ ನಾಮ
ಚತುರ್ಥೋಽಧ್ಯಾಯಃ



---

೫೯. ಒಂದು ವರ್ಷದೊಳಗಾಗಿ ಆ ಪ್ರದೇಶವೆಲ್ಲಾ ನೀರು ಇಂಗಿ ಸೊಗಸಾದ ನೆಲವಾಗಿ ಕಾಣಿಸಿತು. ಹಿಮಾಲಯದ ತಪ್ಪಲ ಸಮೀಪದಲ್ಲಿರುವ ಆ ಪ್ರದೇಶವು ಶಿಷಿಣಾ ಎಂಬ ಹೆಸರಿನಿಂದ ಕರೆಯಲ್ಪಟ್ಟಿತು.

೬೦. ನ್ಯೂಹನು ತನ್ನವರೆಲ್ಲರೊಡನೆ ನಾವೆಯಲ್ಲಿ ಕುಳಿತೇ ಇದ್ದನು. ಆ ಜಲ ರಾಶಿಯನ್ನು ದಾಟಿ ಆ ಶಿಷಿಣಾ ಪ್ರದೇಶಕ್ಕೆ ಬಂದು ಅಲ್ಲಿ ವಾಸಮಾಡತೊಡಗಿದನು.

ಇಲ್ಲಿಗೆ ಶ್ರೀ ಭವಿಷ್ಯಪುರಾಣದ ಪ್ರತಿಸರ್ಗಪರ್ವದ ಪ್ರಥಮಖಂಡದಲ್ಲಿ
ದ್ವಾಪರಯುಗದ ರಾಜರ ಉಪಾಖ್ಯಾನ ವಿವರಣೆಯೆಂಬ
ನಾಲ್ಕನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ಪ್ರಥಮಖಂಡೇ
## ಪಂಚಮೋಽಧ್ಯಾಯಃ

---

॥ ಶೌನಕ ಉವಾಚ ॥

ಸಾಂಪ್ರತಂ ವರ್ತತೇ ಯೋ ವೈ ಪ್ರಲಯಾಂತೇ ಮುನೀಶ್ವರ ।
ದಿವ್ಯದೃಷ್ಟಿಪ್ರಭಾವೇನ ಜ್ಞಾತಂ ಬ್ರೂಹಿ ತತಃ ಪರಂ ॥ ೧ ॥

॥ ಸೂತ ಉವಾಚ ॥

ನ್ಯೂಹೋ ನಾಮ ಸ್ಮೃತೋ ಮ್ಲೇಚ್ಛೋ ವಿಷ್ಣುಮೋಹಂ ತದಾಕರೋತ್
ತದಾ ಪ್ರಸನ್ನೋ ಭಗವಾಂಸ್ತಸ್ಯ ವಂಶಃ ಪ್ರವರ್ಧಿತಃ ॥ ೨ ॥

---

## ಐದನೆಯ ಅಧ್ಯಾಯ

೧. ಶೌನಕ ಮುನಿಯು ಕೇಳುತ್ತಾನೆ—ಸ್ವಾಮಿ ಸೂತ ಮುನಿವರ್ಯ! ಪ್ರಳಯವಾದ ಮೇಲೆ ಅಲ್ಲಿಂದ ಮುಂದೆ ಈಗ ಹೇಗಿದೆಯೆಂಬುದನ್ನು ನಿನ್ನ ದಿವ್ಯ ದೃಷ್ಟಿಪ್ರಭಾವದಿಂದ ತಿಳಿದಷ್ಟು ಹೇಳಿ ಎಂದನು.

೨. ಸೂತ ಪುರಾಣಿಕನು ಹೇಳುತ್ತಾನೆ—ಪ್ರಳಯವೆಲ್ಲಾ ಕಳೆದಮೇಲೆ, ಆ ನ್ಯೂಹನೆಂಬ ಮ್ಲೇಚ್ಛನು ವಿಷ್ಣುವಿನಲ್ಲಿ ಆಸಕ್ತಿಹುಟ್ಟಿ ಸ್ತುತಿಸಿದನು. ಆಗ ಭಗವಂತನು ಅವನಲ್ಲಿ ಪ್ರಸನ್ನನಾದನು. ಅವನ ವಂಶವು ಅಭಿವೃದ್ಧಿಯಾಯಿತು.

ಮ್ಲೇಚ್ಛಭಾಷಾ ಕೃತಾನೇನ ವೇದವಾಕ್ಯಪರಾಙ್ಮುಖಾ ।
ಕಲೇಶ್ಚ ವೃದ್ಧಯೇ ಬ್ರಾಹ್ಮೀಂ ಭಾಷಾಂ ಕೃತ್ವಾಪಶಬ್ದಗಾಂ ॥ ೩ ॥

ನ್ಯೂಹಾಯ ದತ್ತವಾನ್ದೇವೋ ಬುದ್ಧೀಶೋ ಬುದ್ಧಿಗಃ ಸ್ವಯಂ ।
ವಿಲೋಮಂ ಚ ಕೃತಂ ನಾಮ ನ್ಯೂಹೇನ ತ್ರಿಸುತಸ್ಯ ವೈ ॥ ೪ ॥

ಸಿಮಶ್ಚ ಹಾಮಶ್ಚ ತಥಾ ಯಾಕೂತೋ ನಾಮವಿಶ್ರುತಃ ।
ಯಾಕೂತಃ ಸಪ್ತಪುತ್ರಾಶ್ಚ ಜುಮ್ರೋ ಮಾಜೂಜ ಏವ ಸಃ ॥ ೫ ॥

ಮಾದೀ ತಥಾ ಚ ಯೂನಾನಸ್ತೂವಲೋಮಸಕಸ್ತಥಾ ।
ತೀರಾಸಶ್ಚ ತಥಾ ತೇಷಾಂ ನಾಮಭಿರ್ದೇಶ ಉಚ್ಯತೇ ॥ ೬ ॥

ಜುಮ್ರಾ ದಶ ಕನಾಬ್ಜಶ್ಚ ರೀಫತಶ್ಚ ತಜರ್ಮರುಃ ।
ತನ್ನಾಮ್ನಾ ಚ ಸ್ಮೃತಾ ದೇಶಾ ಯೂನಾದ್ಯಾ ಯೇ ಸುತಾಃ ಸ್ಮೃತಾಃ ॥೭॥

---

೩. ಆ ನ್ಯೂಹನು ಮ್ಲೇಚ್ಛಭಾಷೆಯೇ ಒಂದು ಇರಬೇಕೆಂದೂ ಅದರಿಂದ ಕಲಿಯನ್ನು ವೃದ್ಧಿಪಡಿಸಬಹುದೆಂದೂ ಯೋಚಿಸಿ ವೇದಭಾಷೆಗೆ ವ್ಯತಿರಿಕ್ತವೂ ಅಪಶಬ್ದ ಭೂಯಿಷ್ಟವೂ ಆದ ಬ್ರಾಹ್ಮೀ ಎಂಬ ಭಾಷೆಯನ್ನು ಏರ್ಪಡಿಸಿದನು.

೪. ಬುದ್ಧಿಗೆ ಒಡೆಯನೂ ಬುದ್ಧಿಪ್ರದನೂ ಆದ ಆ ದೇವದೇವನು ಆ ನ್ಯೂಹನು ಕೇಳಿಕೊಳ್ಳದಿದ್ದರೂ ಅವನಿಗೆ ತಾನಾಗಿಯೇ ಈ ಬುದ್ಧಿಯನ್ನು ಕೊಟ್ಟನು. ಆ ನ್ಯೂಹನು ತನ್ನ ಮೂವರು ಪುತ್ರರ ಹೆಸರುಗಳನ್ನೇ ವಿಲೋಮ (ತಲೆಕೆಳಗು) ಮಾಡಿದನು.

೫-೬ ಅಂದಿನಿಂದ ಅವರಿಗೆ ಸಿಮ, ಹಾಮ, ಯಾಕೂತ, ಎಂಬ ಹೆಸರು ಪ್ರಸಿದ್ಧಿಯಾಯಿತು. ಯಾಕೂತನಿಗೆ, ಜುಮ್ರಾ, ಮಾಜೂಜ, ಮಾದೀ, ಯೂನಾನ, ಊವಲೋಮ, ಸಕ, ತೀರಾಸ ಎಂಬ ಏಳುಮಂದಿ ಮಕ್ಕಳು ಇದ್ದರು. ಇವರ ಹೆಸರನ್ನು ಅನುಸರಿಸಿ ಇವರ ಸ್ವಾಧೀನದಲ್ಲಿದ್ದ ದೇಶಗಳಿಗೂ ಅದೇ ಹೆಸರೇ ವ್ಯವಹಾರದಲ್ಲಿ ರೂಢಿಗೆ ಬಂದಿತು.

೭. ಜುಮ್ರನಿಗೆ ಕನಾಬ್ಜ, ರಿಫತ, ತಜ, ಮತ್ತು ಮುಂತಾದ ಹತ್ತುಜನ ಮಕ್ಕಳು ಇದ್ದರು. ಅವರ ಸ್ವಾಧೀನದಲ್ಲಿದ್ದ ದೇಶಗಳು ಅವರ ಹೆಸರಿನಿಂದಲೇ ಕರೆಯಲ್ಪಡುತ್ತಿದ್ದುವು.

ಇಲೀಶಸ್ತರಲೀಶಶ್ಚ ಕಿತ್ತೀಹೂದಾನಿರುಚ್ಯತೇ ।
ಚತುರ್ಭಿರ್ನಾಮಭಿರ್ದೇಶಾಸ್ತೇಷಾಂ ತೇಷಾಂ ಪ್ರಚಕ್ರಿರೇ ॥ ೮ ॥

ದ್ವಿತೀಯತನಯಾದ್ಧಾಮಾತ್ಸುತಾಶ್ಚತ್ವಾರ ಏವ ತೇ ।
ಕುಶೋ ಮಿಶ್ರಶ್ಚ ಕೂಜಶ್ಚ ಕನಆಂಸ್ತತ್ರ ನಾಮಭಿಃ ॥ ೯ ॥

ದೇಶಾಃ ಪ್ರಸಿದ್ಧಾ ಮ್ಲೇಚ್ಛಾನಾಂ ಕುಶಾತ್ ಷಟ್ತನಯಾಃ ಸ್ಮೃತಾಃ ।
ಸವಾ ಚೈವ ಹಬೀಲಶ್ಚ ಸರ್ವತೋರಗಮಸ್ತಥಾ ॥ ೧೦ ॥

ತಥಾ ಸವತಿಕಾ ನಾಮ ನಿಮರೂಹೋ ಮಹಾಬಲಃ ।
ತೇಷಾಂ ಪುತ್ರಾಶ್ಚ ಕಲನಃ ಸಿನಾರೋರಕ ಉಚ್ಯತೇ ॥ ೧೧ ॥

ಅಕ್ಷದೋ ಬಾವುನಶ್ಚೈವ ರಸನಾದೇಶಕಾಶ್ಚ ತೇ ।
ಶ್ರಾವಯಿತ್ವಾ ಮುನೀನ್ ಸೂತೋ ಯೋಗನಿದ್ರಾವಶಂ ಗತಃ ॥ ೧೨ ॥

ದ್ವಿಸಹಸ್ರೇ ಶತಾಬ್ದಾಂತೇ ಬುಧ್ವಾ ಪುನರಥಾಬ್ರವೀತ್ ।
ಸಿಮುವಂಶಂ ಪ್ರವಕ್ಷ್ಯಾಮಿ ಸಿಮೋ ಜ್ಯೇಷ್ಠಃ ಸ ಭೂಪತಿಃ ॥ ೧೩ ॥

---

೮. ಯೂನಾನನಿಗೆ ಇಲೀಶ, ತರಲೀಶ, ಕಿತ್ತೀ, ಹೂದಾನಿ, ಎಂಬ ನಾಲ್ವರು ಮಕ್ಕಳು ಅವರ ಹೆಸರಿನಲ್ಲಿ ನಾಲ್ಕುದೇಶಗಳನ್ನು ಆವರೇ ಏರ್ಪಡಿಸಿದರು.

೯. ನ್ಯೂಹನ ಎರಡನೇ ಮಗನಾದ ಹಾಮನಿಗೆ ಕುಶ, ಮಿಶ್ರ, ಕೂಜ, ಕನಆಮ ಎಂಬ ನಾಲ್ವರು ಮಕ್ಕಳಾದರು. ಅವರವರ ಆಳ್ವಿಕೆಗೊಳಪಟ್ಟ ದೇಶಗಳು ಅವರವರ ಹೆಸರಿನಿಂದಲೇ ಪ್ರಸಿದ್ಧವಾದ ಮ್ಲೇಚ್ಛದೇಶಗಳಾದುವು.

೧೦-೧೨. ಹಾಮನ ಹಿರಿಯ ಮಗನಾದ ಕುಶನಿಗೆ ಸವಾ, ಹಬೀಲ, ಸರ್ವತೋರಗಮ, ಸವತಿಕಾ, ನಿಮರೂಹ, ಮಹಾಬಲ, ಎಂಬ ಆರು ಮಂದಿ ಮಕ್ಕಳು ಆದರು. ಕಲನ, ಸಿನಾರೋರಕ, ಅಕ್ಷದ, ಬಾವುನ (ಬೋಬುನ), ರಸನಾ, ದೇಶಕ ಎಂಬವರು ಸವಾ ಮುಂತಾದ ಆರು ಜನ ಮಕ್ಕಳು. ಹೀಗೆ ನ್ಯೂಹನ ಮಕ್ಕಳು ಮೊಮ್ಮಕ್ಕಳು ಮುಂತಾದವರ ವಿಚಾರವನ್ನು ಆ ಶೌನಕಾದಿ ಮುನಿಗಳೆಲ್ಲರಿಗೂ ತಿಳಿಸಿ ಸೂತಪುರಾಣಿಕನು ಯೋಗನಿದ್ರಾವಶರಾದನು.

೧೩. ಬಳಿಕ ಎರಡುಸಾವಿರದನೂರು ವರ್ಷಗಳ ಕೊನೆಯಲ್ಲಿ ಸೂತಪುರಾಣಿಕನು ಎಚ್ಚರಗೊಂಡು ಮತ್ತೆ ಹೇಳಲು ತೊಡಗಿದನು. ಶೌನಕಾದಿಗಳೇ ! ಈಗ ಸಿಮನ ವಂಶದ ವಿವರವನ್ನು ಹೇಳುತ್ತೇನೆ ಕೇಳಿ.

ರಾಜ್ಯಂ ಪಂಚಶತಂ ವರ್ಷಂ ತೇನ ಮ್ಲೇಚ್ಛೇನ ಸತ್ಕೃತಮ್ ।
ಅರ್ಕಸ್ಸದಸ್ತಸ್ಯ ಸುತಶ್ಚತುಸ್ತ್ರಿಂಶಚ್ಚ ರಾಜ್ಯಕಮ್ ॥ ೧೪ ॥

ಚತುಶ್ಶತಂ ಪುನಜ್ಞೇಯಂ ಸಿಂಹ್ಲಸ್ತತ್ತನಯೋಽಭವತ್ ।
ರಾಜ್ಯಂ ತಸ್ಯ ಸ್ಮೃತಂ ತತ್ರ ಷಷ್ಠ್ಯುತ್ತರಚತುಃ ಶತಮ್ ॥ ೧೫ ॥

ಇವ್ರಸ್ತಸ್ಯ ಸುತೋ ಜ್ಞೇಯಃ ಪಿತುಸ್ತುಲ್ಯಂ ಕೃತಂ ಪದಮ್ ।
ಘಲಜಸ್ತಸ್ಯ ತನಯಶ್ಚತ್ವಾರಿಂಶದ್ದ್ವಯಂ ಶತಮ್ ॥ ೧೬ ॥

ರಾಜ್ಯಂ ಕೃತಂ ತು ತಸ್ಮಾಚ್ಚ ರಊಾ ನಾಮ ಸುತಃ ಸ್ಮೃತಃ ।
ಸಪ್ತತ್ರಿಂಶಚ್ಚ ದ್ವಿಶತಂ ತಸ್ಯ ರಾಜ್ಯಂ ಪ್ರಕೀರ್ತಿತಂ ॥ ೧೭ ॥

ತಸ್ಮಾಚ್ಚ ಜೂಜ ಉತ್ಪನ್ನಃ ಪಿತುಸ್ತುಲ್ಯಂ ಕೃತಂ ಪದಮ್ ।
ನಹೂರಸ್ತಸ್ಯ ತನಯೋ ತ್ರಯಃ ಷಷ್ಟ್ಯುತ್ತರಂ ಶತಮ್ ।
ರಾಜ್ಯಂ ಚಕಾರ ನೃಪತಿರ್ಬಹು ಶತ್ರೂನ್ ವಿಹಿಂಸಯನ್ ॥ ೧೮ ॥

---

೧೪ ಆ ನ್ಯೂಹನಿಗೆ ಸಿಮಭೂಪಾಲನೇ ಹಿರಿಯಮಗ, ಆ ಮ್ಲೇಚ್ಛರಾಜನು ಐನೂರು ವರ್ಷಕಾಲ ರಾಜ್ಯವನ್ನು ಆಳಿದನು. ಬಳಿಕ ಅವನ ಪುತ್ರನಾದ ಅರ್ಕಸ್ಸದ ನೆಂಬವನು ನಾನೂರಮೂವತ್ತನಾಲ್ಕು ವರ್ಷಕಾಲ ರಾಜ್ಯವಾಳಿದನು.

೧೫. ಬಳಿಕ ಅವನ ಮಗನಾದ ಸಿಂಹ್ಲ (ಸಿಲ್ಹ) ನು ನಾನೂರಅರವತ್ತು ವರ್ಷಕಾಲ ರಾಜ್ಯವಾಳಿದನು. ಅವನಿಗೆ ಇವ್ರನೆಂಬ ಪುತನಾದನು.

೧೬. ಆ ಇವ್ರನು ತಂದೆಯು ಆಳಿದಷ್ಟು ವರ್ಷವೇ ರಾಜ್ಯವಾಳಿದನು. ಅವನ ಮಗನು ಘಲಜನು ಆತನು ಇನ್ನೂರ ನಲವತ್ತು ವರ್ಷಕಾಲ ರಾಜ್ಯವಾಳಿದನು.

೧೭ ಅವನಿಗೆ ರವೂ ಎಂಬ ಪುತ್ರನು ಜನಿಸಿದನು. ಆ ರವೂವನು ಇನ್ನೂರ ಮೂವತ್ತೇಳು ವರ್ಷಗಳು ರಾಜ್ಯಭಾರ ಮಾಡಿದನು.

೧೮. ಆ ರವೂವನಿಗೆ ಜೂಜನೆಂಬ ಪುತ್ರನು ಜನಿಸಿದನು. ಆ ರಾಜನು ತಂದೆಯು ಆಳಿದಷ್ಟು ವರ್ಷವೇ ರಾಜ್ಯಭಾರ ಮಾಡಿದನು. ಬಳಿಕ ಅವನ ಮಗನಾದ ನಹೂರನು ರಾಜನಾಗಿ ನೂರಅರವತ್ತುಮೂರು ವರ್ಷಗಳು ರಾಜ್ಯಭಾರ ಮಾಡಿ ಶತ್ರುಗಳನ್ನು ಧ್ವಂಸಮಾಡಿದನು.

ತಾಹರಸ್ತಸ್ಯ ತನಯಃ ಪಿತುಸ್ತುಲ್ಯಂ ಕೃತಂ ಪದಮ್ ।
ತಸ್ಮಾತ್ಪುತ್ರೋಽವಿರಾಮಶ್ಚ ನಹೂರೋ ಹಾರನಸ್ತ್ರಯಃ ॥ ೧೯ ॥

ಏವಂ ತೇಷಾಂ ಸ್ಮೃತಾ ವಂಶಾ ನಾಮಮಾತ್ರೇಣ ಕೀರ್ತಿತಾಃ ।
ಸರಸ್ವತ್ಯಾಶ್ಚ ಶಾಪೇನ ಮ್ಲೇಚ್ಛಭಾಷಾ ಮಹಾಧಮಾಃ ॥ ೨೦ ॥

ತೇಷಾಂ ವೃದ್ಧಿಃ ಕಲೌ ಚಾಸೀತ್ ಸಂಕ್ಷೇಪೇಣ ಪ್ರಕೀರ್ತಿತಾ ।
ಸಂಸ್ಕೃತಸ್ಯೈವ ವಾಣೀ ತು ಭಾರತಂ ವರ್ಷ ಮೂಹ್ಯತಾಮ್ ॥ ೨೧ ॥

ಅನ್ಯಖಂಡೇ ಗತಾ ಸ್ಯೈವ ಮ್ಲೇಚ್ಛಾ ಹ್ಯಾನಂದಿನೋಽಭವನ್ ।
ಏವಂ ತೇ ವಿಪ್ರ ಕಥಿತಂ ವಿಷ್ಣುಭಕ್ತದ್ವಿಜೈಃ ಸಹ ॥ ೨೨ ॥

॥ ವ್ಯಾಸ ಉವಾಚ ॥

ತಚ್ಛ್ರುತ್ವಾ ಮುನಯಸ್ಸರ್ವೇ ವಿಶಾಲಾಯಾಂ ನಿವಾಸಿನಃ ।
ನರಂ ನಾರಾಯಣಂ ದೇವಂ ಸಂಪೂಜ್ಯ ವಿನಯಾನ್ವಿತಾಃ ॥ ೨೩ ॥

---

೧೯. ಬಳಿಕ ನಹೂರನ ಮಗನಾದ ತಾಹರನೆಂಬವನು ಪಟ್ಟಕ್ಕೆ ಬಂದನು. ಆತನು ತಂದೆಯು ರಾಜ್ಯಭಾರಮಾಡಿದಷ್ಟೇ ವರ್ಷ ರಾಜ್ಯಭಾರ ಮಾಡಿದನು. ಅವನಿಗೆ ಅವಿರಾಮ, ನಹೂರ, ಹಾರನ ಎಂಬ ಮೂವರು ಮಕ್ಕಳು.

೨೦-೨೧. ಈ ಪ್ರಕಾರ ಅವರ ವಂಶಗಳು ಹೆಸರುಮಾತ್ರಕ್ಕೆ ಕೀರ್ತಿತಗಳಾಗಿ ಭಾಷೆಯನ್ನು ಅಪಶಬ್ದಭೂಯಿಷ್ಟವಾಗಿ ಮಾಡಿದ್ದರಿಂದ ಸರಸ್ವತೀದೇವಿ ಶಪಿಸಲಾಗಿ ಆ ಶಾಪವಶದಿಂದ ಮ್ಲೇಚ್ಛಭಾಷೆಗಳು ಮಹಾ ಅಧಮಗಳೆಂದು ಭಾವಿತವಾದುವು. ಅವುಗಳಿಗೆ ಕಲಿಯುಗದಲ್ಲಿ ಮಾತ್ರ ಅಭಿವೃದ್ಧಿಯೊದಗಿತು ಎಂಬುದನ್ನು ಸಂಕ್ಷೇಪ ವಾಗಿ ತಿಳಿಸಿತು. ಭರತವರ್ಷದಲ್ಲೆಲ್ಲಾ ಸಂಸ್ಕೃತ ಭಾಷೆಯೇ ಮುಖ್ಯವಾದುದೆಂದು ಹೇಳಬಹುದು.

೨೨. ಈ ಮ್ಲೇಚ್ಛರು ಇತರ ಖಂಡಗಳಿಗೆ ಹೋಗಿ ಅಲ್ಲಿ ಸಂತೋಷ ದಿಂದ ನೆಲಸಿದರು. ಅಯ್ಯಾ ವಿಪ್ರೋತ್ತಮನಾದ ಶೌನಕನೇ! ವಿಷ್ಣುಭಕ್ತರಾದ ದ್ವಿಜ ವೃಂದಸಮೇತನಾದ ನಿನಗೆ ಈ ವಿಚಾರವನ್ನು ತಿಳಿಸಿದ್ದಾಯಿತು ಎಂದು ಹೇಳಿದನು.

೨೩-೨೪. ವ್ಯಾಸರು ಹೇಳುತ್ತಾರೆ:- ಇದನ್ನು ಕೇಳಿ ಋಷಿಗಳೆಲ್ಲರೂ ವಿಶಾಲಾ ಎಂಬ ಆ ಸ್ಥಳದಲ್ಲಿಯೇ ಇರುತ್ತಾ ನರನಾರಾಯಣರನ್ನು ವಿನಯನಮ್ರರಾಗಿ ಪೂಜಿಸಿ

ಧ್ಯಾನಂ ಚಕ್ರುರ್ಮುದಾ ಯುಕ್ತಾ ದ್ವಿಶತಂ ಪರಿವತ್ಸರಾನ್ ।
ತತ್ಪಶ್ಚಾದ್ಬೋಧಿತಾಸ್ಸರ್ವೇ ಶೌನಕಾದ್ಯಾ ಮುನೀಶ್ವರಾಃ ॥ ೨೪ ॥

ಸಂಧ್ಯಾತರ್ಪಣದೇವಾರ್ಚಾಃ ಕೃತ್ವಾ ಧ್ಯಾತ್ವಾ ಜನಾರ್ದನಂ ।
ಲೋಮಹರ್ಷಣಮಾಸೀನಂ ಪಪ್ರಚ್ಛುರ್ವಿನಯಾನ್ವಿತಾಃ ॥ ೨೫ ॥

ವ್ಯಾಸಶಿಷ್ಯ ಮಹಾಭಾಗ ಚಿರಂ ಜೀವ ಮಹಾಮತೇ ।
ಸಾಂಪ್ರತಂ ವರ್ತತೇ ಯೋ ವೈ ರಾಜಾ ತನ್ಮೇ ವದ ಪ್ರಭೋ ॥ ೨೬ ॥

॥ ಸೂತ ಉವಾಚ ॥
ತ್ರಿಸಹಸ್ರಾಬ್ದಸಂಪ್ರಾಪ್ತೇ ಕಲೌ ಭಾರ್ಗವನಂದನ ।
ಅವಂತೇ ಶಂಖನಾಮ್ನಾಸೌ ಸಾಂಪ್ರತಂ ವರ್ತತೇ ನೃಪಃ ॥ ೨೭ ॥

ಮ್ಲೇಚ್ಛದೇಶೇ ಶಕಪತಿರಥ ರಾಜ್ಯಂ ಕರೋತಿ ವೈ ।
ಶೃಣು ತತ್ಕಾರಣಂ ಸರ್ವೇ ಯಥಾ ಯಸ್ಯ ವಿವರ್ಧನಂ ॥ ೨೮ ॥

---

ಸಂತೋಷದಿಂದ ಇನ್ನೂರು ವರ್ಷಕಾಲ ಧ್ಯಾನಯೋಗನಿರತರಾದರು. ಅನಂತರ ಶೌನಕಾದಿ ಋಷಿಗಳೆಲ್ಲರೂ ಧ್ಯಾನವನ್ನು ಮುಗಿಸಿ ಎಚ್ಚರಗೊಂಡರು.

೨೫. ಆ ಋಷಿಗಳು ಹಾಗೆ ಬಹಿರ್ಮುಖರಾಗಿ ಸ್ನಾನ ಸಂಧ್ಯಾವಂದನಾದಿಗಳು, ದೇವರ್ಷಿಪಿತೃತರ್ಪಣ, ದೇವತಾರ್ಚನೆ ಮುಂತಾದುವನ್ನು ಮಾಡಿ ಜನಾರ್ದನನನ್ನು ಧ್ಯಾನಿಸಿ ಅನಂತರ ವಿರಾಮವಾಗಿ ಕುಳಿತಿರುವ ಲೋಮಹರ್ಷಣ ಮುನಿಗಳ ಬಳಿಗೆ ಬಂದು ವಿನಯಪೂರ್ವಕವಾಗಿ ಇಂತೆಂದರು.

೨೬. ಮಹಾಬುದ್ಧಿಶಾಲಿಯೂ ಪೂಜ್ಯನೂ ಎನಿಸಿದ ವ್ಯಾಸ ಶಿಷ್ಯನೇ ! ನೀನು ದೀರ್ಘಾಯುವಾಗಿರು. ಅಯ್ಯಾ ಪ್ರಭುವೇ ! ಈಗ ಯಾವ ರಾಜನಾಗಿದ್ದಾನೆ ಎಂಬುದನ್ನು ನನಗೆ ಹೇಳಬೇಕು ಎಂದು ಪ್ರಶ್ನಿಸಿದರು.

೨೭. ಸೂತಮುನಿಯು ಹೇಳುತ್ತಾನೆ—ಅಯ್ಯಾ ಭೃಗುನಂದನನೇ ! ಕಲಿಯುಗದಲ್ಲಿ ಮೂರುಸಾವಿರ ವರ್ಷಗಳು ಕಳೆದಿರುವ ಈಗ ಅವಂತಿಯಲ್ಲಿ ಶಂಖನೆಂಬವನು ರಾಜನಾಗಿದ್ದಾನೆ.

೨೮. ಮ್ಲೇಚ್ಛದೇಶದಲ್ಲಿ ಈಗ ಶಕಪತಿಯು ರಾಜ್ಯವಾಳುತ್ತಿರುವನು. ಆ ಶಕಪತಿಗೆ ಈ ರಾಜ್ಯಾಭಿವೃದ್ಧಿಯಾದ ಬಗೆಯಂನ್ನೂ ಅದರ ಕಾರಣವೆಲ್ಲವನ್ನೂ ಹೇಳುವೆನು ಕೇಳು.

ದ್ವಿಸಹಸ್ರೇ ಕಲೌ ಪ್ರಾಪ್ತೇ ಮ್ಲೇಚ್ಛವಂಶವಿವರ್ಧಿತಾ ।
ಭೂಮಿರ್ಮ್ಲೇಚ್ಛಮಯೀ ಸರ್ವಾ ನಾನಾಪಥವಿವರ್ಧಿತಾ ॥ ೨೯ ॥

ಬ್ರಹ್ಮಾವರ್ತಮೃತೇ ತತ್ರ ಸರಸ್ವತ್ಯಾಸ್ತಟಂ ಶುಭಂ ।
ಮ್ಲೇಚ್ಛಾಚಾರ್ಯಶ್ಚ ಮೂಶಾಖ್ಯಸ್ತನ್ಮತೈಃ ಪೂರಿತಂ ಜಗತ್ ॥ ೩೦ ॥

ದೇವಾರ್ಚನಂ ದೇವಭಾಷಾ ನಷ್ಟಾ ಪ್ರಾಪ್ತೇ ಕಲೌ ಯುಗೇ ।
ತಲ್ಲಕ್ಷಣಂ ಶೃಣು ಮುನೇ ಮ್ಲೇಚ್ಛಭಾಷಾಶ್ಚತುರ್ವಿಧಾಃ ॥ ೩೧ ॥

ವ್ರಜಭಾಷಾ ಮಹಾರಾಷ್ಟ್ರೀ ಯಾವನೀ ಚ ಗುರುಂಡಿಕಾ ।
ತಾಸಾಂ ಚತುರ್ಲಕ್ಷವಿಧಾ ಭಾಷಾಶ್ಚಾನ್ಯಾಸ್ತಥೈವ ಚ ॥ ೩೨ ॥

ಪಾನೀಯಂ ಚ ಸ್ಮೃತಂ ಪಾನೀ ಬುಭುಕ್ಷಾ ಭೂಖ ಉಚ್ಯತೇ ।
ಪಾನೀಯಂ ಪಾಪಡೀಭಾಷಾ ಭೋಜನಂ ಕಕ್ಕನಂ ಸ್ಮೃತಂ ॥ ೩೩ ॥

---

೨೯. ಕಲಿಯುಗದಲ್ಲಿ ಎರಡುಸಾವಿರ ವರ್ಷಗಳಾದಮೇಲೆ ಮ್ಲೇಚ್ಛರ ವಂಶವು ಅಭಿವೃದ್ಧಿಯಾಯಿತು. ಮ್ಲೇಚ್ಛರು ನಾನಾ ಪ್ರಕಾರದಿಂದ ಅಭಿವೃದ್ಧಿ ಹೊಂದಿ ಭೂಮಂಡಲವೆಲ್ಲಾ ಮ್ಲೇಚ್ಛರಿಂದ ತುಂಬಿಹೋಯಿತು.

೩೦. ಬ್ರಹ್ಮಾವರ್ತದಲ್ಲಿ ಶುಭಕರವಾದ ಸರಸ್ವತೀ ನದೀ ತೀರಪ್ರದೇಶ ಹೊರತು ಮಿಕ್ಕ ಪ್ರಪಂಚದ ಭಾಗವೆಲ್ಲಾ ಮ್ಲೇಚ್ಛಗುರುವಾದ ಮೂಶನೆಂಬವನಿಂದ ಸ್ಥಾಪಿತವಾದ ಮತಗಳಿಂದ ತುಂಬಿಹೋಯಿತು.

೩೧. ಕಲಿಯುಗಾರಂಭವಾಗುತ್ತಲೇ ದೇವರಪೂಜೆ, ದೇವಭಾಷೆ ಇವು ಖಿಲವಾದುವು. ಆಯ್ಯಾ ಮುನಿವರ್ಯನೇ! ಆ ಭಾಷೆ ಖಿಲವಾದ ಪ್ರಕಾರವನ್ನು ಕೇಳು,

೩೨. ಮ್ಲೇಚ್ಛಭಾಷೆಗಳಲ್ಲಿ, ವ್ರಜಭಾಷಾ, ಮರಾಟಿ, ಯಾವನೀ, ಗುರುಂಡಿಕಾ, ಎಂದು ನಾಲ್ಕು ವಿಧಗಳು ಏರ್ಪಟ್ಟುವು. ಅವುಗಳಲ್ಲಿ ನಾಲ್ಕುಲಕ್ಷ ಒಳಭೇದಗಳೂ ಹಾಗೆಯೇ ಇತರ ಭಾಷೆಗಳೂ ಏರ್ಪಟ್ಟುವು.

೩೩. ಸಂಸ್ಕೃತ ಭಾಷೆಯಲ್ಲಿದ್ದ ಪಾನೀಯ ಎಂಬ ಪದವು ಮ್ಲೇಚ್ಛಭಾಷೆಯಲ್ಲಿ 'ಪಾನೀ' ಎಂಬದಾಗಿಯೂ, ಬುಭುಕ್ಷಾ ಎಂಬ ಸಂಸ್ಕೃತಪದವು ಭೂಖ್ ಎಂಬದಾಗಿಯೂ ವಿಕಾರ ಹೊಂದಿತು ಇತರ ಭಾಷೆಗಳಲ್ಲಿ ಪಾನೀಯ ಎಂಬುದು ಪಾಪಡೀ ಎಂದೂ ಭೋಜನ ಎಂಬುದು ಕಕ್ಕನ ಎಂದೂ ರೂಢಿಯಾಯಿತು.

**ಇಷ್ಟಿಃಶುದ್ಧರವಃ ಪ್ರೋಕ್ತ ಇಸ್ತಿನೀ ಮುಸಪಾವನೀ ।**
**ಆಹುತಿರ್ವೈ ಆಜು ಇತಿ ದದಾತಿ ಚ ದಧಾತಿ ಚ ॥ ೩೪ ॥**

**ಪಿತೃಪೈತರಭ್ರಾತಾ ಚ ಬ್ರಾದರಃ ಪತಿರೇವ ಚ ।**
**ಸೇತಿ ಸಾ ಯಾವನೀ ಭಾಷಾ ಹ್ಯಶ್ವಶ್ಚಾಸ್ಪಸ್ತಥಾ ಪುನಃ ॥ ೩೫ ॥**

**ಜಾನುಸ್ಥಾನೇ ಜೈನುಶಬ್ದಃ ಸಪ್ತಸಿಂಧುಸ್ತಥೈವ ಚ ।**
**ಸಪ್ತಹಿಂದುರ್ಯಾವನೀ ಚ ಪುನರ್ಜ್ಞೇಯಾ ಗುರುಂಡಿಕಾ ॥ ೩೬ ॥**

**ರವಿವಾರೇ ಚ ಸಂಡೇ ಚ ಫಾಲ್ಗುನೇ ಚೈವ ಫರ್ವರೀ ।**
**ಷಷ್ಟಿಶ್ಚ ಸಿಕ್ಸಟೀ ಜ್ಞೇಯಾ ತದುದಾಹಾರಮೀದೃಶಂ ॥ ೩೭ ॥**

**ಯಾ ಪವಿತ್ರಾ ಸಪ್ತಪುರೀ ತಾಸು ಹಿಂಸಾ ಪ್ರವರ್ತತೇ ।**
**ದಸ್ಯವಃ ಶಬರಾ ಭಿಲ್ಲಾ ಮೂರ್ಖಾ ಆರ್ಯೇ ಸ್ಥಿತಾ ನರಾಃ ॥ ೩೮ ॥**

---

೩೪. ಇಷ್ಟಿಶುದ್ಧರವವೆಂಬುದು ಇಸ್ತನೀಮುಸಪಾನನೀ ಎಂದೂ, ಆಹುತಿ ಎಂಬುದು ಆಜು ಎಂದೂ ದದಾತಿ ಎಂಬುದು ದಧಾತಿ ಎಂದೂ ಬದಲಾವಣೆ ಹೊಂದಿತು.

೩೫. ಪಿತೃ ಎಂಬ ಶಬ್ದವು ಪೈತರ(ಫಾದರ) ಎಂದೂ, ಭ್ರಾತೃ ಎಂಬ ಪದವು ಬ್ರದರ (ಪತಿ) ಎಂದೂ ಪರಿಣಮಿಸಿತು. ಇದೇ ಯಾವನೀಭಾಷೆ. ಅಶ್ವ ಎಂಬುದು ಅಸ್ಪ ಎಂದು ಆಯಿತು.

೩೬. ಜಾನು ಎಂಬ ಪದಕ್ಕೆ ಜೈನು ಎಂದೂ, ಸಪ್ತಸಿಂಧು ಎಂಬ ಪದವು ಸಪ್ತ ಹಿಂದೂ ಎಂದೂ ಬದಲಾಯಿಸಿರುವುದು ಯಾವನೀಭಾಷಾ ಎಂದು ತಿಳಿ. ಇನ್ನು ಗುರುಂಡಿಕಾ ಎಂಬುದರ ವಿಚಾರ ತಿಳಿಯತಕ್ಕದ್ದಾಗಿದೆ.

೩೭. ಭಾನುವಾರ ಎಂಬುದು ಸಂಡೇ ಎಂಬದಾಗಿಯೂ, ಫಾಲ್ಗುಣಮಾಸವೆಂಬುದು ಫರ್ವರೀ (ಪೆಬ್ರುವರಿ) ಎಂಬದಾಗಿಯೂ, ಷಷ್ಠಿ ಎಂಬುದು ಸಿಕ್ಸಟೀ ಎಂದೂ ಬದಲಾವಣೆ ಹೊಂದಿದೆ. ಈ ಉದಾಹರಣೆಗಳಂತೆಯೇ ಮಿಕ್ಕದ್ದನ್ನೂ ತಿಳಿಯಬಹುದು.

೩೮. ಪರಮಪರಿಶುದ್ಧಗಳೆನಿಸಿದ ಅಯೋಧ್ಯಾ, ಮಧುರಾ, ಮಾಯಾ, ಕಾಶೀ, ಕಾಂಚೀ, ಅವಂತಿ, ಪುರೀ, ದ್ವಾರವತಿ ಎಂಬ ಈ ಸಪ್ತಪುರಗಳಲ್ಲೂ ಹಿಂಸಾ

ಮ್ಲೇಚ್ಛದೇಶೇ ಬುದ್ಧಿಮಂತೋ ನರಾ ವೈ ಮ್ಲೇಚ್ಛಧರ್ಮಿಣಃ ।
ಮ್ಲೇಚ್ಛಾಧೀನಾ ಗುಣಾ ಸರ್ವೇಽವಗುಣಾ ಆರ್ಯದೇಶಕೇ　　॥ ೩೯ ॥

ಮ್ಲೇಚ್ಛರಾಜ್ಯಂ ಭಾರತೇ ಚ ತದ್ದ್ವೀಪೇಷು ಸ್ಮೃತಂ ತಥಾ ।
ಏವಂ ಜ್ಞಾತ್ವಾ ಮುನಿಶ್ರೇಷ್ಠ ಹರಿಂ ಭಜ ಮಹಾಮತೇ　　॥ ೪೦ ॥

ತಚ್ಛ್ರುತ್ವಾ ಮುನಯಃ ಸರ್ವೇ ರೋದನಂ ಚಕ್ರಿರೇ ಬಹು　　॥ ೪೧ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಕಲಿಯುಗ ಭೂಪವರ್ಣನಂ ನಾಮ ಪಂಚಮೋಽಧ್ಯಾಯಃ.



---

ಕೃತ್ಯನಡೆಯಲು ಆರಂಭವಾಯಿತು. ಆರ್ಯದೇಶದಲ್ಲಿ ಎತ್ತೆತ್ತಲೂ ಕಡುಮೂರ್ಖರಾದ ದಸ್ಯುಗಳು, ಕಿರಾತರು, ಭಿಲ್ಲರು ಇವರುಗಳು ನಿಂತರು.

೩೯. ಮ್ಲೇಚ್ಛದೇಶದಲ್ಲಿ ಬುದ್ಧಿಶಾಲಿಗಳೆನಿಸಿದ ಜನರೆಲ್ಲಾ ಮ್ಲೇಚ್ಛಧರ್ಮವನ್ನೇ ಅನುಸರಿಸುತ್ತ ಬರಹತ್ತಿದರು. ಮ್ಲೇಚ್ಛಧರ್ಮಕ್ಕೆ ಅನುಸಾರವಾದ ಗುಣಗಳೆಲ್ಲವೂ ಆರ್ಯದೇಶೀಯರ ದೃಷ್ಟಿಯಲ್ಲಿ ಅವಗುಣಗಳೆಂದೇ ಗಣನೆಹೊಂದಿದುವು.

೪೦. ಮ್ಲೇಚ್ಛರಾಜ್ಯವು ಭರತವರ್ಷದಲ್ಲೂ ಅದಕ್ಕೆ ಸೇರಿದ ದ್ವೀಪದಲ್ಲಿಯೂ ಪ್ರಸರಿಸಿತು. ಅಯ್ಯಾ ಮಹಾಮತಿಯೆನಿಸಿದ ಮುನಿವರ್ಯನೇ! ಇದನ್ನೆಲ್ಲಾ ತಿಳಿದುಕೊಂಡು ಹರಿಧ್ಯಾನಮಾಡು" ಎಂದನು ಆ ಮಾತನ್ನು ಕೇಳಿ ಋಷಿಗಳೆಲ್ಲರೂ ದುಃಖದಿಂದ ಬಹುವಾಗಿ ರೋದಿಸಿದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಪ್ರಥಮಖಂಡದಲ್ಲಿ ಕಲಿಯುಗ ಭೂಪವರ್ಣನೆಯೆಂಬ ಐದನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ಪ್ರಥಮಖಂಡೇ
## ಷಷ್ಠೋಽಧ್ಯಾಯಃ

---

॥ ಶೌನಕ ಉವಾಚ ॥

ಬ್ರಹ್ಮಾವರ್ತೇ ಕಥಂ ಮ್ಲೇಚ್ಛಾ ನ ಪ್ರಾಪ್ತಾಃ ಕಾರಣಂ ವದ ।
ಸೂತಃ ಪ್ರಾಹ ಶೃಣುಷ್ವೇದಂ ಸರಸ್ವತ್ಯಾಃ ಪ್ರಭಾವತಃ ॥ ೧ ॥

ಮ್ಲೇಚ್ಛಾಃ ಪ್ರಾಪ್ತಾ ನ ತತ್ರಾಽಽನೇ ಕಾಶ್ಯಪೋ ನಾಮ ವೈ ದ್ವಿಜಃ ।
ಕಲೌ ಪ್ರಾಪ್ತೇ ಸಹಸ್ರಾಬ್ದೇ ಸ್ವರ್ಗಾತ್ ಪ್ರಾಪ್ತಃ ಸುರಾಜ್ಞಯಾ ॥ ೨ ॥

ಆರ್ಯಾವತೀ ಚ ತತ್ಪತ್ನೀ ದಶಪುತ್ರಾನಕಲ್ಮಷಾನ್ ।
ಕಾಶ್ಯಪಾತ್ ಸಾ ಲಬ್ಧವತೀ ತೇಷಾಂ ನಾಮಾನಿ ಮೇ ಶೃಣು ॥ ೩ ॥

---

## ಆರನೆಯ ಅಧ್ಯಾಯ

೧. ಶೌನಕನು ಕೇಳುತ್ತಾನೆ—ಬ್ರಹ್ಮಾವರ್ತದಲ್ಲಿ ಮ್ಲೇಚ್ಛರು ಏತಕ್ಕೆ ವ್ಯಾಪಿಸಲಿಲ್ಲ? ಇದರ ಕಾರಣವನ್ನು ತಿಳಿಸಬೇಕು ಎಂದು ಕೇಳಲಾಗಿ ಸೂತಮುನಿವರ್ಯನು ಹೇಳುತ್ತಾನೆ—ಅಯ್ಯಾ ಶೌನಕ! ಅದರ ಕಾರಣವನ್ನು ಹೇಳುವೆನು ಕೇಳು.

೨. ಸರಸ್ವತಿಯ ಪ್ರಭಾವಾತಿಶಯದಿಂದ ಮ್ಲೇಚ್ಛರು ಆ ಪ್ರಾಂತಕ್ಕೆ ಕಾಲಿಡಲು ಆಗಲಿಲ್ಲ. ಕಲಿಯುಗದಲ್ಲಿ ಒಂದುಸಾವಿರ ವರ್ಷ ಕಳೆದಮೇಲೆ ದೇವತೆಗಳ ಆಜ್ಞೆಯಂತೆ ಕಾಶ್ಯಪನೆಂಬ ಬ್ರಾಹ್ಮಣನು ಸ್ವರ್ಗಲೋಕದಿಂದ ಇಳಿದನು.

೩-೪. ಅವನ ಹೆಂಡತಿಯಾದ ಆರ್ಯಾವತಿಯು ಪರಿಶುದ್ಧಾತ್ಮರಾದ ಹತ್ತು ಮಂದಿ ಮಕ್ಕಳನ್ನು ಪಡೆದಳು. ಅವರುಗಳು ಉಪಾಧ್ಯಾಯ, ದೀಕ್ಷಿತ,

ಉಪಾಧ್ಯಾಯೋ ದೀಕ್ಷಿತಶ್ಚ ಪಾಠಕಃ ಶುಕ್ಲಮಿಶ್ರಕೌ ।
ಅಗ್ನಿಹೋತ್ರೀ ದ್ವಿವೇದೀ ಚ ತ್ರಿವೇದೀ ಪಾಂಡ್ಯ ಏವ ಚ ॥ ೪ ॥

ಚತುರ್ವೇದೀತಿ ಕಥಿತಾ ನಾಮತುಲ್ಯಗುಣಾಃ ಸ್ಮೃತಾಃ ।
ತೇಷಾಂ ಮಧ್ಯೇ ಕಾಶ್ಯಪಶ್ಚ ಸರ್ವಜ್ಞಾನಸಮನ್ವಿತಃ ॥ ೫ ॥

ಕಾಶ್ಮೀರೇ ಪ್ರಾಪ್ತವಾನ್ ಸೋಽಪಿ ಜಗದಂಬಾಂ ಸರಸ್ವತೀಂ ।
ತುಷ್ಟಾವ ಪೂಜನಂ ಕೃತ್ವಾ ರಕ್ತಪುಷ್ಪೈಸ್ತಥಾಕ್ಷತೈಃ ॥ ೬ ॥

ಧೂಪೈರ್ದೀಪೈಶ್ಚ ನೈವೇದ್ಯೈಃ ಪುಷ್ಪಾಂಜಲಿಸಮನ್ವಿತಃ ॥ ೭ ॥

॥ ಕಾಶ್ಯಪ ಉವಾಚ ॥

ಮಾತಃ ಶಂಕರದಯಿತೇ ಮಯಿ ತೇ ಕರುಣಾ ಕುತೋ ನಾಸ್ತಿ ।
ಭೋಽಸಿ ತ್ವಂ ಜಗದಂಬಾ ಜಗತಃ ಕಿಂ ಮಾಂ ಬಹಿರ್ನಯಸಿ ॥ ೮ ॥

---

ಪಾಠಕ, ಶುಕ್ಲ, ಮಿಶ್ರ, ಅಗ್ನಿಹೋತ್ರೀ, ದ್ವಿವೇದಿ, ತ್ರಿವೇದಿ, ಪಾಂಡ, ಚತುರ್ವೇದಿ ಎಂಬ ಹೆಸರುಳ್ಳವರಾಗಿ ಆ ಹೆಸರಿಗೆ ತಕ್ಕಂತೆ ಅದಕ್ಕೆ ಅನುರೂಪವಾದ ಗುಣವುಳ್ಳವರಾಗಿದ್ದರು.

೫. ಸರ್ವವಿದ್ಯಾವಿಶಾರದನಾದ ಕಾಶ್ಯಪನು ಈ ರೀತಿಯಾಗಿ ಅನ್ವರ್ಥವೂ, ಅನುಗುಣವೂ ಆದ ವೃತ್ತಿನಾಮದಿಂದ ಶೋಭಿಸುವ ಮಕ್ಕಳಿಂದೊಡಗೂಡಿ ಶೋಭಿಸುತ್ತಿದ್ದನು.

೬. ಒಂದುಸಾರಿ ಅವನು ಕಾಶ್ಮೀರದೇಶಕ್ಕೆ ಹೋದನು. ಅಲ್ಲಿ ಪೀಠದಲ್ಲಿ ನೆಲಸಿರುವ ಜಗದಂಬೆಯಾದ ಸರಸ್ವತಿಯನ್ನು ರಕ್ತಪುಷ್ಪ, ಅಕ್ಷತೆ, ಧೂಪ, ದೀಪ, ನೈವೇದ್ಯ, ಪುಷ್ಪಾಂಜಲಿ, ಇವುಗಳಿಂದ ಪೂಜಿಸಿ ಸ್ತೋತ್ರಮಾಡಿ ಮೆಚ್ಚಿಸಿದನು. ಕಾಶ್ಯಪನು ಹೇಳುತ್ತಾನೆ

೭. ಶಂಕರ ಎಂದರೆ ಸುಖಪ್ರದನಾದ ಆ ದೇವನ ಪ್ರಿಯೆಯೇ ! ಜಗನ್ಮಾತೆಯೇ ! ನಿನಗೆ ನನ್ನಲ್ಲಿ ಏತಕ್ಕೆ ದಯೆಬರಲಿಲ್ಲ. ನೀನು ಸಮಸ್ತ ಜಗತ್ತಿಗೂ ಮಾತೆಯಲ್ಲವೇ ನನ್ನನ್ನು ಜಗತ್ತಿನಿಂದ ಬಾಹಿರನನ್ನಾಗಿ ಮಾಡಿರುವೆಯಾ ?

೮-೯. ಮಾತೆಯಾದ ಎಲೌ ದೇವಿಯೇ! ದೇವತೆಗಳನ್ನು ಸಲಹುವುದಕ್ಕಾಗಿ ಈ ಧರ್ಮದ್ರೋಹಿಗಳನ್ನು ಧ್ವಂಸಮಾಡು, ಉತ್ತಮವಾಗಿರುವಂತೆ ಭಾಷೆಯನ್ನು

ದೇವಿ ತ್ವಂ ಸುರಹೇತೋರ್ಧರ್ಮದ್ರೋಹಿಣಮಾಶು ಹಂಸಿ ಮಾತಃ ।
ಉತ್ತಮಸಂಸ್ಕೃತಭಾಷಾಂ ತ್ವಂ ಕುರು ಮ್ಲೇಚ್ಛಾಂಶ್ಚ ಮೋಹಯೇಃ ಶೀಘ್ರಂ

ಅಂಬ ತ್ವಂ ಬಹುರೂಪಾ ಹುಂಕಾರಾದ್ಧೂಮ್ರಲೋಚನಂ ಹಂಸಿ ।
ಭೀಮಂ ದುರ್ಗಾದೈತ್ಯಂ ಹತ್ವಾ ಜಗತಾಂ ಸುಖಂ ನಯಸಿ ॥ ೧೦ ॥

ದಂಭಂ ಮೋಹಂ ಘೋರಂ ಗರ್ವಂ ಹತ್ವಾ ಸದಾ ಸುಖಂ ಶೇಷೆ ।
ಬೋಧಯ ಮಾತರ್ಜಗತೋ ದುಷ್ಟಾನ್ ನಷ್ಟಾನ್ ಕುರು ತ್ವಂ ವೈ ।
ತದಾ ಪ್ರಸನ್ನಾ ಸಾ ದೇವೀ ಭೋ ಮುನೇಸ್ತಸ್ಯ ಮಾನಸೇ ॥ ೧೧ ॥

ವಾಸಂ ಕೃತ್ವಾ ದದೌ ಜ್ಞಾನಂ ಮಿಶ್ರದೇಶೇ ಮುನಿರ್ಗತಃ ।
ಸರ್ವಾನ್ ಮ್ಲೇಚ್ಛಾನ್ ಮೋಹಯಿತ್ವಾ ಕೃತ್ವಾಥ ತಾನ್ ದ್ವಿಜನ್ಮನಃ ॥

ಸಂಖ್ಯಾ ದಶಸಹಸ್ರಂ ಚ ನರವೃಂದಂ ದ್ವಿಜನ್ಮನಾಂ ।
ದ್ವಿಸಹಸ್ರಂ ಸ್ಮೃತಾ ವೈಶ್ಯಾಃ ಶೇಷಾಃ ಶೂದ್ರಸುತಾಃ ಸ್ಮೃತಾಃ ॥ ೧೩ ॥

---

ಸಂಸ್ಕಾರಮಾಡಿ ಸಂಸ್ಕೃತವೇ ಶ್ರೇಷ್ಠಭಾಷೆಯೆನಿಸು. ಶೀಘ್ರವಾಗಿ ಮ್ಲೇಚ್ಛರಿಗೆ ಮೋಹ (ಭ್ರಾಂತಿ) ಉಂಟಾಗುವಂತೆ ಮಾಡು.

೧೦-೧೧ "ಅಂಬಾ! ನೀನು ನಾನಾ ರೂಪಧಾರಿಣಿಯಲ್ಲವೆ? ನೀನು ಒಂದುಸಲ ರೋಷದಿಂದ ಹುಂಕರಿಸಿದಮಾತ್ರಕ್ಕೆ ಧೂಮ್ರಲೋಚನನೆಂಬ ದಾನವನು ಮಡಿದನು ಲೋಕಭಯಂಕರನಾಗಿದ್ದ ದುರ್ಗಾಸುರನನ್ನು ಕೊಂದು ಲೋಕಕ್ಕೆ ಸುಖಕೊಟ್ಟೆ ದಂಭ, ಮೋಹ, ಘೋರಗರ್ವ ಇವರನ್ನೆಲ್ಲಾ ಧ್ವಂಸಮಾಡಿ ಸರ್ವದಾ ಸುಖವಾಗಿ ಶಯನಮಾಡಿರುವೆ. ಎಲೌ ಜಗಜ್ಜನನೀ! ಎಚ್ಚರಗೊಳ್ಳಮ್ಮ ನೀನು ಎದ್ದು ಈ ದುಷ್ಟರನ್ನೆಲ್ಲಾ ಧ್ವಂಸಮಾಡು" ಎಂಬುದಾಗಿ ಬಹುವಾಗಿ ಸ್ತುತಿಸಿದನು.

೧೨. ಎಲೈ ಮುನಿಯೇ! ಕೇಳು, ಆಗ ದೇವಿಯು ಪ್ರಸನ್ನೆಯಾಗಿ ಅವನ ಮನಸ್ಸಿನಲ್ಲಿ ನೆಲಸಿ ಅವನಿಗೆ ಜ್ಞಾನವನ್ನು ದಯಪಾಲಿಸಿದಳು, ಆ ಮುನಿಯು ಮಿಶ್ರದೇಶಕ್ಕೆ ಹೋದನು. ಅಲ್ಲಿ ಮ್ಲೇಚ್ಛರನ್ನೆಲ್ಲಾ ಮೋಹಗೊಳಿಸಿ ಅವರನ್ನು ದ್ವಿಜರನ್ನಾಗಿ ಮಾಡಿದನು.

೧೩. ಹೀಗೆ ತಾನು ಏರ್ಪಡಿಸಿದ್ದರಿಂದ ಹತ್ತುಸಾವಿರ ಮಂದಿ ದ್ವಿಜ ಜನರೂ ಮತ್ತು ಎರಡುಸಾವಿರ ಮಂದಿ ವೈಶ್ಯರೂ ಮಿಕ್ಕವರು ಶೂದ್ರರೂ ಆದರು.

**ತೈಃ ಸಾರ್ಧಮಾರ್ಯದೇಶೇ ಸ ಸರಸ್ವತ್ಯಾಃ ಪ್ರಸಾದತಃ ।**
**ಅವಸದ್ವೈ ಮುನಿಶ್ರೇಷ್ಠೋ ಮುನಿಕಾರ್ಯರತಃ ಸದಾ ॥ ೧೪ ॥**

**ತೇಷಾಮಾರ್ಯಸಮೂಹಾನಾಂ ದೇವ್ಯಾಶ್ಚ ವರದಾನತಃ ।**
**ವೃದ್ಧಿರ್ಭವತಿ ಬಹುಲಾ ಚತುಷ್ಕೋಟಿನರಾಃ ಸ್ತ್ರಿಯಃ ॥ ೧೫ ॥**

**ತೇಷಾಂ ಪುತ್ರಾಶ್ಚ ಪೌತ್ರಾಶ್ಚ ತದ್ಭೂಪಃ ಕಾಶ್ಯಪೋ ಮುನಿಃ ।**
**ವಿಂಶೋತ್ತರಶತಂ ವರ್ಷಂ ತಸ್ಯ ರಾಜ್ಯಂ ಪ್ರಕೀರ್ತಿತಂ ॥ ೧೬ ॥**

**ರಾಜ್ಯಪುತ್ರಾಖ್ಯದೇಶೇ ಚ ಶೂದ್ರಾಶ್ಚಾಷ್ಟಸಹಸ್ರಕಾಃ ।**
**ತೇಷಾಂ ಭೂಪಶ್ಚಾರ್ಯಪೃಥುಸ್ತಸ್ಮಾಜ್ಜಾತಸ್ಸ ಮಾಗಧಃ ॥ ೧೭ ॥**

**ಮಾಗಧಂ ನಾಮ ತತ್ಪುತ್ರಮಭಿಷಿಚ್ಯ ಯಯೌ ಮುನಿಃ ।**
**ಇತಿ ಶ್ರುತ್ವಾ ಭೃಗುಶ್ರೇಷ್ಠಃ ಶೌನಕೋ ಹರ್ಷಮಾಗತಃ ॥ ೧೮ ॥**

---

೧೪. ಬಳಿಕ ಆತನು ಸರಸ್ವತೀ ಅನುಗ್ರಹಪಡೆದು ಅವರೊಡನೆ ಬಂದು ಸದಾ ತನ್ನ ಋಷಿವರ್ತನೆಗೆ ಅನುಗುಣವಾದ ಕಾರ್ಯಗಳಲ್ಲಿ ನಿರತನಾಗಿದ್ದನು.

೧೫–೧೬. ಇವನ ಪ್ರಾರ್ಥನೆಯಿಂದ ದೇವಿಯು ಪ್ರಸನ್ನೆಯಾದಳು. ಆಕೆಯ ಅನುಗ್ರಹದಿಂಡ ಆರ್ಯಸಮೂಹಕ್ಕೆ ಅಭಿವೃದ್ಧಿಯುಂಟಾಗಿ ಗಂಡಸರು, ಹೆಂಗಸು, ಮಕ್ಕಳು, ಮೊಮ್ಮಕ್ಕಳು ಸೇರಿ ನಾಲ್ಕುಕೋಟಿ ಜನವೃಂದಕ್ಕೂ ಕಾಶ್ಯಪಮುನಿಯೇ ರಾಜನಾದನು. ಹೀಗೆ ಅವನು ನೂರಇಪ್ಪತ್ತು ವರ್ಷಗಳು ರಾಜ್ಯವಾಳಿದನು.

೧೭. ರಾಜಪುತ್ರದೇಶ (ಸ್ಥಾನ) ದಲ್ಲಿ ಎಂಟುಸಾವಿರಮಂದಿ ಶೂದ್ರರುಇದ್ದರು. ಆರ್ಯಪೃಥುವೆಂಬವನು ಅವರ ದೊರೆಯಾಗಿದ್ದನು. ಅವನಿಗೆ ಮಾಗಧನೆಂಬ ಮಗನು ಜನಿಸಿದನು.

೧೮. ಆ ಪೃಥುವು ತನ್ನ ಪುತ್ರನು ವಯಸ್ಕನಾಗುತ್ತಲು ರಾಜ್ಯದಲ್ಲಿ ತನ್ನ ಮಗನನ್ನು ಪಟ್ಟಾಭಿಷೇಕ ಮಾಡಿ ತಾನು (ವನಕ್ಕೆ) ಹೊರಟುಹೋದನು. ಭೃಗು ಶ್ರೇಷ್ಠನಾದ ಶೌನಕನು ಈ ಮಾತನ್ನು ಕೇಳಿ ಬಹು ಸಂತೋಷಭರಿತನಾದನು.

ಸೂತಂ ಪೌರಾಣಿಕಂ ನತ್ವಾ ವಿಷ್ಣುಧ್ಯಾನಪರೋಽಭವತ್ ।
ಪುನಶ್ಚ ಶ್ರುತಿವರ್ಷಾಂತೇ ಬೋಧಿತಾ ಮುನಯಸ್ತಥಾ ॥ ೧೯ ॥

ನಿತ್ಯನೈಮಿತ್ತಿಕಂ ಕೃತ್ವಾ ಪ್ರಪಚ್ಛುರಿದಮಾದರಾತ್ ।
ಲೋಮಹರ್ಷಣ ಮೇ ಬ್ರೂಹಿ ಕೇ ರಾಜಾನಶ್ಚ ಮಾಗಧಾತ್ ।
ಕಲೌ ರಾಜ್ಯಂ ಕೃತಂ ಯೈಸ್ತು ವ್ಯಾಸಶಿಷ್ಯ ವದಸ್ವ ನಃ ॥ ೨೦ ॥

॥ ಸೂತ ಉವಾಚ ॥

ಮಾಗಧೋ ಮಾಗಧೇ ದೇಶೇ ಪ್ರಾಪ್ತವಾನ್ ಕಾಶ್ಯಪಾತ್ಮಜಃ ॥ ೨೧ ॥

ಪಿತೃರಾಜ್ಯಂ ಸ್ಮೃತಂ ತೇನ ಹ್ಯಾರ್ಯದೇಶಃ ಪೃಥಕ್ಕೃತಃ ।
ಪಾಂಚಾಲಾತ್ಪೂರ್ವತೋ ದೇಶೋ ಮಾಗಧಃ ಪರಿಕೀರ್ತಿತಃ ॥ ೨೨ ॥

---

೧೯. ಆತನು ಬಳಿಕ ಸೂತಪುರಾಣೀಕರಿಗೆ ಸಾಷ್ಟಾಂಗ ನಮಸ್ಕಾರಮಾಡಿ ಮಹಾವಿಷ್ಣುವಿನ ಧ್ಯಾನದಲ್ಲಿ ಆಸಕ್ತನಾದನು. ಮತ್ತೆ ಶ್ರುತಿ ಸಂಜ್ಞಾ ನಿರೂಪಿತ ಸಂಖ್ಯೆಯ ವರ್ಷಗಳಾದಮೇಲೆ ಆ ಮುನಿಗಳು ಧ್ಯಾನಯೋಗದಿಂದ ಎಚ್ಚೆತ್ತರು.

೨೦. ಬಳಿಕ ಅವರು ತಮ್ಮ ನಿತ್ಯಕರ್ಮಗಳನ್ನೂ, ನೈಮಿತ್ತಿಕ ಕರ್ಮಗಳನ್ನೂ ನೆರವೇರಿಸಿಕೊಂಡು ಸೂತಪುರಾಣಿಕನನ್ನು ಕುರಿತು ಆದರದಿಂದ ಪ್ರಶ್ನಿಮಾಡಲು “ ಎಣಿಸಿ ವ್ಯಾಸ ಶಿಷ್ಯರಾದ ಲೌಮಹರ್ಷಣ ಮುನಿವರ್ಯನೇ ! ಕಲಿಯುಗದಲ್ಲಿ ಮಾಗಧನ ಅನಂತರ ಯಾವ ಯಾವ ರಾಜರು ಯಾವ ರಾಜ್ಯವನ್ನು ಆಳಿದರು? ಎಂಬುದನ್ನು ನಮಗೆ ಹೇಳು” ಎಂದರು.

೨೧-೨೨. ಆಗ ಸೂತಮುನಿವರ್ಯನು ಹೇಳುತ್ತಾನೆ—ಕಶ್ಯಪ ಪುತ್ರನಾದ ಮಾಗಧನು ಮಗಧದೇಶದಲ್ಲಿ ಪ್ರಭುವಾಗಿದ್ದನು. ಅವನಿಂದ ಪ್ರತ್ಯೇಕಿಸಲ್ಪಟ್ಟ ಆರ್ಯದೇಶವು ಪಿತೃರಾಜ್ಯ (ಎಲ್ಲ ರಾಜ್ಯಗಳಿಗೂ ಮೂಲ) ವೆಂದು ತಿಳಿಯಬೇಕು. ಪಾಂಚಾಲ ದೇಶದಿಂದ ಪೂರ್ವಭಾಗಕ್ಕಿರುವ ಪ್ರಾಂತವೇ ಮಗಧದೇಶವೆನ್ನಿಸಿಕೊಂಡಿತು.

**ಆಗ್ನೇಯ್ಯಾಂ ಚ ಕಲಿಂಗಶ್ಚ ತಥಾವಂತಸ್ತು ದಕ್ಷಿಣೆ ।**
**ಆನರ್ತದೇಶೋ ನೈಋುತ್ಯಾಂ ಸಿಂಧುದೇಶಸ್ತು ಪಶ್ಚಿಮೇ ॥ ೨೩ ॥**

**ವಾಯುವ್ಯಾಂ ಕೈಕಯೋ ದೇಶೋ ಮದ್ರದೇಶಸ್ತಥೋತ್ತರೇ ।**
**ಈಶಾನೇ ಚೈವ ಕೋಣಿಂದಶ್ಚಾರ್ಯದೇಶಶ್ಚ ತತ್ಕೃತಃ ॥ ೨೪ ॥**

**ದೇಶನಾಮ್ನಾ ತಸ್ಯ ಸುತಾ ಮಗಧಸ್ಯ ಮಹಾತ್ಮನಃ ।**
**ತೇಭ್ಯೋಽಂಶಾನಿ ಪ್ರದತ್ತಾನಿ ತತ್ಪಶ್ಚಾತ್ ಕ್ರತುಮುದ್ವಹನ್ ॥ ೨೫ ॥**

**ಬಲಭದ್ರಸ್ತದಾ ತುಷ್ಟೋ ಯಜ್ಞಭಾವೇನ ಭಾವಿತಃ ।**
**ಶಿಶುನಾಗಃ ಕ್ರತೋರ್ಜಾತೋ ಬಲಭದ್ರಾಂಶಸಂಭವಃ ॥ ೨೬ ॥**

**ಶತವರ್ಷಂ ಕೃತಂ ರಾಜ್ಯಂ ಕಾಕವರ್ಮಾ ಸುತೋಽಭವತ್ ।**
**ತದ್ರಾಜ್ಯಂ ನವತಿವರ್ಷಂ ಕ್ಷೇಮಧರ್ಮಾ ತತೋಽಭವತ್ ॥ ೨೭ ॥**

---

೨೩-೨೪. ಆದರ ಅಗ್ನೇಯದಿಕ್ಕಿನಲ್ಲಿ ಕಳಿಂಗದೇಶ, ದಕ್ಷಿಣದಲ್ಲಿ ಅವಂತ ರಾಜ್ಯ, ನೈಋತ್ಯದಕಡೆ ಆನರ್ತದೇಶ, ಪಶ್ಚಿಮದಿಕ್ಕಿನಲ್ಲಿ ಸಿಂಧುದೇಶ, ವಾಯುವ್ಯ ದಿಕ್ಕಿನಲ್ಲಿ ಕೇಕಯರಾಜ್ಯ, ಉತ್ತರ ದಿಕ್ಕಿನಲ್ಲಿ ಮದ್ರದೇಶ, ಈಶಾನ್ಯದಲ್ಲಿ ಕೋಣಿಂದ ದೇಶ, ಈ ರಾಷ್ಟ್ರ ಸಮುದಾಯವು ಆರ್ಯದೇಶವೆನಿಸಿತು.

೨೫. ಮಹಾತ್ಮನಾದ ಮಾಗಧನು ತನ್ನ ರಾಜ್ಯವನ್ನು ಭಾಗಮಾಡಿ ಹಂಚಿ ಕೊಟ್ಟನು. ಆ ಮಾಗಧನ ಮಕ್ಕಳ ಹೆಸರು, ದೇಶದ ಹೆಸರಿನಮೇಲೆ ಏರ್ಪಟ್ಟವು. ಹೀಗೆ ಹಂಚಿಕೊಟ್ಟನಂತರ ತಾನು ಯಜ್ಞಭಾರವನ್ನು ವಹಿಸಿದನು.

೨೬. ಈ ಯಜ್ಞದಲ್ಲಿ ಸಂಪೂಜಿತನಾದ ಬಲಭದ್ರನು ಸಂತುಷ್ಟನಾದನು. ಆ ಯಜ್ಞದಫಲವಾಗಿ ಬಲಭದ್ರನ ಅಂಶದಿಂದ ಶಿಶುನಾಗ ಎಂಬುವನು ಜನಿಸಿದನು.

೨೭. ಆ ಶಿಶುನಾಗನು ಒಂದುನೂರುವರ್ಷ ರಾಜ್ಯವಾಳಿದನು. ಅವನಿಗೆ ಕಾಕವರ್ಮನೆಂಬ ಮಗನಾದನು. ಆ ಕಾಕ್ರವರ್ಮನು ತೊಂಭತ್ತುವರ್ಷ ರಾಜ್ಯ ಭಾರ ಮಾಡಿದನು. ಆ ಬಳಿಕ ಅವನ ಪುತ್ರನಾದ ಕ್ಷೇಮಧರ್ಮನೆಂಬವನು ಪಟ್ಟಕ್ಕೆ ಬಂದನು.

**ಅಶೀತಿವರ್ಷಂ ರಾಜ್ಯಂ ತತ್ ಕ್ಷೇತ್ರೌಜಾಸ್ತತ್ಸುತೋಽಭವತ್ ।**
**ದಶಹೀನಂ ಕೃತಂ ರಾಜ್ಯಂ ವೇದಮಿಶ್ರಸ್ತತೋಽಭವತ್ ॥ ೨೮ ॥**
**ದಶಹೀನಂ ಕೃತಂ ರಾಜ್ಯಂ ತತೋಽಜಾತರಿಪುಸ್ಸುತಃ ।**
**ದಶಹೀನಂ ಕೃತಂ ರಾಜ್ಯಂ ದರ್ಭಕಸ್ತನಯೋಽಭವತ್ ॥ ೨೯ ॥**
**ದಶಹೀನಂ ಕೃತಂ ರಾಜ್ಯಮುದಯಾಶ್ವಸ್ತತೋಽಭವತ್ ।**
**ದಶಹೀನಂ ಕೃತಂ ರಾಜ್ಯಂ ನಂದವರ್ಧನ ಏವ ತತ್ ॥ ೩೦ ॥**
**ದಶಹೀನಂ ಕೃತಂ ರಾಜ್ಯಂ ತಸ್ಮಾನ್ನಂದಸುತೋಽಭವತ್ ।**
**ಪಿತೃತುಲ್ಯಂ ಕೃತಂ ರಾಜ್ಯಂ ಶೂದ್ರೀಗರ್ಭಸಮುದ್ಭವಃ ॥ ೩೧ ॥**
**ನಂದಾಜ್ಜಾತಃ ಪ್ರನಂದಶ್ಚ ದಶವರ್ಷಂ ಕೃತಂ ಪದಂ ।**
**ತಸ್ಮಾಜ್ಜಾತಃ ಪರಾನಂದಃ ಪಿತುಸ್ತುಲ್ಯಂ ಕೃತಂ ಪದಂ ॥ ೩೨ ॥**

---

೨೮. ಆ ಕ್ಷೇಮಧರ್ಮನು ಎಂಭತ್ತುವರ್ಷ ರಾಜ್ಯವಾಳಿದನು. ಅವನಿಗೆ ಕ್ಷೇತ್ರೌಜನೆಂಬ ಪುತ್ರನಾದನು. ಆತನು ತಂದೆಗಿಂತ ಹತ್ತುವರ್ಷ ಕಡಮೆಯಾಗಿ ರಾಜ್ಯವಾಳಿದನು. ಬಳಿಕ ವೇದಮಿಶ್ರನೆಂಬ ಆತನ ಪುತ್ರನು ಪಟ್ಟಕ್ಕೆ ಬಂದನು.

೨೯. ಆ ವೇದಮಿಶ್ರನು ತಂದೆಯ ಆಳ್ವಿಕೆಗಿಂತ ಹತ್ತುವರ್ಷ ಕಡಮೆ ಎಂದರೆ ೬೦ ವರ್ಷ ಆಳಿದನು. ಅವನಿಗೆ ಅಜಾತಶತ್ರುವೆಂಬ ಪುತ್ರನಾದನು. ಆ ಅಜಾತಶತ್ರುವು ಪಟ್ಟಕ್ಕೆ ಬಂದು ತಂದೆಗಿಂತ ಹತ್ತುವರ್ಷ ಕಡಮೆ (೫೦ ವರ್ಷ) ಕಾಲ ಆಳಿದನು, ಅವನ ಮಗನೇ ದರ್ಭಕ.

೩೦. ಆತನು ತಂದೆಯ ಆಳಿಕೆಗಿಂತ ಹತ್ತುವರ್ಷ ಕಡಮೆಯಾಗಿ ಆಳಿದನು. ಅವನ ಮಗ ಉದಯಾಶ್ವ, ಆ ಉದಯಾಶ್ವನು ತಂದೆಗಿಂತ ಹತ್ತು ವರ್ಷಕಾಲ ಕಡಮೆ ರಾಜ್ಯವಾಳಿದನು.

೩೧ ಆ ಬಳಿಕ ಆತನ ಮಗ ನಂದವರ್ಧನನೆಂಬುವನು ಪಟ್ಟಕ್ಕೆ ಬಂದು ತಂದೆ ಆಳಿದ್ದಕ್ಕಿಂತ ಹತ್ತುವರ್ಷ ಕಡಮೆಯಾಗಿ ಆಳಿದನು. ಬಳಿಕ ನಂದಸುತನೆಂಬ ಆತನ ಪುತ್ರನು ಪಟ್ಟಕ್ಕೆ ಬಂದು ತಂದೆಯು ಆಳಿದಷ್ಟು ವರ್ಷವೇ ರಾಜ್ಯಭಾರ ಮಾಡಿದನು.

೩೧-೩೨. ನಂದಸುತನಿಗೆ ಶೂದ್ರಸ್ತ್ರೀಯಲ್ಲಿ ಪ್ರನಂದನೆಂಬ ಮಗನಾದನು. ಪ್ರನಂದನು ಪಟ್ಟಕ್ಕೆ ಬಂದು ಹತ್ತುವರ್ಷಕಾಲ ರಾಜ್ಯಭಾರ ಮಾಡಿದನು. ಅವನ ಪುತ್ರನೇ ಪರಾನಂದ, ಪರಾನಂದನೂ ತಂದೆ ಆಳಿದಷ್ಟು ವರ್ಷವೇ ರಾಜ್ಯವಾಳಿದನು.

**ತಸ್ಮಾಜ್ಜಾತಸ್ಸಮಾನಂದೋ ವಿಂಶದ್ವರ್ಷಂ ಕೃತಂ ಪದಂ ।**
**ತಸ್ಮಾಜ್ಜಾತಃ ಪ್ರಿಯಾನಂದಃ ಪಿತುಸ್ತುಲ್ಯಂ ಕೃತಂ ಪದಂ ॥ ೩೩ ॥**

**ದೇವಾನಂದಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಃ ।**
**ಯಜ್ಞಭಂಗಃ ಸುತಸ್ತಸ್ಮಾತ್ಪಿತುರರ್ಧಂ ಕೃತಂ ಪದಂ ॥ ೩೪ ॥**

**ಮೌರ್ಯಾನಂದಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ।**
**ಮಹಾನಂದಸ್ತತೋ ಜಾತಃ ಪಿತುಸ್ತುಲ್ಯಂ ಕೃತಂ ಪದಂ ॥ ೩೫ ॥**

**ಏತಸ್ಮಿನ್ನೇವ ಕಾಲೇ ತು ಕಲಿನಾ ಸಂಸ್ಮೃತೋ ಹರಿಃ ।**
**ಕಾಶ್ಯಪಾದುದ್ಭವೋ ದೇವೋ ಗೌತಮೋ ನಾಮ ವಿಶ್ರುತಃ ॥ ೩೬ ॥**

**ಬೌದ್ಧಧರ್ಮಂ ಚ ಸಂಸ್ಕೃತ್ಯ ಪಟ್ಟಣೇ ಪ್ರಾಪ್ತವಾನ್ ಹರಿಃ ।**
**ದಶವರ್ಷಂ ಕೃತಂ ರಾಜ್ಯಂ ತಸ್ಮಾಚ್ಛಾಕ್ಯಮುನಿಃ ಸ್ಮೃತಃ ॥ ೩೭ ॥**

---

೩೩. ಬಳಿಕ ಅವನ ಮಗನಾದ ಸಮಾನಂದನು ಪಟ್ಟಕ್ಕೆ ಬಂದು ಇಪ್ಪತ್ತು ವರ್ಷಕಾಲ ರಾಜ್ಯವಾಳಿದನು. ಬಳಿಕ ಅವನ ಪುತ್ರನಾದ ಪ್ರಿಯಾನಂದನು ಪಟ್ಟಕ್ಕೆ ಬಂದು ತಂದೆ ಆಳಿದಷ್ಟು ವರ್ಷವೇ ರಾಜ್ಯವಾಳಿದನು.

೩೪. ಆ ಪ್ರಿಯಾನಂದನಿಗೆ ದೇವಾನಂದನೆಂಬ ಮಗನಾದನು. ಅವನು ಪಟ್ಟಕ್ಕೆ ಬಂದು ತಂದೆ ಆಳಿದಷ್ಟೇ ವರ್ಷಕಾಲ ರಾಜ್ಯಭಾರ ಮಾಡಿದನು. ಅವನ ಮಗನಾದ ಯಜ್ಞಭಂಗನು ತಂದೆ ಆಳಿದ್ದರ ಅರ್ಧದಷ್ಟುಕಾಲ ರಾಜ್ಯವಾಳಿದನು.

೩೫. ಆತನ ಪುತ್ರನಾದ ಮೌರ್ಯಾನಂದನೆಂಬವನು ತಂದೆ ಆಳಿದಷ್ಟೇ ವರ್ಷ ಕಾಲ ರಾಜ್ಯವಾಳಿದನು. ಅನಂತರ ಅವನ ಪುತ್ರನಾದ ಮಹಾನಂದನು ಪಟ್ಟಕ್ಕೆ ಬಂದು ತಂದೆ ಆಳಿದಷ್ಟು ವರ್ಷವೇ ರಾಜ್ಯವಾಳಿದನು.

೩೬-೩೭. ಇತ್ತ ಹೀಗಿರುತ್ತಿರಲು ಇದೇ ಕಾಲದಲ್ಲಿ ಕಲಿಯು ಮಹಾವಿಷ್ಣು ವನ್ನು ಸ್ಮರಣೆಮಾಡಿದನು. ಆಗ ಮಹಾವಿಷ್ಣುವು ಕಲಿಯುಗಧರ್ಮಾನುಸಾರ ಬೌದ್ಧಮತವನ್ನು ಹರಡಲು ಪಾಟ್ಣ (ಪಾಟಲೀಪುತ್ರ) ದಲ್ಲಿ ಕಾಶ್ಯಪನ ಪುತ್ರನಾಗಿ ಗೌತಮನೆಂಬ ಪ್ರಸಿದ್ಧನಾದ ಹೆಸರಿನಿಂದ ಜನ್ಮವೆತ್ತಿದನು. ಅವನು ಹತ್ತುವರ್ಷಗಳ ಕಾಲ ರಾಜ್ಯವಾಳಿದನು. ಅವನಿಗೆ ಶಾಕ್ಯಮುನಿಯೆಂಬ ಮಗನು ಹುಟ್ಟಿದನು.

ವಿಂಶದ್ವರ್ಷಂ ಕೃತಂ ರಾಜ್ಯಂ ತಸ್ಮಾಚ್ಛುದ್ಧೋದನೋಽಭವತ್ ।
ತ್ರಿಂಶದ್ವರ್ಷಂ ಕೃತಂ ರಾಜ್ಯಂ ಶಾಕ್ಯಸಿಂಹಸ್ತತೋಽಭವತ್ ॥ ೩೮ ॥

ಶತಾಬ್ದೌ ದ್ವಿಸಹಸ್ರೇಽಬ್ದೇ ವ್ಯತೀತೇ ಸೋಽಭವನ್ನೃಪಃ ।
ಕಲೇಃ ಪ್ರಥಮಚರಣೇ ವೇದಮಾರ್ಗೋ ವಿನಾಶಿತಃ ॥ ೩೯ ॥

ಷಷ್ಟಿವರ್ಷಂ ಕೃತಂ ರಾಜ್ಯಂ ಸರ್ವಬೌದ್ಧಾ ನರಾಃ ಸ್ಮೃತಾಃ ।
ನರೇಷು ವಿಷ್ಣುರ್ನೃಪತಿರ್ಯಥಾ ರಾಜಾ ತಥಾ ಪ್ರಜಾಃ ॥ ೪೦ ॥

ವಿಷ್ಣೋರ್ವೀರ್ಯಾನುಸಾರೇಣ ಜಗದ್ಧರ್ಮಃ ಪ್ರವರ್ತತೇ ।
ತಸ್ಮಿನ್ ಹರೌ ಯೇ ಶರಣಂ ಪ್ರಾಪ್ತಾ ಮಾಯಾಪತೌ ನರಾಃ ॥ ೪೧ ॥

ಅಪಿ ಪಾಪಸಮಾಚಾರಾ ಮೋಕ್ಷವಂತಃ ಪ್ರಕೀರ್ತಿತಾಃ ।
ಶಾಕ್ಯಸಿಂಹಾದ್ಬುದ್ಧಿಸಿಂಹಃ ಪಿತುರರ್ಧಂ ಕೃತಂ ಪದಂ ॥ ೪೨ ॥

---

೩೮. ಆ ಶಾಕ್ಯಮುನಿ ಇಪ್ಪತ್ತುವರ್ಷ ರಾಜ್ಯವನ್ನು ಆಳಿದನು. ಆವನಿಗೆ ಶುದ್ಧೋದನನೆಂಬ ಮಗನಾದನು, ಆತನು ಮೂವತ್ತು ವರ್ಷಕಾಲ ರಾಜ್ಯವಾಳಿದನು ಅವನಿಗೆ ಶಾಕ್ಯಸಿಂಹನೆಂಬ ಮಗನಾದನು.

೩೯. ಈ ವೇಳೆಗೆ ಕಲಿಯುಗದ ಪ್ರಥಮಪಾದದಲ್ಲಿ ಎರಡುಸಾವಿರದ ಇನ್ನೂರು ವರ್ಷ ಕಳೆದುವು. ವೇದಮತವು ಖಿಲವಾಗುತ್ತ ಬಂದಿತು. ಆಶಾಕ್ಯಸಿಂಹನು ರಾಜನಾಗಿದ್ದನು.

೪೦. ಆತನು ಅರವತ್ತುವರ್ಷ ರಾಜ್ಯವನ್ನು ಆಳಿದನು. ಅವನು ಬೌದ್ಧ ಮತ ಪಕ್ಷಪಾತಿಯಾಗಿದ್ದುದರಿಂದ ರಾಜ್ಯದ ಪ್ರಜೆಗಳೆಲ್ಲಾ ಬೌದ್ಧಧರ್ಮವನ್ನು ಅವಲಂಬಿಸಿದರು. ನಮ್ಮ ಶಾಸ್ತ್ರಾನುಸಾರ ಮಾನವರಲ್ಲಿ ರಾಜನೇ ವಿಷ್ಣುಸ್ವರೂಪ ನೆಂಬುದು ಪ್ರಸಿದ್ಧ. ಆದುದರಿಂದ ರಾಜನು ಅನುಸರಿಸಿದ ಧರ್ಮವನ್ನು ಪ್ರಜೆಗಳು ಅನುಸರಿಸಿದರು.

೪೧-೪೨. ವಿಷ್ಣುವಿನ ಪ್ರಭಾವಕ್ಕನುಸಾರವಾಗಿ ಜಗತ್ತಿನಲ್ಲಿ ಧರ್ಮಪ್ರವೃತ್ತಿ ಯುಂಟಾಗುವುದು ರೂಢಿ ಮಾಯಾ ಪತಿಯಾದ ಆ ವಿಷ್ಣುವನ್ನು ಮರೆಹೊಕ್ಕವರು ಕೇವಲ ಪಾಪಕರ್ಮನಿರತರೇ ಆದಾಗ್ಯೂ ಮೋಕ್ಷಕ್ಕೆ ಅರ್ಹರಾಗುವರೆಂದು ನಂಬಿಕೆಯಾಯಿತು, ಆ ಶಾಕ್ಯಸಿಂಹನ ಪುತ್ರನಾದ ಬುದ್ಧಸಿಂಹನು ಪಟ್ಟಕ್ಕೆ ಬಂದು ತಂದೆಯ ಆಳ್ವಿಕೆಯ ಅರ್ಧದಷ್ಟುಕಾಲ ಮಾತ್ರ ರಾಜ್ಯವಾಳಿದನು.

ಚಂದ್ರಗುಪ್ತಸ್ತಸ್ಯ ಸುತಃ ಪೌರಸಾಧಿಪತೇಃ ಸುತಾಂ ।
ಸುಲೂವಸ್ಯ ತಥೋದ್ವಾಹ್ಯ ಯಾವನೀಬೌದ್ಧತತ್ಪರಃ ॥ ೪೩ ॥

ಷಷ್ಟಿವರ್ಷಂ ಕೃತಂ ರಾಜ್ಯಂ ಬಿಂದುಸಾರಸ್ತತೋಽಭವತ್ ।
ಪಿತುಸ್ತುಲ್ಯಂ ಕೃತಂ ರಾಜ್ಯಮಶೋಕಸ್ತನಯೋಽಭವತ್ ॥ ೪೪ ॥

ಏತಸ್ಮಿನ್ನೇವ ಕಾಲೇ ತು ಕಾನ್ಯಕುಬ್ಜೋ ದ್ವಿಜೋತ್ತಮಃ ।
ಅರ್ಬುದಂ ಶಿಖರಂ ಪ್ರಾಪ್ಯ ಬ್ರಹ್ಮಹೋಮಮಥಾಕರೋತ್ ॥ ೪೫ ॥

ವೇದಮಂತ್ರಪ್ರಭಾವಾಚ್ಚ ಜಾತಾಶ್ಚತ್ವಾರಿ ಕ್ಷತ್ರಿಯಾಃ ।
ಪ್ರಮರಸ್ಸಾಮವೇದೀ ಚ ಚಪಹಾನಿರ್ಯಜುರ್ವಿದಃ ॥ ೪೬ ॥

ತ್ರಿವೇದೀ ಚ ತಥಾ ಶುಕ್ಲೋಽಥರ್ವಾ ಸ ಪರಿಹಾರಕಃ ।
ಐರಾವತಕುಲೇ ಜಾತಾನ್ ಗಜಾನಾರುಹ್ಯತೇ ಪೃಥಕ್ ॥ ೪೭ ॥

---

೪೩. ಆತನ ಮಗನಾದ ಚಂದ್ರಗುಪ್ತನು ಪೌರಸನೆಂಬ ರಾಜನ ಮಗಳಾದ ಸುಲೂವೆಯನ್ನು ಮದುವೆಯಾಗಿ ಆ ಯವನಸ್ತ್ರೀಯಲ್ಲಿಯೂ ಬೌದ್ಧ ಧರ್ಮದಲ್ಲಿಯೂ ಆಸಕ್ತನಾದನು.

೪೪. ಆ ಚಂದ್ರಗುಪ್ತನು ಅರವತ್ತುವರ್ಷ ರಾಜ್ಯವಾಳಿದನು. ಬಳಿಕ ಅವನ ಮಗನಾದ ಬಿಂದುಸಾರನು ಪಟ್ಟಕ್ಕೆ ಬಂದನು. ಆತನೂ ತಂದೆಯು ಆಳಿದಷ್ಟು ವರ್ಷಗಳೇ ರಾಜ್ಯವಾಳಿದನು. ಅವನಿಗೆ ಅಶೋಕನೆಂಬ ಮಗನು ಜನಿಸಿ ರಾಜನಾಗಿದ್ದನು

೪೫. ಇದೇ ಸಮಕಾಲದಲ್ಲಿ ಕನ್ಯಾಕುಬ್ಜರಾಜ್ಯದ ಬ್ರಾಹ್ಮಣೋತ್ತಮನೊಬ್ಬನು ಅರ್ಬುದಶಿಖರ (ಅಬೂ ಪರ್ವತ) ಕ್ಕೆ ಹೋಗಿ ಬ್ರಹ್ಮಹೋಮವೆಂಬ ಯಾಗವನ್ನು ಮಾಡಿದನು.

೪೬-೪೭. ವೇದಮಂತ್ರದ ಮಹಿಮೆಯೇನು ಸಾಮಾನ್ಯವೇ ? ಅದರ ಪ್ರಭಾವದಿಂದ ಸಾಮವೇದಾಧ್ಯಾಯಿ ಪ್ರಮರ, ಯಜುರ್ವೇದಿ ಚಪಹಾನಿ, ತ್ರಿವೇದಿ ಶುಕ್ಲ, ಅಥರ್ವವೇದಿ ಪರಿಹಾರ ಎಂಬ ಈ ನಾಲ್ಕು ಕ್ಷತ್ರಿಯವಂಶದ ಮೂಲಪುರುಷರು ಉತ್ಪನ್ನರಾದರು. ಐರಾವತವೆಂಬ ದೇವಗಜದ ಸಂತತಿಯಲ್ಲಿ ಜನಿಸಿದ ಒಂದೊಂದು ಆನೆಗಳು ಇವರಿಗೆ ಪ್ರತ್ಯೇಕವಾಗಿ ಲಭ್ಯವಾದುವು. ಇವರು ಆ ಆನೆಗಳನ್ನು ಏರುತ್ತಿದ್ದರು.

ಅಶೋಕಂ ಸ್ವವಶಂ ಚಕ್ರುಸ್ಸರ್ವೇ ಬೌದ್ಧಾ ವಿನಾಶಿತಾಃ ।
ಚತುರ್ಲಕ್ಷಾಃ ಸ್ಮೃತಾ ಬೌದ್ಧಾಃ ದಿವ್ಯಶಸ್ತ್ರೈಃ ಪ್ರಹಾರಿತಾಃ ॥ ೪೮ ॥

ಅವಂತೇ ಪ್ರಮರೋ ಭೂಪಶ್ಚತುರ್ಯೋಜನವಿಸ್ತೃತಾಂ ।
ಅಂಬಾವತೀಂ ನಾಮ ಪುರೀಮಧ್ಯಾಸ್ಯ ಸುಖಿತೋಽಭವತ್ ॥ ೪೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಯುಗ
ಖಂಡಾಪರಪರ್ಯಾಯೇ ಕಲಿಯುಗ ಭೂಪ
ವರ್ಣನೋಪಾಖ್ಯಾನೇ ಷಷ್ಠೋಽಧ್ಯಾಯಃ



---

೪೮. ಇವರು ಮಗಧರಾಜನಾದ ಅಶೋಕನನ್ನು ಗೆದ್ದು ತಮ್ಮ ಅಧೀನ ಪಡಿಸಿಕೊಂಡರು. ಮತ್ತು ಬೌದ್ಧರ ಪ್ರಾಬಲ್ಯವನ್ನು ಅಡಗಿಸಿದರು. ನಾಲ್ಕು ಲಕ್ಷ ಮಂದಿ ಬೌದ್ಧ ಧರ್ಮಿಗಳನ್ನು ದಿವ್ಯವಾದ ಶಸ್ತ್ರಗಳಿಂದ ಪ್ರಹರಿಸಿ ಧ್ವಂಸಮಾಡಿದರು.

೪೯. ಪ್ರಮರರಾಜನು ಅವಂತೀರಾಜ್ಯದಲ್ಲಿ ನಾಲ್ಕುಯೋಜನ ವೈಶಾಲ್ಯವುಳ್ಳ ಅಂಬಾವತೀ ನಗರವನ್ನು ನಿರ್ಮಿಸಿ ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಿ ಸುಖವಾಗಿ ರಾಜ್ಯವಾಳುತ್ತಿದ್ದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಪ್ರಥಮಖಂಡದಲ್ಲಿ
ಕಲಿಯುಗದ ಭೂಪರವಿಚಾರ ವಿವರಣಾತ್ಮಕವಾದ ಆರನೆಯ
ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಪ್ರಥಮಖಂಡೇ

## ಸಪ್ತಮೋಽಧ್ಯಾಯಃ

---

॥ ಸೂತ ಉವಾಚ ॥

ಚಿತ್ರಕೂಟಗಿರೇರ್ದೇಶೇ ಪರಿಹಾರೋ ಮಹೀಪತಿಃ ।
ಕಾಲಿಂಜರಪುರಂ ರಮ್ಯಮಕ್ರೋಶಾಯತನಂ ಸ್ಮೃತಂ ॥ ೧ ॥

ಅಧ್ಯಾಸ್ಯ ಬೌದ್ಧಹಂತಾ ಸ ಸುಖಿತೋಽಭವದೂರ್ಜಿತಃ ।
ರಾಜಪುತ್ರಾಖ್ಯದೇಶೇ ಚ ಚಪಹಾನಿರ್ಮಹೀಪತಿಃ ॥ ೨ ॥

ಅಜಮೇರಪುರಂ ರಮ್ಯಂ ವಿಧಿಶೋಭಾಸಮನ್ವಿತಂ ।
ಚಾತುರ್ವರ್ಣ್ಯಯುತಂ ದಿವ್ಯಮಧ್ಯಾಸ್ಯ ಸುಖಿತೋಽಭವತ್ ॥ ೩ ॥

---

### ಏಳನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಪರಿಹಾರ ಭೂಪತಿಯು ಚಿತ್ರಕೂಟಪರ್ವತದ ಸಮೀಪ ಪ್ರಾಂತದಲ್ಲಿ ಕಾಲಿಂಜರಪುರವೆಂಬ ಹೆಸರುಳ್ಳದ್ದಾಗಿ ಒಂದು ಕ್ರೋಶ ವಿಸ್ತಾರವುಳ್ಳ ಸುಂದರವಾದ ನಗರವನ್ನು ಕಟ್ಟಿಸಿದನು,

೨. ಬೌದ್ಧಧ್ವಂಸಕನೆಂದು ಪ್ರಸಿದ್ಧನಾದ ಆತನು ಆ ನಗರವನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಾಳುತ್ತಾ ಸುಖದಿಂದ ದಿನದಿನಕ್ಕೂ ಅಭಿವೃದ್ಧಿ ಹೊಂದುತ್ತಿದ್ದನು.

೩. ಚಪಹಾನಿ (ಚೋಹನ್‌ವಂಶದ) ರಾಜನು ರಾಜಪುತ್ರಸ್ಥಾನವೆಂಬ ದೇಶದಲ್ಲಿ ಶಾಸ್ತ್ರೋಕ್ತ ಲಕ್ಷಣಗಳಿಂದ ಶೋಭಿತವಾಗುವಂತೆ ಇದ್ದು, ಎಲ್ಲಾ ವರ್ಣ

ಶುಕ್ಲೋನಾಮ ಮಹೀಪಾಲೋ ಗತಆನರ್ತಮಂಡಲೇ ।
ದ್ವಾರಕಾಂ ನಾಮ ನಗರೀಮಧ್ಯಾಸ್ಯ ಸುಖಿತೋಽಭವತ್ ॥ ೪ ॥

॥ ಶೌನಕ ಉವಾಚ ॥

ತೇಷಾಮಗ್ನ್ಯುದ್ಭವಾನಾಂ ಚ ಯೇ ಭೂಪಾ ರಾಜ್ಯಸತ್ಕೃತಾಃ ।
ತಾನ್ಮೇ ಬ್ರೂಹಿ ಮಹಾಭಾಗ ಸೂತೋ ವಾಕ್ಯಮಥಾಬ್ರವೀತ್ ॥ ೫ ॥

ಗಚ್ಛಧ್ವಂ ಬ್ರಾಹ್ಮಣಾ॥ ಸರ್ವೇ ಯೋಗನಿದ್ರಾವಶೋ ಹ್ಯಹಂ ।
ತಚ್ಛ್ರುತ್ವಾ ಮುನಯಃ ಸರ್ವೇ ವಿಷ್ಣೋರ್ಧ್ಯಾನಂ ಪ್ರಚಕ್ರಿರೇ ॥ ೬ ॥

ಪೂರ್ಣೇ ದ್ವೇ ಚ ಸಹಸ್ರಾಂತೇ ಸೂತೋ ವಚನಮಬ್ರವೀತ್ ।
ಸಪ್ತತ್ರಿಂಶಶತೇ ವರ್ಷೇ ದಶಾಬ್ದೇ ಚಾಧಿಕೇ ಕಲೌ ॥ ೭ ॥

---

ಗಳವರೂ ವಾಸಿಸಲು ಅನುಕೂಲವುಳ್ಳದ್ದಾಗಿ ಜನಸಮೃದ್ಧವಾದುದೆನಿಸಿದ ಅಜಮೇರುವೆಂಬ ದಿವ್ಯಸುಂದರವಾದ ಪಟ್ಟಣವನ್ನು ನಿರ್ಮಿಸಿ ಅದನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸುಖವಾಗಿದ್ದನು.

೪. ಶುಕ್ಲಮಹಾರಾಜನು ಗತಆನರ್ತಮಂಡಲದಲ್ಲಿ ದ್ವಾರಕ ಎಂಬ ನಗರವನ್ನು ನಿರ್ಮಿಸಿ ಅದನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡು ಸುಖವಾಗಿ ಆಳುತ್ತಿದ್ದನು (ಎಂದನು.)

೫ ಶೌನಕಮುನಿಯು ಕೇಳುತ್ತಾನೆ—ಸ್ವಾಮಿ ಪೂಜ್ಯರೇ ! ಯಜ್ಞಕುಂಡದ ಅಗ್ನಿಯಿಂದ ಉತ್ಪನ್ನರಾದ ಆ ರಾಜರಲ್ಲಿ ಯಾವ ರಾಜರು ರಾಜ್ಯಸತ್ಕಾರ ಹೊಂದಿದರು ಎಂಬುದನ್ನು ನನಗೆ ತಿಳಿಸಿ, ಎಂದರು. ಆಗ ಸೂತನು ಇಂತೆಂದನು

೬. ಸ್ವಾಮಿ! ನಾನು ಯೋಗನಿದ್ರಾವಶನಾಗಿದ್ದೇನೆ. ಈಗ ಹೇಳಲು ಸಾಧ್ಯವಿಲ್ಲ ತಾವೆಲ್ಲಾ ಹೊರಡಿರಿ ಎಂದನು. ಆ ಮಾತನ್ನು ಕೇಳಿ ಋಷಿಗಳೆಲ್ಲರೂ ಶ್ರೀ ಮಹಾವಿಷ್ಣುವನ್ನು ಧ್ಯಾನಿಸಲು ಉಪಕ್ರಮಿಸಿದರು.

೭-೮. ಎರಡುಸಾವಿರ ವರ್ಷಗಳು ಪೂರ್ಣವಾಗುತ್ತಲೆ ಸೂತಪುರಾಣಿಕನು ಎಚ್ಚೆತ್ತು ಆ ಮುನಿಗಳಿಗೆ ಅವರು ಪ್ರಶ್ನಿಸಿದ್ದ ವಿಚಾರವನ್ನು ಹೇಳಲು ಆರಂಭಿಸಿ ಕಲಿಯುಗದಲ್ಲಿ ಮೂರುಸಾವಿರದ ಏಳುನೂರಹತ್ತು ವರ್ಷಗಳಾದಮೇಲೆ ಪ್ರಮರ

ಪ್ರಮರೋ ನಾಮ ಭೂಪಾಲಃ ಕೃತಂ ರಾಜ್ಯಂ ಚ ಷಟ್‌ಸಮಾಃ ।
ಮಹಾಮದಸ್ತತೋ ಜಾತಃ ಪಿತುರರ್ಧಂ ಕೃತಂ ಪದಂ ॥ ೮ ॥

ದೇವಾಪಿಸ್ತನಯಸ್ತಸ್ಯ ಪಿತುಸ್ತುಲ್ಯಂ ಕೃತಂ ಪದಂ ।
ದೇವದೂತಸ್ತಸ್ಯ ಸುತಃ ಪಿತುಸ್ತುಲ್ಯಂ ಕೃತಂ ಪದಂ ॥ ೯ ॥

ತಸ್ಮಾದ್ಗಂಧರ್ವಸೇನಶ್ಚ ಪಂಚಾಶದಬ್ದಭೂಪದಂ ।
ಕೃತ್ವಾ ಚ ಸ್ವಸುತಂ ಶಂಖಮಭಿಷಿಚ್ಯ ವನಂ ಗತಃ ॥ ೧೦ ॥

ಶಂಖೇನ ತತ್ಪದಂ ಪ್ರಾಪ್ತಂ ರಾಜ್ಯಂ ತ್ರಿಂಶತ್ಸಮಾಃ ಕೃತಂ ।
ದೇವಾಂಗನಾ ವೀರಮತೀ ಶಕ್ರೇಣ ಪ್ರೇಷಿತಾ ತದಾ ॥ ೧೧ ॥

ಗಂಧರ್ವಸೇನಂ ಸಂಪ್ರಾಪ್ಯ ಪುತ್ರರತ್ನಮಜೀಜನತ್ ।
ಸುತಸ್ಯ ಜನ್ಮಕಾಲೇ ತು ನಭಸಃ ಪುಷ್ಪವೃಷ್ಟಯಃ ॥ ೧೨ ॥

---

ರಾಜನು ಅರು ವರ್ಷಗಳಕಾಲ ರಾಜ್ಯಭಾರ ಮಾಡಿದನು. ಆ ಬಳಿಕ ಪುತ್ರನಾದ ಮಹಾಮದನೆಂಬವನು ಪಟ್ಟಕ್ಕೆ ಬಂದು ತಂದೆಯು ಆಳಿದುದರ ಅರ್ಧದಷ್ಟು ವರ್ಷ ಕಾಲ ರಾಜ್ಯವಾಳಿದನು.

೯. ಅವನ ಮಗನಾದ ದೇವಾಪಿಯೆಂಬವನು ತಂದೆಯು ಆಳಿದಷ್ಟು ವರ್ಷವೇ ರಾಜ್ಯಭಾರ ಮಾಡಿದನು. ಆ ಬಳಿಕ ಅವನ ಪುತ್ರನಾದ ದೇವದೂತನು ತಂದೆಯು ಆಳಿದಷ್ಟು ವರ್ಷಕಾಲ ರಾಜ್ಯವನ್ನು ಆಳಿದನು.

೧೦. ಅವನ ಅನಂತರ ಗಂಧರ್ವಸೇನನೆಂಬವನು ರಾಜ್ಯಭಾರವನ್ನು ವಹಿಸಿ ಐವತ್ತು ವರ್ಷಕಾಲ ರಾಜ್ಯವಾಳುತ್ತಿದ್ದು ತನ್ನ ಮಗನಾದ ಶಂಖನೆಂಬವನಿಗೆ ರಾಜ್ಯವನ್ನು ವಹಿಸಿ ತಾನು ಕಾಡಿಗೆ ಹೋದನು.

೧೧. ಹೀಗೆ ರಾಜ್ಯಭಾರವನ್ನು ವಹಿಸಿದ ಶಂಖನು ಮೂವತ್ತು ವರ್ಷಕಾಲ ಆಳಿದನು. ಆಗ ದೇವೇಂದ್ರನು ವೀರಮತಿಯೆಂಬ ದೇವತಾಸ್ತ್ರೀಯನ್ನು ಇವನ ಬಳಿಗೆ ಕಳುಹಿಸಿದನು.

೧೨. ಆಕೆ ಗಂಧರ್ವಸೇನನನ್ನು ವರಿಸಿ ಶ್ರೇಷ್ಠವಾದ ಪುರುಷಶಿಶುವನ್ನು ಪಡೆದಳು ಆ ಶಿಶುವು ಜನನವಾದ ಕೂಡಲೆ ಆಕಾಶದಿಂದ ಪುಷ್ಪವೃಷ್ಟಿಯಾಯಿತು.

**ಪೇತುರ್ದುಂದುಭಯೋನೇ ದುರ್ವಾಂತಿ ವಾತಾಃ ಸುಖಪ್ರದಾಃ ।**
**ಶಿವದೃಷ್ಟಿರ್ದ್ವಿಜೋ ನಾಮ ಶಿಷ್ಯೈಸ್ಸಾರ್ಧಂ ವನಂ ಗತಃ ॥ ೧೩ ॥**

**ವಿಂಶದ್ಭಿಃ ಕರ್ಮಯೋಗಂ ಚ ಸಮಾರಾಧ್ಯ ಶಿವೋಽಭವತ್ ।**
**ಪೂರ್ಣೇ ತ್ರಿಂಶಚ್ಛತೇ ವರ್ಷೇ ಕಲೌ ಪ್ರಾಪ್ತೇ ಭಯಂಕರೇ ॥ ೧೪ ॥**

**ಶಕಾನಾಂ ಚ ವಿನಾಶಾರ್ಥಮಾರ್ಯಧರ್ಮವಿವೃದ್ಧಯೇ ।**
**ಜಾತಶ್ಶಿವಾಜ್ಞಯಾ ಸೋಽಪಿ ಕೈಲಾಸಾದ್ಗುಹ್ಯಕಾಲಯಾತ್ ॥ ೧೫ ॥**

**ವಿಕ್ರಮಾದಿತ್ಯನಾಮಾನಂ ಪಿತಾ ಕೃತ್ವಾ ಮುಮೋದ ಹ ।**
**ಸ ಬಾಲೋಽಪಿ ಮಹಾಪ್ರಾಜ್ಞಃ ಪಿತೃಮಾತೃಪ್ರಿಯಂಕರಃ ॥ ೧೬ ॥**

೧೩. ಮತ್ತು ದೇವಲೋಕದ ದುಂದುಭಿಗಳು ಮೊಳಗಿದವು. ವಾಯುವೂ ಹಿತಕರವಾಗಿರುವಂತೆ ಬೀಸತೊಡಗಿತು, ದಿಕ್ಕುಗಳು ನಿರ್ಮಲವಾದುವು.

೧೩. ಈ ಬಾಲಕನ ಹಿಂದಿನ ಜನ್ಮವೃತ್ತಾಂತವನ್ನು ತಿಳಿಸುತ್ತಾರೆ—ಹಿಂದಿನ ಕಾಲದಲ್ಲಿ ಶಿವದೃಷ್ಟಿಯೆಂಬ ಬ್ರಾಹ್ಮಣನಿದ್ದನು. ಅವನು ತನ್ನ ಅನೇಕ ಮಂದಿ ಶಿಷ್ಯರೊಡನೆ ವನಕ್ಕೆ ಹೋದನು.

೧೪. ಅಲ್ಲಿ ಆತನು ಇಪ್ಪತ್ತುವರ್ಷಕಾಲ ಕರ್ಮಯೋಗಮಾರ್ಗದಿಂದ ಶಿವನನ್ನು ಆರಾಧಿಸಿ ತಾನೇ ಶಿವನಾದನು. (ಎಂದರೆ ಶಿವಸಾರೂಪ್ಯಹೊಂದಿದನು.) ಮೂರುಸಾವಿರ ವರ್ಷಗಳು ಮುಗಿದಮೇಲೆ ಭಯಂಕರವಾದ ಕಲಿಯುಗ ಪ್ರಾಪ್ತ ವಾಯಿತು.

೧೫. ಶಕರನ್ನು ವಿನಾಶಪಡಿಸುವುದಕ್ಕಾಗಿಯೂ, ಆರ್ಯಧರ್ಮವನ್ನು ಉಜ್ಜೀವನಗೊಳಿಸುವುದಕ್ಕಾಗಿಯೂ ಶಿವಸಾರೂಪ್ಯ ಹೊಂದಿದ ಆ ಶಿವದೃಷ್ಟಿಯು ಶಿವನ ಆಜ್ಞಾಪ್ರಕಾರ ಗುಹ್ಯಕರ ಆವಾಸಸ್ಥಾನವಾದ ಕೈಲಾಸದಿಂದ ಇಳಿದು ಭೂಲೋಕದಲ್ಲಿ ಅವತರಿಸಿದನು.

೧೬. ತಂದೆಯು ಆ ಮಗುವಿಗೆ ವಿಕ್ರಮಾದಿತ್ಯನೆಂಬ ಹೆಸರನ್ನಿಟ್ಟು ತಾನು ಹರ್ಷದಿಂದ ಇದ್ದನು. ಆ ಶಿಶುವು ಬಾಲಕನಾಗಿದ್ದರೂ ಮಹಾಬುದ್ಧಿಶಾಲಿಯೂ ತಾಯಿ ತಂದೆಗಳಿಗೆ ಪ್ರಿಯವುಂಟುಮಾಡುವವನೂ ಆಗಿದ್ದನು.

ಪಂಚವರ್ಷೇ ವಯಃಪ್ರಾಪ್ತೇ ತಪಸೋರ್ಥೇ ವನಂ ಗತಃ ।
ದ್ವಾದಶಾಬ್ದಂ ಪ್ರಯತ್ನೇನ ವಿಕ್ರಮೇಣ ಕೃತಂ ತಪಃ ॥ ೧೭ ॥

ಪಶ್ಚಾದಂಬಾವತೀಂ ದಿವ್ಯಾಂ ಪುರೀಂ ಯಾತಃ ಶ್ರಿಯಾನ್ವಿತಃ ।
ದಿವ್ಯಂ ಸಿಂಹಾಸನಂ ರಮ್ಯಂ ದ್ವಾತ್ರಿಂಶನ್ಮೂರ್ತಿಸಂಯುತಂ ॥ ೧೮ ॥

ಶಿವೇನ ಪ್ರೇಷಿತಂ ತಸ್ಮೈ ಸೋಪಿ ತತ್ಪದಮುಗ್ರಹೀತ್ ।
ವೈತಾಲಸ್ತಸ್ಯ ರಕ್ಷಾರ್ಥಂ ಪಾರ್ವತ್ಯಾ ನಿರ್ಮಿತೋ ಗತಃ ॥ ೧೯ ॥

ಏಕದಾ ಸ ನೃಪೋ ವೀರೋ ಮಹಾಕಾಲೇಶ್ವರಸ್ಥಲಂ ।
ಗತ್ವಾ ಸಂಪೂಜಯಾಮಾಸ ದೇವದೇವಂ ಪಿನಾಕಿನಂ ॥ ೨೦ ॥

ಸಭಾ ಧರ್ಮಮಯೀ ತತ್ರ ನಿರ್ಮಿತಾ ವ್ಯೂಹವಿಸ್ತರಾ ।
ನಾನಾಧಾತುಕೃತಸ್ತಂಭಾ ನಾನಾಮಣಿವಿಭೂಷಿತಾ ॥ ೨೧ ॥

---

೧೭. ಆ ಬಾಲಕನು ತನಗೆ ಐದುವರ್ಷ ತುಂಬುತ್ತಲು ತಪಸ್ಸಿಗಾಗಿ ವನಕ್ಕೆ ತೆರಳಿದನು. ಆ ವಿಕ್ರಮನು ಅಲ್ಲಿ ಹನ್ನೆರಡು ವರ್ಷಕಾಲ ಬಹು ಪ್ರಯತ್ನಪಟ್ಟು ತಪಸ್ಸನ್ನು ಆಚರಿಸಿದನು.

೧೮-೧೯. ಹೀಗೆ ತಪಸ್ಸುಮಾಡಿ ಸಫಲಮನೋರಥನಾಗಿ ಸಂಪತ್ತಿನಿಂದ ಕೂಡಿ ದಿವ್ಯವಾಗಿ ಶೋಭಿಸುವ ಅಂಬಾವತೀ ನಗರಕ್ಕೆ ಬಂದನು. ಅಲ್ಲಿ ಮೂವತ್ತೆರಡು ಪುತ್ಥಳಿಗಳಿಂದ ಯುಕ್ತವಾದುದೂ, ಪರಮೇಶ್ವರನು ಇವನಿಗಾಗಿ ತನ್ನಲೋಕದಿಂದ ಕಳುಹಿಸಿದುದೂ, ಆದ ದೇವಲೋಕದ ಸಿಂಹಾಸನವನ್ನೇರಿ, ಆ ರಾಜ್ಯವನ್ನು ಪಾಲನಮಾಡುತ್ತಿದ್ದನು. ಅವನ ರಕ್ಷಣೆಗಾಗಿ ಪಾರ್ವತೀದೇವಿಯು ಬೇತಾಳನನ್ನು ನೇಮಿಸಲು ಆ ಬೇತಾಳನೂ ಆ ನಗರಿಗೇ ಹೋಗಿ ಸೇರಿದನು

೨೦. ಒಂದುದಿನ ಶೂರನಾದ ಆ ರಾಜನು ಮಹಾಕಾಲೇಶ್ವರನ ದೇವಾಲಯಕ್ಕೆ ಹೋಗಿ ದೇವದೇವನಾದ ಆ ಪರಶಿವನನ್ನು ಆರಾಧಿಸಿದನು

೨೧-೨೨ ಬಳಿಕ ಒಂದು ವ್ಯೂಹವಿಸ್ತಾರವುಳ್ಳದ್ದೂ, ನಾನಾವರ್ಣದ ಧಾತುವಸ್ತುಗಳ ಸ್ತಂಭಗಳಿಂದ ರಂಜಿತವಾದುದೂ ಅನೇಕ ಮಣಿಗಳಿಂದ ಅಲಂಕೃತವಾ

ನಾನಾದ್ರುಮಲತಾಕೀರ್ಣಾ ಪುಷ್ಪವಲ್ಲೀಭಿರನ್ವಿತಾ ।
ತತ್ರ ಸಿಂಹಾಸನಂ ದಿವ್ಯಂ ಸ್ಥಾಪಿತಂ ತೇನ ಶೌನಕ ॥ ೨೨ ॥

ಆಹೂಯ ಬ್ರಾಹ್ಮಣಾನ್ಮುಖ್ಯಾನ್ ವೇದವೇದಾಂಗಪಾರಗಾನ್ ।
ಪೂಜಯಿತ್ವಾ ವಿಧಾನೇನ ಧರ್ಮಗಾಥಾಮಥಾಶೃಣೋತ್ ॥ ೨೩ ॥

ಏತಸ್ಮಿನ್ನಂತರೇ ತತ್ರ ವೈತಾಲೋ ನಾಮ ದೇವತಾ ।
ಸ ಕೃತ್ವಾ ಬ್ರಾಹ್ಮಣಂ ರೂಪಂ ಜಯಾಶೀರ್ಭಿಃ ಪ್ರಶಸ್ಯ ತಮ್ ॥ ೨೪ ॥

---

ದುದೂ ಆಗಿ, ಸುತ್ತಲೂ ಬಹುವಿಧವಾದ ವೃಕ್ಷಗಳು ಪುಷ್ಪಿತವಾದ ಲತೆಗಳು ಇವುಗಳಿಂದ ಕೂಡಿ ರಮ್ಯವೆನಿಸಿದ ಸಭಾಭವನವೊಂದನ್ನು ನಿರ್ಮಿಸಿದನು. ಧರ್ಮನಯುವಾದ ಆ ಸಭಾಮಂದಿರದಲ್ಲಿ ಆ ರಾಜನು ಆ ದಿವ್ಯಸಿಂಹಾಸನವನ್ನು ನೆಲೆಗೊಳಿಸಿದನು.

೨೩. ವೇದವೇದಾಂಗ ಪಾರಂಗತರೂ, ಪ್ರಮುಖರೂ ಎನಿಸಿದ ಬ್ರಾಹ್ಮಣಶ್ರೇಷ್ಠರನ್ನು ಆ ಸಭಾಮಂದಿರಕ್ಕೆ ಕರೆಯಿಸಿ ಅವರನ್ನು ಶಾಸ್ತ್ರೋಕ್ತ ವಿಧಾನದಿಂದ ಪೂಜಿಸಿ ಸತ್ಕರಿಸಿ, ಅವರಿಂದ ಧರ್ಮಗಾಥೆಯನ್ನು ಶ್ರವಣಮಾಡಿದನು.

೨೪. ಈ ರಾಜನ ಮೃಗಾವಲಿಗಾಗಿ ಪಾರ್ವತಿಯಿಂದ ನಿಯಮಿತನಾದ ವೈತಾಳನು ಈ ಸಂದರ್ಭದಲ್ಲಿ ಬ್ರಾಹ್ಮಣ ರೂಪಿನಿಂದ ಅಲ್ಲಿಗೆ ಬಂದು ಜಯಶಬ್ದಪೂರ್ವಕವಾಗಿ ಆಶೀರ್ವದಿಸಿ, ವಿಕ್ರಮರಾಜನನ್ನು ಸ್ತೋತ್ರಮಾಡಿ ತಾನೂ ಉಚಿತಾಸನದಲ್ಲಿ ಕುಳಿತು ರಾಜನನ್ನು ಕುರಿತು ಇಂತೆಂದನು.

**ಉಪವಿಶ್ಯಾಸನೇ ವಿಪ್ರೋ ರಾಜಾನಮಿದಮಬ್ರವೀತ್ ।**
**ಯದಿ ತೇ ಶ್ರವಣೇ ಶ್ರದ್ಧಾ ವಿಕ್ರಮಾದಿತ್ಯ ಭೂಪತೇ**
**ವರ್ಣಯಾಮಿ ಮಹಾಖ್ಯಾನಮಿತಿಹಾಸಸಮುಚ್ಚಯಂ ॥ ೨೫ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಪ್ರಥಮ ಖಂಡೇ ಕಲಿಯುಗಸಂಭೂತ ರವಿಶಶಿವಂಶಭೂಪವರ್ಣನಂ ನಾಮ ಸಪ್ತಮೋಽಧ್ಯಾಯಃ.**

**ಇತಿ ಪ್ರಥಮಖಂಡಃ ಸಂಪೂರ್ಣಃ**



---

೨೫. ಅಯ್ಯಾ ವಿಕ್ರಮಾದಿತ್ಯ ಭೂಪತಿಯೇ ! ನಿನಗೆ ಕೇಳಬೇಕೆಂಬ ಅಪೇಕ್ಷೆ ಯಿದ್ದರೆ ಇತಿಹಾಸ ಸಮುಚ್ಚಯವೆಂಬ ದೊಡ್ಡ ಕಥೆಯನ್ನು ಹೇಳುತ್ತೇನೆ, ಎಂದು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಪ್ರತಿಸರ್ಗಪರ್ವದ ಪ್ರಥಮಖಂಡದಲ್ಲಿ ಕಲಿಯುಗದಲ್ಲಿ ಹುಟ್ಟಿದ ಸೂರ್ಯವಂಶ ಚಂದ್ರವಂಶದ ರಾಜರ ವಿಚಾರವಾದ ಏಳನೆಯ ಅಧ್ಯಾಯ ಮುಗಿದುದು

**ಪ್ರಥಮಖಂಡ ಸಮಾಪ್ತಿ.**



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ಪ್ರಥಮೋಽಧ್ಯಾಯಃ

॥ ಸೂತ ಉವಾಚ ॥

ಇತ್ಯುಕ್ತಸ್ಸ ತು ವೈತಾಲೋ ಮಹಾಕಾಲೇಶ್ವರಸ್ಥಿತಃ ।
ಶಿವಂ ಮನಸಿ ಸಂಸ್ಥಾಪ್ಯ ರಾಜಾನಮಿದಮಬ್ರವೀತ್ ॥ ೧ ॥

ವಿಕ್ರಮಾದಿತ್ಯಭೂಪಾಲ ಶೃಣು ಗಾಥಾಂ ಮನೋರಮಾಂ ।
ವಾರಾಣಸೀ ಪುರೀ ರಮ್ಯಾ ಮಹೇಶೋ ಯತ್ರ ತಿಷ್ಠತಿ ॥ ೨ ॥

ಚಾತುರ್ವರ್ಣ್ಯಪ್ರಜಾ ಯತ್ರ ಪ್ರತಾಪಮುಕುಟೋ ನೃಪಃ ।
ಮಹಾದೇವೀ ಚ ಮಹಿಷೀ ಧರ್ಮಜ್ಞಸ್ಯ ಮಹೀಪತೇಃ ॥ ೩ ॥

---

## ಒಂದನೆಯ ಅಧ್ಯಾಯ

೧. ಸೂತನು ಮುಂದುವರಿಸಿ ಹೇಳುತ್ತಾನೆ—ಮಹಾಕಾಲೇಶ್ವರನ ಸನ್ನಿಧಿಯಲ್ಲಿದ್ದ ಬೇತಾಳನು ಹೀಗೆಂದು ಹೇಳಿ ಮನಸ್ಸಿನಲ್ಲಿ ಶಿವನನ್ನು ಧ್ಯಾನಿಸಿ ರಾಜನನ್ನು ಕುರಿತು ಇಂತೆಂದನು.

೨. "ಎಲೈ ವಿಕ್ರಮರಾಜನೇ! ಮನೋಹರವಾದ ಒಗಟೆಯೊಂದನ್ನು ಹೇಳುವೆನು ಕೇಳು. ಶಿವನ ಆವಾಸಸ್ಥಳವೆನಿಸಿ ಸುಂದರವಾದ ಕಾಶೀಪಟ್ಟಣದಲ್ಲಿ ಬ್ರಹ್ಮ ಕ್ಷತ್ರ, ವೈಶ್ಯ, ಶೂದ್ರರೆಂಬ ನಾಲ್ಕುವರ್ಣಗಳ ಪ್ರಜೆಗಳೂ ಸುಖದಿಂದ ಇರುವರು."

೩. "ಅಲ್ಲಿಗೆ ಪ್ರತಾಪಮುಕುಟನೆಂಬವನು ರಾಜನಾಗಿದ್ದನು. ಧರ್ಮಜ್ಞನಾದ ಆ ರಾಜನಿಗೆ ಮಹಾದೇವಿಯೆಂಬ ಪಟ್ಟದರಾಣಿಯಿದ್ದಳು."

**ತತ್ಪುತ್ರೋ ವಜ್ರಮುಕುಟೋ ಮಂತ್ರಿಣಃ ಸುತವಲ್ಲಭಃ ।**
**ಷೋಡಶಾಬ್ದೇಽಥ ಸಂಪ್ರಾಪ್ತೇ ಹಯಾರೂಢೋ ವನಂ ಗತಃ ॥ ೪ ॥**

**ಅಮಾತ್ಯತನಯಶ್ಚೈವ ಬುದ್ಧಿದಕ್ಷ ಇತಿ ಶ್ರುತಃ ।**
**ಹಯಾರೂಢೋ ಗತಃ ಸಾರ್ಧಂ ಸಮಾನವಯಸಾ ವನೇ ॥ ೫ ॥**

**ಸ ದೃಷ್ಟ್ವಾ ವಿಪಿನಂ ರಮ್ಯಂ ಮೃಗಪಕ್ಷಿಸಮನ್ವಿತಂ ।**
**ಮುಮೋದ ವಜ್ರಮುಕುಟಃ ಕಾಮಾಶಯವಶಂ ಗತಃ ॥ ೬ ॥**

**ತತ್ರ ದಿವ್ಯಂ ಸರೋ ರಮ್ಯಂ ನಾನಾಪಕ್ಷಿನಿನಾದಿತಂ ।**
**ತಸ್ಯ ಕೂಲೇ ಶಿವಸ್ಥಾನಂ ಮುನಿವೃಂದೈಃ ಪ್ರಪೂಜಿತಂ ॥ ೭ ॥**

**ದೃಷ್ಟ್ವಾ ತತ್ರ ಗತೌ ವೀರೌ ಪರಮಾನಂದಮಾಪತುಃ ।**
**ಏತಸ್ಮಿನ್ನಂತರೇ ಭೂಪ ಕರಣಾಟಕಭೂಪತೇಃ ॥ ೮ ॥**

---

೪. ಆಕೆಯಲ್ಲಿ ವಜ್ರಮುಕುಟನೆಂಬ ಮಗನು ಜನಿಸಿದನು. ರಾಜನ ಮಂತ್ರಿಗಳೆಲ್ಲರೂ ರಾಜಪುತ್ರನಲ್ಲಿ ವಿಶೇಷ ಪ್ರೀತಿಯುಳ್ಳವರಾಗಿದ್ದರು. ದೊರೆಯ ಮಗನಿಗೆ ಹದಿನಾರು ವರ್ಷಗಳಾಗುತ್ತಲೆ ಆತನು ಒಂದುದಿನ ಕುದುರೆಯನ್ನು ಹತ್ತಿಕೊಂಡು ಕಾಡಿಗೆ ಹೊರಟನು

೫. ರಾಜಕುಮಾರನ ಒಡನಾಡಿಯೂ ಮಂತ್ರಿಕುಮಾರನೂ ಆದ ಬುದ್ಧಿದಕ್ಷನೂ ಕೂಡ ಸ್ನೇಹಿತನಾದ ರಾಜಪುತ್ರನ ಜತೆ ಕುದುರೆಯನ್ನೇರಿ ಹೊರಟನು.

೬ ರಾಜಪುತ್ರನಾದ ವಜ್ರಮುಕುಟನು ಮನೋಹರವಾದ ಮೃಗಪಕ್ಷಿಗಳಿಂದ ಕೂಡಿದ ಆ ವನವನ್ನು ನೋಡಿ ಹರ್ಷಗೊಂಡು ಕಾಮೋದ್ರೇಕ ಹೊಂದಿದನು.

೭. ಆ ಕಾಡಿನಲ್ಲಿ ಅನೇಕ ಜಲಪಕ್ಷಿಗಳಿಂದ ಶಬ್ದಾಯಮಾನವೂ, ದಿವ್ಯವೂ, ಮನೋಹರವೂ ಆದ ಒಂದು ಸರೋವರವಿದ್ದಿತು. ಅದರ ದಡದಲ್ಲಿ ಒಂದು ಶಿವಾಲಯವಿದ್ದಿತು, ಅನೇಕ ಋಷಿಗಳು ಅಲ್ಲಿಗೆ ಬಂದು ಪೂಜಿಸುತ್ತಿದ್ದರು.

೮-೧೧ ಪರಾಕ್ರಮಶಾಲಿಗಳಾದ ಇವರಿಬ್ಬರೂ ಆ ಸ್ಥಳದ ಸೊಬಗನ್ನು ನೋಡಿ ಸಂತೋಷಪಡುತ್ತಾ ಅಲ್ಲಿದ್ದರು. ಇದೇ ಸಮಯದಲ್ಲಿ ಕರ್ಣಾಟಕ ಸಿಂಹಾ

ದಂತವಕ್ತ್ರಸ್ಯ ತನಯಾ ನಾಮ್ನಾ ಪದ್ಮಾವತೀ ಮತಾ ।
ಕಾಮದೇವಂ ನಮಸ್ಕೃತ್ಯ ಕಾಮಿನೀ ಕಾಮರೂಪಿಣೀ ॥ ೯ ॥

ಚಿಕ್ರೀಡ ಸಖಿಭಿಃ ಕ್ರೀಡಾಂ ಸರೋಮಧ್ಯೇ ಮನೋಹರಾ ।
ತದಾ ತು ವಜ್ರಮುಕುಟೋ ಮಂದಿರಾದಾಗತೋ ಬಹಿಃ ॥ ೧೦ ॥

ದೃಷ್ಟ್ವಾ ಪದ್ಮಾವತೀಂ ಬಾಲಾಂ ತುಲ್ಯರೂಪಗುಣಾನ್ವಿತಾಂ ।
ಮೂರ್ಛಿತಃ ಪತಿತೋ ಭೂಮೌ ಸಾ ದೃಷ್ಟ್ವಾ ತು ಮುಮೋಹ ವೈ ॥೧೧॥

ಪ್ರಬುದ್ಧೋ ವಜ್ರಮುಕುಟೋ ಮಾಂ ಪಾಹಿ ಶಿವಶಂಕರ ।
ಇತ್ಯುಕ್ತ್ವಾ ಭೂಪತನಯಃ ಪುನರ್ಬಾಲಾಂ ದದರ್ಶ ಹ ॥ ೧೨ ॥

ಶಿರಸಃ ಪದ್ಮಕುಸುಮಂ ಸಾ ಗೃಹೀತ್ವಾ ತು ಕರ್ಣಯೋಃ ।
ಕೃತ್ವಾ ಚಖಾನ ದಶನೈಃ ಪಾದಯೋರ್ದಧತೀ ಪುನಃ ॥ ೧೩ ॥

---

ಸನಾಧೀಶನಾದ ದಂತವಕ್ತ್ರನ ಮಗಳಾದ ಪದ್ಮಾವತಿಯು ಕಾಮಪೀಡಿತೆಯಾಗಿ ಮನ್ಮಥನನ್ನು ಅರ್ಚಿಸಿ ಬಳಿಕ ಆ ಸರೋವರದಲ್ಲಿ ಸಖಿಯರೊಡನೆ ಜಲಕ್ರೀಡೆ ಯಾಡುತ್ತಿದ್ದಳು. ಆವೇಳಗೆ ರಾಜಕುಮಾರನಾದ ವಜ್ರಮುಕುಟನು ಶಿವಾಲಯ ದಿಂದ ಹೊರಗೆ ಬಂದು ತನಗೆ ಅನುರೂಪವಾದ ರೂಪಗುಣಗಳಿಂದ ಕೂಡಿರುವ ಸುಂದರಿಯಾದ ಪದ್ಮಾವತಿಯನ್ನು ನೋಡಿ ಮೂರ್ಛಿತನಾಗಿ ಭೂಮಿಯಲ್ಲಿ ಬಿದ್ದನು. ಪದ್ಮಾವತಿಯೂ ಕೂಡ ಅವನ ಸೌಂದರ್ಯವನ್ನು ನೋಡಿ ಮೋಹಪರವಶೆಯಾದಳು.

೧೨. ರಾಜಪುತ್ರನಾದ ವಜ್ರಕುಟನು ಸ್ವಲ್ಪ ಹೊತ್ತಿನಮೇಲೆ ಎಚ್ಚರಗೊಂಡು ಪರಮೇಶ್ವರಾ ! ನನ್ನನ್ನು ಕಾಪಾಡು ಎಂದು ಮತ್ತೆ ಪ್ರಾರ್ಥಿಸಿ ಪದ್ಮಾವತಿಯನ್ನು ನೋಡಿದನು.

೧೩. ಆಗ ಅವಳು ತಲೆಯಲ್ಲಿ ಧರಿಸಿದ್ದ ಪದ್ಮದಳವನ್ನು ತೆಗೆದುಕೊಂಡು ಕಿವಿಗಳಮೇಲಿಟ್ಟು ಆಮೇಲೆ ಕ್ರಮೇಣ ಹಲ್ಲುಗಳಿಂದ ಕಚ್ಚಿ ಪುನಃ ಕಾಲುಗಳಲ್ಲಿ ಧರಿಸುತ್ತಾ ಮತ್ತೆ ತಿರಿಗಿ ಆ ಹೂವನ್ನು ತೆಗೆದುಕೊಂಡು ಹೃದಯದಲ್ಲಿ ಬಚ್ಚಿಟ್ಟಳು.

**ಪುನರ್ಗೃಹೀತ್ವಾ ತತ್ಪುಷ್ಪಂ ಹೃದಯೇ ಸಂಪ್ರವೇಶಿತಂ ।**
**ಇತಿ ಭಾವಂ ಚ ಸಾ ಕೃತ್ವಾಽಽಲಿಭಿಸ್ಸಾರ್ಧಂ ಯಯೌ ಗೃಹಂ ॥ ೧೪ ॥**

**ತೀರ್ಥಾರ್ಥಂ ಚ ಸಮಂ ಪಿತ್ರಾ ಸಂಪ್ರಾಪ್ತಾ ಗಿರಿಜಾವನೇ ।**
**ತಸ್ಯಾಂ ಗತಾಯಾಂ ಸ ನೃಪೋ ಮಾರಬಾಣೇನ ಪೀಡಿತಃ ॥ ೧೫ ॥**

**ಮಹತೀಂ ಮಾನಸೀಂ ಪೀಡಾಂ ಪ್ರಾಪ್ತವಾನ್ಮೋಹಮಾಗತಃ ।**
**ಉನ್ಮಾದೀವ ತತೋ ಭೂತ್ವಾ ಖಾದ್ಯಪಾನವಿವರ್ಜಿತಃ ॥ ೧೬ ॥**

**ಧ್ಯಾತ್ವಾ ಪದ್ಮಾವತೀಂ ಬಾಲಾಂ ಮೌನವ್ರತಮಚೀಕರತ್ ।**
**ತದಾ ಕೋಲಾಹಲೋ ಜಾತಃ ಪ್ರತಾಪಮುಕುಟಾಂತಿಕೇ ॥ ೧೭ ॥**

**ಕುಮಾರಃ ಕಾಂ ದಶಾಂ ಪ್ರಾಪ್ತ ಇತಿ ಹಾಹೇತಿ ಸರ್ವತಃ ।**
**ತ್ರಿದಿನಾಂತೇ ಮಂತ್ರಿಸುತೋ ಬುದ್ಧಿದಕ್ಷೋ ವಿಶಾರದಃ ॥ ೧೮ ॥**

**ಅಬ್ರವೀದ್ವಜ್ರಮುಕುಟಂ ಸತ್ಯಂ ಕಥಯ ಭೂಪತೇ ।**
**ಸ ಆಹ ಕಾರಣಂ ಸರ್ವಂ ಯಥಾಜಾತಂ ಸರೋವರೇ ॥ ೧೯ ॥**

---

೧೪. ತೀರ್ಥಸ್ನಾನಕ್ಕಾಗಿ ತಂದೆಯೊಡನೆ ಗಿರಿಜಾವನಕ್ಕೆ ಬಂದು ಕ್ರೀಡಿಸುತ್ತಿದ್ದ ಪದ್ಮಾವತಿಯು ಹೀಗೆ ತನ್ನ ಮನೋಭಾವವನ್ನು ಸೂಚಿಸಿ ಸಖಿಯರೊಡನೆ ತನ್ನ ಮನೆಗೆ ಹಿಂದಿರುಗಿದಳು.

೧೫-೧೯. ಅವಳು ಹೋದನಂತರ ರಾಜಕುಮಾರನು ಕಾಮಬಾಣ ಪೀಡಿತನಾಗಿ ತುಂಬಾ ಮನೋವ್ಯಥೆ ಹೊಂದಿ ಮೂರ್ಛಿತನಾದನು. 'ಕುಮಾರನು ಅನ್ನಪಾನಾದಿಗಳಲ್ಲಿ ಆಸಕ್ತಿಯನ್ನು ತೊರೆದು ಹುಚ್ಚನಂತೆ ಪದ್ಮಾವತಿಯನ್ನೇ ಧ್ಯಾನಿಸುತ್ತಾ ಯಾರೊಡನೆಯೂ ಮಾತಾಡದೆ ಮೌನವ್ರತವನ್ನವಲಂಬಿಸಿ ಎಲ್ಲೋ ಅಗೋಚರನಾದನು' ಎಂದು ರಾಜಸನ್ನಿಧಿಯಲ್ಲಿ ವಾರ್ತೆಹರಡಿ ಹಾಹಾಕಾರವುಂಟಾಯಿತು. ಇತ್ತ ಮೂರುದಿನಗಳಾದನಂತರ ಮಂತ್ರಿಪುತ್ರನಾದ ಬುದ್ಧಿದಕ್ಷನು ರಾಜಕುಮಾರನಾದ ವಜ್ರಮುಕುಟನನ್ನು ಕುರಿತು 'ಪ್ರಭುವೇ! ನಿನ್ನ ಈ ಅವಸ್ಥೆಗೆ ಕಾರಣವೇನು? ಅದನ್ನು ತಿಳಿಸು" ಎಂದು ಕೇಳಲು ರಾಜಪುತ್ರನು ಸರೋವರದಲ್ಲಿ ನಡೆದ ವಿಷಯವನ್ನೆಲ್ಲಾ ಅವನಿಗೆ ತಿಳಿಸಿದನು.

ತುಚ್ಛ್ರುತ್ವಾ ಬುದ್ಧಿದಕ್ಷಶ್ಚ ವಿಹಸ್ಯಾಹ ಮಹೀಪತಿಂ ।
ಮಹಾಕಷ್ಟೇನ ಸಾ ದೇವೀ ಮಿತ್ರತ್ವಂ ಹಿ ಗಮಿಷ್ಯತಿ ॥ ೨೦ ॥

ಕರಣಾಟಕಭೂಪಸ್ಯ ದಂತವಕ್ತ್ರಸ್ಯ ಸಾ ಸುತಾ ।
ಪದ್ಮಾವತೀತಿ ವಿಖ್ಯಾತಾ ದಧತೀ ತ್ವಾಂ ಸ್ವಮಾನಸೇ ॥ ೨೧ ॥

ಪುಷ್ಪಭಾವೇನ ಜ್ಞಾತ್ವಾಹಂ ತ್ವಾಂ ನಯಾಮಿ ತದಂತಿಕೇ ।
ಇತ್ಯುಕ್ತ್ವಾ ತಸ್ಯ ಪಿತರಂ ಪ್ರತಾಪಮುಕುಟಂ ಪ್ರತಿ ॥ ೨೨ ॥

ಆಹಾಜ್ಞಾಂ ದೇಹಿ ಭೂಪಾಲ ಯಾಸ್ಯೇಹಂ ಕಾರಣಾಟಕೇ ।
ತ್ವತ್ಸುತಸ್ಯ ಚಿಕಿತ್ಸಾರ್ಥಂ ಸ ವಜ್ರಮುಕುಟೋಽಚಿರಂ ॥ ೨೩ ॥

ಆಯಾಮಿ ನಾಽತ್ರ ಸಂದೇಹೋ ಯದಿ ಜೀವಯಸೇ ಸುತಂ ।
ತಥೇತಿ ಮತ್ವಾ ಸ ನೃಪಃ ಪ್ರಾದಾತ್ಪುತ್ರಂ ಚ ಮಂತ್ರಿಣೇ ॥ ೨೪ ॥

---

೨೦-೨೧. ಇದನ್ನು ಕೇಳಿ ಮಂತ್ರಿಪುತ್ರನಾದ ಬುದ್ಧಿದಕ್ಷನು ನಕ್ಕು ರಾಜಪುತ್ರನನ್ನು ಕುರಿತು "ಅವಳ ಸ್ನೇಹವು ಲಭಿಸುವುದಕ್ಕೆ ಬಹು ಪ್ರಯಾಸವಾಗುವುದು" ಎಂದು ಸೂಚಿಸಿ ಕರ್ಣಾಟಕದೇಶದ ರಾಜನಾದ ದಂತವಕ್ತ್ರನ ಮಗಳಾದ ಆ ಪದ್ಮಾವತಿಯು (ನಿನ್ನನ್ನು ತನ್ನ ಮನಸ್ಸಿನಲ್ಲಿ ಧರಿಸಿದಾಳೆ) ನಿನ್ನಲ್ಲಿ ಅನುರಕ್ತೆಯಾಗಿದ್ದಾಳೆ.

೨೨-೨೪ ಆ ಹೂವನ್ನು ಆಕೆಯು ವಹಿಸಿದ ಭಾವದಿಂದ ನಾನು ಇದನ್ನು ಊಹಿಸಿ ತಿಳಿದೆನು. ಬೇಕಾದರೆ ನಿನ್ನನ್ನು ಅವಳ ಸಮೀಪಕ್ಕೆ ಕರೆದೊಯ್ಯುವೆನು" ಎಂದು ಹೇಳಿ, ರಾಜನಾದ ಪ್ರತಾಪಮುಕುಟನ ಬಳಿಗೆ ಬಂದು ಎಲೈ ರಾಜೇಂದ್ರಾ! ನಿನ್ನ ಮಗನಿಗೆ ಚಿಕಿತ್ಸೆಮಾಡಲು ಕರ್ಣಾಟಕದೇಶಕ್ಕೆ ಹೋಗಬೇಕು. ನಿನ್ನ ಮಗನನ್ನು ಬದುಕಿಸಿಕೊಳ್ಳಬೇಕೆಂಬ ಅಪೇಕ್ಷೆ ಇದ್ದರೆ ಅವನನ್ನು ಕರೆದುಕೊಂಡು ಹೋಗಲು ಅನುಜ್ಞೆಕೊಡು, ನಾವು ಜಾಗ್ರತೆಯಾಗಿಯೇ ಬಂದು ಬಿಡುತ್ತೇವೆ' ಎಂದು ಹೇಳಿದನು. ರಾಜನು ಹಾಗೆಯೇ ಆಗಲೆಂದು ಒಪ್ಪಿ ಮಗನನ್ನು ಮಂತ್ರಿಪುತ್ರನ ಜತೆಯಲ್ಲಿ ಹೊರಡಲು ಅನುಜ್ಞೆಕೊಟ್ಟನು.

ಹಯಾರೂಢೌ ಗತೌ ಶೀಘ್ರಂ ದಂತವಕ್ತ್ರಸ್ಯ ಪತ್ತನೇ ।
ಕಾಚಿದ್ವೃದ್ಧಾ ಸ್ಥಿತಾ ತತ್ರ ತಸ್ಯಾ ಗೇಹಂ ಚ ತೌ ಗತೌ ॥ ೨೫ ॥

ಬಹುದ್ರವ್ಯಂ ದದೌ ತಸ್ಯೈ ಬುದ್ಧಿದಕ್ಷೋ ವಿಶಾರದಃ ।
ಊಷತುರ್ಮಂದಿರೇ ತಸ್ಮಿನ್ ರಾತ್ರಿಂ ಘೋರತಮೋವೃತಾಂ ॥ ೨೬ ॥

ಪ್ರಾತಃಕಾಲೇ ತು ಸಾ ವೃದ್ಧಾ ಗಚ್ಛಂತೀ ರಾಜಮಂದಿರಂ ।
ತಾಮಾಹ ಮಂತ್ರಿತನಯಃ ಶೃಣು ಮಾತರ್ವಚೋ ಮಮ ॥ ೨೭ ॥

ಪದ್ಮಾವತೀಂ ಚ ಸಂಪ್ರಾಪ್ಯೈಕಾಂತೇ ಮದ್ವಚನಂ ವದ ।
ಜ್ಯೇಷ್ಠಶುಕ್ಲಸ್ಯ ಪಂಚಮ್ಯಾಮಿಂದುವಾರೇ ಸರೋವರೇ ॥ ೨೮ ॥

ಯೋ ದೃಷ್ಟಃ ಪುರುಷೋ ರಮ್ಯಸ್ತ್ವದರ್ಥೇ ಸಮುಪಾಗತಃ ।
ಇತಿ ಶ್ರುತ್ವಾ ಯಯೌ ವೃದ್ಧಾ ಪದ್ಯಂ ತಸ್ಯೈ ನ್ಯವೇದಯತ್ ॥ ೨೯ ॥

---

೨೫. ಅನಂತರ ಅವರಿಬ್ಬರೂ ಕುದುರೆಯನ್ನು ಏರಿ ಜಾಗ್ರತೆಯಾಗಿ ದಂತವಕ್ತ್ರನ ನಗರಿಗೆ ಬಂದರು ಆ ನಗರಿಯಲ್ಲಿ ಒಬ್ಬ ವೃದ್ಧೆಯಿದ್ದಳು. ಮಂತ್ರಿಪುತ್ರ, ರಾಜಪುತ್ರ ಈ ಇಬ್ಬರೂ ಆ ಮುದುಕಿಯ ಮನೆಗೆ ಹೋದರು

೨೬. ಬುದ್ಧಿಶಾಲಿಯಾದ ಮಂತ್ರಿಪುತ್ರನು ಆ ವೃದ್ಧೆಗೆ ತುಂಬಾ ದ್ರವ್ಯವನ್ನು ಕೊಟ್ಟನು. ಘೋರವಾದ ಕಗ್ಗತ್ತಲೆ ಆವರಿಸಿದ ಆ ರಾತ್ರಿ ಅವರಿಬ್ಬರೂ ಅವಳ ಮನೆಯಲ್ಲೇ ತಳುಗಿರು.

೨೭-೩೧. ಬೆಳಗಾಗುತ್ತಲೆ ಅರಮನೆಗೆ ಹೊರಡಲು ಅನುವಾಗುತ್ತಿರುವ ಆ ಮುದುಕಿಯನ್ನು ಕುರಿತು ಮಂತ್ರಿ ಪುತ್ರನು "ತಾಯೇ! ನಾನು ಹೇಳುವ ಈ ಒಂದು ಮಾತನ್ನು ಲಾಲಿಸು. ರಾಜಪುತ್ರಿಯು ಒಬ್ಬಳೇ ಇರುವ ಸಂದರ್ಭವನ್ನು ನೋಡಿ ನೀನು ಅವಳ ಸಮೀಪಕ್ಕೆ ಹೋಗಿ ಜ್ಯೇಷ್ಠ ಶುದ್ಧ ಪಂಚಮಿ ಸೋಮವಾರದ ದಿನ ಸರೋವರದಲ್ಲಿ ನಿನಗೆ ಗೋಚರನಾದ ಯುವಕನು ನಿನಗೋಸ್ಕರ ಇಲ್ಲಿಗೆ ಬಂದಿರುವನು" ಎಂಬದಾಗಿ ತಿಳಿಸು ಎಂದು ಹೇಳಿದನು. ಈ ಮಾತನ್ನು ಕೇಳಿ ಆ ಮುದುಕಿಯು ಅರಮನೆಗೆ ಹೋಗಿ ರಹಸ್ಯವಾಗಿ ಪದ್ಯರೂಪವಾಗಿ ಉಕ್ತವಾದ ಮಂತ್ರಿಕುಮಾರನ ಮಾತನ್ನು ಅವಳಿಗೆ ತಿಳಿಸಿದಳು. ಚಂದನವನ್ನು ಲೇಪಿಸಿದ

**ರುಷ್ಟಾ ಪದ್ಮಾವತೀ ಪ್ರಾಹ ಚಂದನಾದ್ರಾಂಗುಲೀಯಕಾ ।**
**ಗಚ್ಛ ಗಚ್ಛ ಮಹಾದುಷ್ಟೇ ತಲೇನೋರಸ್ಯತಾಡಯತ್ ॥ ೩೦ ॥**

**ಅಂಗುಲೀಭಿಃ ಕಪೋಲೌ ಚ ತಸ್ಯಾಃ ಸ್ಪೃಷ್ಟ್ವಾ ಯಯೌ ಗೃಹಂ ।**
**ಸಾ ತು ವೃದ್ಧಾ ಬುದ್ಧಿದಕ್ಷಂ ಸರ್ವಂ ಭಾವಂ ನ್ಯವೇದಯತ್ ॥ ೩೧ ॥**

**ಸ ಮಿತ್ರಂ ದುಃಖಿತಂ ಪ್ರಾಹ ಶೃಣು ಮಿತ್ರ ಶುಚಂ ತ್ಯಜ ।**
**ತ್ವಾಮಾಹ ಭೂಪತೇಃ ಕನ್ಯಾ ಪ್ರಾಣಪ್ರಿಯ ವಚಃ ಶೃಣು ॥ ೩೨ ॥**

**ತ್ವದರ್ಥೇ ತಾಡಿತಂ ವಕ್ಷಃ ಕದಾ ಮಿತ್ರಂ ಭವಿಷ್ಯಸಿ ।**
**ಶ್ರುತ್ವಾ ತನ್ಮಧುರಂ ವಾಕ್ಯಂ ರಜೋ ದೇಹೇ ಸಮಾಗತಂ ॥ ೩೩ ॥**

**ರಜಸ್ವಲಾಂತೇ ಭೋ ಮಿತ್ರ ತವಾಸ್ಯಂ ಚುಂಬಿತಾಸ್ಮ್ಯಹಂ ।**
**ಇತಿ ಶ್ರುತ್ವಾ ಭೂಪಸುತಃ ಪರಮಾನಂದಮಾಯಯೌ ॥ ೩೪ ॥**

---

ಉಂಗುರವನ್ನು ಧರಿಸಿದ್ದ ಪದ್ಮಾವತಿಯು ಕೋಪಗೊಂಡವಳಾಗಿ "ದುಷ್ಟಳೇ! ಆಚೆಗೆ ಹೋಗು ಎಂದು ಹೇಳಿ ಅಂಗೈನಿಂದ ವಕ್ಷಸ್ಥಳದಲ್ಲಿ ತಟ್ಟಿಕೊಂಡಳು. ಬೆರಳುಗಳಿಂದ ಮುದುಕಿಯ ಕಪೋಲಗಳನ್ನು ಮುಟ್ಟಿ ಬಳಿಕ ತನ್ನ ಅಂತಃಪುರಕ್ಕೆ ಹೋದಳು. ಮುದುಕಿಯು ಹಿಂದಿರುಗಿ ಮನೆಗೆ ಬಂದು ರಾಜಪುತ್ರಿಯು ತೋರಿಸಿದ ಭಾವಗಳೆಲ್ಲವನ್ನೂ ಮಂತ್ರಿ ಕುಮಾರನಿಗೆ ತಿಳಿಸಿದಳು.

೩೨-೩೩. ಆಗ ಮಂತ್ರಿಪುತ್ರನು ದುಃಖಿತನಾಗಿರುವ ರಾಜಪುತ್ರನನ್ನು ಕುರಿತು "ಮಿತ್ರನೇ! ಇನ್ನು ದುಃಖವನ್ನು ಬಿಡು. ರಾಜಕುಮಾರಿಯು ಸಂಜ್ಞೆಯು ನಿನ್ನನ್ನೇ ಕುರಿತದ್ದು ಪ್ರಾಣಪ್ರಿಯನೇ! ನನ್ನ ಮಾತನ್ನು ಕೇಳು. ನಿನಗೋಸ್ಕರವಾಗಿಯೇ ಎದೆಯನ್ನು ತಟ್ಟಿದ್ದು, ನನಗೆ ನೀನು ಪ್ರಿಯನಾಗುವೆ ಎಂಬ ಕರ್ಣಾನಂದಕರವಾದ ಈ ವಾರ್ತೆಯನ್ನು ಕೇಳಿ ನಾನು ರಜಸ್ವಲೆಯಾದೆನು. ಎಲೈ ಪ್ರಿಯನೇ! ಈಗ ರಜಸ್ವಲಾದೋಷ ಕಳೆದಮೇಲೆ ನಿನ್ನ ಮುಖವನ್ನು ಚುಂಬಿಸುವೆನು ಎಂಬ ಭಾವವನ್ನು ಈ ರೀತಿ ಸೂಚಿಸಿದಳು" ಎಂದು ಹೇಳಿದನು.

೩೪-೩೫. ಈ ಮಾತನ್ನು ಕೇಳಿ ರಾಜಪುತ್ರನು ಪರಮಾನಂದಭರಿತನಾದನು. ಮೂರು ದಿನಗಳಾದಮೇಲೆ ಆ ಮುದುಕಿಯು ಪುನಃ ಅರಮನೆಗೆ ಹೋಗಿ ಪದ್ಮಾವತಿ

**ತ್ರಿದಿನಾಂತೇ ತು ಸಾ ವೃದ್ಧಾ ಪದ್ಮಾವತ್ಯೈ ನ್ಯವೇದಯತ್ ।**
**ತ್ವಾಮುತ್ಸುಕಃ ಸ ಭೂಪಾಲಸ್ತ್ವವ ದರ್ಶನಲಾಲಸಃ** ॥ ೩೫ ॥

**ತಂ ಭಜಸ್ವಾದ್ಯ ಸುಶ್ರೋಣಿ ಸಫಲಂ ಜೀವನಂ ಕುರು ।**
**ಇತಿ ಶ್ರುತ್ವಾ ಮಹಾಹೃಷ್ಟಾ ಸಾ ಮುಸ್ಯಾದ್ರಾಂಗುಲೀಯಕಂ** ॥ ೩೬ ॥

**ಗವಾಕ್ಷದ್ವಾರಿ ನಿಷ್ಕಾಸ್ಯ ತಲೇ ಪೃಷ್ಠೇ ಚ ತಾಡಿತಾ ।**
**ತಥೈವ ವೃದ್ಧಾ ತಂ ಪ್ರಾಪ್ಯ ಮಂತ್ರಿಣಂ ಚಾಬ್ರವೀದ್ವಚಃ** ॥ ೩೭ ॥

**ಪ್ರಸನ್ನೋ ಬುದ್ಧಿದಕ್ಷಶ್ಚ ಮಿತ್ರಂ ಪ್ರಾಹ ಶೃಣುಷ್ವ ಭೋಃ ।**
**ಪಶ್ಚಿಮೇ ದಿಶಿ ಭೋಃ ಸ್ವಾಮಿನ್ ಗವಾಕ್ಷಂ ತವ ನಿರ್ಮಿತಂ** ॥ ೩೮ ॥

**ಅರ್ಧರಾತ್ರೇ ತು ಸಂಪ್ರಾಪ್ಯ ಭಜ ಮಾಂ ಕಾಮವಿಹ್ವಲಾಂ ।**
**ಶ್ರುತ್ವಾ ತದ್ವಜ್ರಮುಕುಟಃ ಪ್ರಿಯಾದರ್ಶನಲಾಲಸಃ** ॥ ೩೯ ॥

---

ಯನ್ನು ಕುರಿತು " ಅಮ್ಮಾ ! ಉತ್ಸುಕನಾಗಿರುವ ರಾಜಕುಮಾರನು ನಿನ್ನ ದರ್ಶನಕ್ಕಾಗಿ ಕಾತುರನಾಗಿದ್ದಾನೆ. "

೩೬-೩೭. " ಎಲೌ ಶೋಭನಾಂಗೀ ! ಅವನ ಒಡಗೂಡಿ ನಿನ್ನ ಜೀವನವನ್ನು ಸಾರ್ಥಕಪಡಿಸಿಕೋ " ಎಂದಳು. ಈ ಮಾತನ್ನು ಕೇಳಿ ಬಹು ಸಂತೋಷಗೊಂಡ ರಾಜಪುತ್ರಿಯು ಮಸಿಯನ್ನು ಬಳಿದ ಉಂಗುರವೊಂದನ್ನು ಗವಾಕ್ಷದ ಬಾಗಿಲಲ್ಲಿ ಇಟ್ಟು, ಅಂಗೈಯನ್ನೂ ಮುಂಗೈಯನ್ನೂ ತಟ್ಟಿದಳು. ಅನಂತರ ಇದನ್ನು ನೋಡಿದ ಆ ಮುದುಕಿಯು ಮನೆಗೆ ಹೋಗಿ ಅವಳು ಸಂಜ್ಞೆಮಾಡಿ ತೋರಿಸಿದ ಭಾವವನ್ನು ಆ ಮಂತ್ರಿಕುಮಾರನಿಗೆ ಹೇಳಿದಳು.

೩೮-೩೯. ಆಗ ಬುದ್ಧಿದಕ್ಷನು ಸಂತೋಷಗೊಂಡು ತನ್ನ ಗೆಳೆಯನನ್ನು ಕುರಿತು ಈ ಸಂಜ್ಞೆಯ ಅರ್ಥವು " ಪ್ರಭುವೇ ! ಪಶ್ಚಿಮ ದಿಕ್ಕಿನಲ್ಲಿರುವ ಗವಾಕ್ಷವು ನಿನ್ನ ಪ್ರವೇಶಕ್ಕೆ ದಾರಿಯಾಗಿ ಏರ್ಪಟ್ಟಿದೆ. ಅರ್ಧರಾತ್ರಿಯಲ್ಲಿ ಅದರಲ್ಲಿ ಪ್ರವೇಶಿಸಿ ಮದನಾತುರಳಾದ ನನ್ನನ್ನು ಹೊಂದು ಎಂದು ಸೂಚಿಸಿದ್ದಾಳೆ " ಎಂಬದಾಗಿ ಹೇಳಿದನು.

ಯಯೌ ಶೀಘ್ರಂ ಮಹಾಕಾಮೀ ರಮಣೀಂ ತಾಮರಾಮಯತ್ ।
ಮಾಸಾಂತೇ ಕಾಮಶಿಥಿಲೋ ಮಿತ್ರದರ್ಶನಲಾಲಸಃ ॥ ೪೦ ॥

ಪದ್ಮಾವತೀಂ ಪ್ರಿಯಾಂ ಪ್ರಾಹ ಶೃಣು ವಾಕ್ಯಂ ವರಾನನೇ ।
ಯೇನ ಪ್ರಾಪ್ತವತೀ ಮಹ್ಯಂ ತ್ವಂ ಸುಭ್ರೂಃ ಸುರದುರ್ಲಭಾ ॥ ೪೧ ॥

ತನ್ಮಿತ್ರಂ ಬುದ್ಧಿದಕ್ಷಶ್ಚ ಕಿಂ ನು ತಿಷ್ಠತಿ ಸಾಂಪ್ರತಂ ।
ಆಜ್ಞಾಂ ದೇಹಿ ಪ್ರಿಯೇ ಮಹ್ಯಂ ದೃಷ್ಟ್ವಾ ಯಾಸ್ಯಾಮಿ ತೇಽಂತಿಕಂ ॥೪೨॥

ಇತಿ ಶ್ರುತ್ವಾ ವಚಸ್ತಸ್ಯ ನಿಷ್ಠುರಂ ಕುಲಿಶೋಪಮಂ ।
ಮಿಷ್ಟಾನ್ನಂ ಸವಿಷಂ ಕೃತ್ವಾ ಮಂತ್ರಿಣೇ ಸಾ ನ್ಯವೇದಯತ್ ॥ ೪೩ ॥

ತದಾ ತು ಬುದ್ಧಿದಕ್ಷಶ್ಚ ಚಿತ್ರಗುಪ್ತಪ್ರಪೂಜಕಃ ।
ಜ್ಞಾತ್ವಾ ತತ್ಕಾರಣಂ ಸರ್ವಂ ನ ತು ಭಕ್ಷಿತವಾನ್ ಸ್ವಯಂ ॥ ೪೪ ॥

---

೪೦-೪೨. ಇದನ್ನು ಕೇಳಿ ವಜ್ರಮುಕುಟನು ತನ್ನ ಪ್ರಿಯಳನನ್ನು ನೋಡು ವುದಕ್ಕೆ ಕಾತುರನಾಗಿ ಜಾಗ್ರತೆ ಹೊರಟು, ಸೂಚಿತವಾದ ಮಾರ್ಗದಿಂದ-ಅಲ್ಲಿಗೆ ಸೇರಿ, ಅತ್ಯಂತ ಕಾಮಾತುರತೆಯಿಂದ ಕೂಡಿ, ಅವಳನ್ನು ಸಂತೋಷಪಡಿಸಿದನು. ತಿಂಗಳಾ ಗುತ್ತಲು ಕಾಮಾಭಿಲಾಷೆಯು ಕಮ್ಮಿಯಾದವನಾಗಿ ಸ್ನೇಹಿತನಾದ ಮಂತ್ರಿಪುತ್ರ ನನ್ನು ನೋಡಬೇಕೆಂಬ ಅಪೇಕ್ಷೆ ಹುಟ್ಟಿ ಆ ಕುತೂಹಲದಿಂದ ತನ್ನ ಪ್ರಿಯಳಾದ ಪದ್ಮಾವತಿಯನ್ನು ಕುರಿತು "ಎಲೌ ಸುಂದರೀ! ದೇವತೆಗಳಿಗೂ ದುರ್ಲಭಳಾದ ನೀನು ನನಗೆ ಯಾವನ ಸಹಾಯದಿಂದ ದೊರಕಿದೆಯೋ ಆ ಪರಮಮಿತ್ರನಾದ ಬುದ್ಧಿದಕ್ಷನು ಇಲ್ಲಿರುವನೋ ಇಲ್ಲವೋ ನೋಡಿಕೊಂಡು ಬರಬೇಕೆಂದು ಆಶೆಯಾಗಿದೆ ಆದುದರಿಂದ ಅವನ ಸಮೀಪಕ್ಕೆ ಹೋಗಿ ನೋಡಿಕೊಂಡು ಮತ್ತೆ ನಿನ್ನ ಬಳಿಗೆ ಬರುವೆನು. ನನಗೆ ಅನುಜ್ಞೆಯನ್ನು ಕೊಡು" ಎಂದು ಕೇಳಿದನು.

೪೩. ವಜ್ರಹತಿಗೆ ಸದೃಶವಾದ ಈ ಕಠಿಣವಾಕ್ಯವನ್ನು ಕೇಳಿ ಪದ್ಮಾವತಿಯು ಯೋಚಿಸಿ, ಮಂತ್ರಿಕುಮಾರನಾದ ಬುದ್ಧಿದಕ್ಷನಿಗೆ ಸಮರ್ಪಿಸುವುದಕ್ಕಾಗಿ ವಿಷಮಿಶ್ರ ವಾದ ಮೃಷ್ಟಾನ್ನವನ್ನು ಕೊಟ್ಟು ಕಳುಹಿಸಿದಳು.

೪೪. ರಾಜಕುಮಾರನು ಈ ವಂಚನೆಯನ್ನರಿಯದೆ ಆ ಅನ್ನವನ್ನು ತೆಗೆದು ಕೊಂಡು ಹೋಗಿ ಮಂತ್ರಿಪುತ್ರನಿಗೆ ಒಪ್ಪಿಸಿದನು. ಆ ವೇಳೆಯಲ್ಲಿ ಚಿತ್ರಗುಪ್ತರ

**ಏತಸ್ಮಿನ್ನಂತರೇ ಪ್ರಾಪ್ತೋ ಭೂಪತಿಸ್ತ್ವರಯಾನ್ವಿತಃ ।**
**ವಿವೇಕವಂತಂ ಮಿತ್ರಂ ತಂ ದೃಷ್ಟ್ವಾ ಪ್ರಾಹ ರುಷಾನ್ವಿತಃ ॥ ೪೫ ॥**

**ಕಸ್ಮಾನ್ನ ಖಾದಿತಂ ಮಿತ್ರ ಭೋಜನಂ ಮತ್ಪ್ರಿಯಾಕೃತಂ ।**
**ವಿಹಸ್ಯ ಬುದ್ಧಿದಕ್ಷಸ್ತು ಸಾರಮೇಯೇ ದದೌ ಹಿ ತಂ ॥ ೪೬ ॥**

**ಭುಕ್ತ್ವಾ ಸ ಮರಣಂ ಪ್ರಾಪ್ತಃ ಸ ದೃಷ್ಟ್ವಾ ವಿಸ್ಮಿತೋ ನೃಪಃ ।**
**ಸ್ತ್ರೀಚರಿತ್ರಂ ಚ ವಿಜ್ಞಾಯ ಸ್ನೇಹಂ ತ್ಯಕ್ತ್ವಾಽಬ್ರವೀತ್ತು ತಂ ॥ ೪೭ ॥**

**ಮಿತ್ರ ಗಚ್ಛ ಗೃಹಂ ಶೀಘ್ರಂ ಮಯಾ ತ್ಯಕ್ತಾ ಚ ಪಾಪಿನೀ ।**
**ಸ ಆಹ ಶೃಣು ಭೂಪಾಲ ಗಚ್ಛ ಶೀಘ್ರಂ ಪ್ರಿಯಾಂತಿಕಂ ॥ ೪೮ ॥**

---

ಪೂಜೆಯನ್ನು ಮಾಡುತ್ತಿದ್ದ ಮಂತ್ರಿಪುತ್ರನಾದ ಬುದ್ಧಿದಕ್ಷನು ಆಕೆ ಹೀಗೆ ಮಾಡಿರುವುದಕ್ಕೆ ಕಾರಣವೇನಿರಬಹುದೆಂದು ಸರಿಯಾಗಿ ಊಹಿಸಿ ತಿಳಿದುಕೊಂಡು ಅದನ್ನು ತಾನು ತಿನ್ನಲೇ ಇಲ್ಲ.

೪೫-೪೬ ಇದನ್ನು ನೋಡಿ ರಾಜಕುಮಾರನು ಗಾಬರಿಯಿಂದ (ತ್ವರೆ) ಕೂಡಿದವನಾಗಿ ಅವನ ಬಳಿಗೆ ಬಂದು ಸ್ನೇಹಿತನೂ ವಿವೇಕಶಾಲಿಯೂ ಆದ ಅವನನ್ನು ಕುರಿತು ಕೋಪದಿಂದ 'ಮಿತ್ರನೇ ನನ್ನ ಪ್ರಿಯೆಯು ಕಳುಹಿಸಿಕೊಟ್ಟ ಅನ್ನವನ್ನು ನೀನು ಏತಕ್ಕೆ ತಿನ್ನಲಿಲ್ಲ ? ' ಎಂದು ಕೇಳಿದನು. ಆ ಮಾತಿಗೆ ಬುದ್ಧಿದಕ್ಷನು ಪ್ರತಿಯಾಗಿ ಮಾತನ್ನು ಆಡದೆ ನಕ್ಕು ಆ ಅನ್ನವನ್ನು ಒಂದು ನಾಯಿಗೆ ಹಾಕಿದನು.

೪೭-೪೯. ಆ ನಾಯಿಯು ಅದನ್ನು ತಿಂದು ಸ್ವಲ್ಪ ಹೊತ್ತಿನಲ್ಲಿ ಸತ್ತು ಹೋಯಿತು. ರಾಜಪುತ್ರನು ಇದನ್ನು ನೋಡಿ ಚಕಿತನಾಗಿ ಸ್ತ್ರೀಯರ (ನಡವಳಿಕೆ) ಯೋಗ್ಯತೆಯೇ ಇಷ್ಟು ಎಂದು ತಿಳಿದು ರಾಜಪುತ್ರಿಯ ಸ್ನೇಹವನ್ನು ತೊರೆದು, ತನ್ನ ಮಿತ್ರನನ್ನು ಕುರಿತು “ ಅಯ್ಯಾ ಮಿತ್ರನೇ ! ಬೇಗ ಊರಿಗೆಹೋಗಿ ಸೇರೋಣ. ನಾನು ಇಂದಿನಿಂದ ಆ ಪಾಪಿಷ್ಠೆಯನ್ನು ವರ್ಜ್ಯಮಾಡಿದ್ದೇನೆ ” ಎಂದು ಹೇಳಿದನು. ಆ ಮಾತಿಗೆ ಮಂತ್ರಿಪುತ್ರನು “ ಅಯ್ಯಾ ರಾಜಕುಮಾರಾ ! ನನ್ನ ಮಾತನ್ನು ಕೇಳು ; ಜಾಗ್ರತೆಯಾಗಿ ನಿನ್ನ ಪ್ರಿಯೆಯ ಸಮೀಪಕ್ಕೆ ಹೋಗು, ಅವಳು ಮಲಗಿನಿದ್ರಿಸುವಾಗ ಆಕೆಯ ಆ ಭರಣಗಳನ್ನು ಅಪಹರಿಸಿಕೊಂಡು ಅವಳ ಎಡದ ಮೊಣಕಾಲಿನಲ್ಲಿ

ತದಲಂಕಾರಮಾಹೃತ್ಯ ತ್ರಿಶೂಲಂ ಕುರು ಜಾನುನಿ ।
ಪ್ರಸುಪ್ತಾಂ ತ್ಯಜ ಭೋ ಮಿತ್ರ ಯಾಹಿ ತ್ವಂ ಮಾ ವಿಚಾರಯ ॥ ೪೯ ॥

ಇತಿ ಶ್ರುತ್ವಾ ಯಯೌ ಭೂಪಃ ತಥಾ ಕೃತ್ವಾ ಸಮಾಗತಃ ।
ಸ್ವಮಿತ್ರೇಣ ಯಯೌ ಸಾರ್ಧಂ ಶ್ಮಶಾನೇ ರುದ್ರಮಂಡಪೇ ॥ ೫೦ ॥

ಶಿಷ್ಯಂ ಕೃತ್ವಾ ನೃಪಂ ತಂ ಸ ಯೋಗಿರೂಪೋ ಹಿ ಭೂಷಣಂ ।
ವಿಕ್ರಯಾರ್ಥಂ ದದೌ ತಸ್ಮೈ ಸ್ವಮಿತ್ರಾಯ ಚ ಬುದ್ಧಿಮಾನ್ ॥ ೫೧ ॥

ಸ ವಜ್ರಮುಕುಟೋ ಮತ್ವಾ ತದಾಜ್ಞಾಂ ನಗರಂ ಗತಃ ।
ಚೋರೋಽಯಮಿತಿ ತಂ ಮತ್ವಾ ಬದ್ಧ್ವಾ ರಾಜ್ಞೋ ಹಿ ರಕ್ಷಿಣಃ ॥ ೫೨ ॥

ಶೀಘ್ರಂ ನಿವೇದಯಾಮಾಸುಃ ದಂತವಕ್ತ್ರಸ್ತಮಬ್ರವೀತ್ ।
ಕ್ವ ಪ್ರಾಪ್ತಂ ಭೂಷಣಂ ರಮ್ಯಂ ಸರ್ವಂ ಕಥಯ ಪೂರುಷ ॥ ೫೩ ॥

---

ತ್ರಿಶೂಲಾಕೃತಿಯನ್ನು ರಚಿಸಿ, ಆಕೆಗೆ ಗಾಢನಿದ್ರೆಹತ್ತಿದಮೇಲೆ ಮನಸ್ಸಿನಲ್ಲಿ ವಿಚಾರ ಪಡದೆ ನಿಶ್ಶಂಕೆಯಿಂದ ಅವಳನ್ನು ಬಿಟ್ಟು ಬಂದುಬಿಡು" ಎಂದು ಹೇಳಿದನು.

೫೦. ಈ ಮಾತನ್ನು ಕೇಳಿ ರಾಜಕುಮಾರನು ಅಲ್ಲಿಂದ ಹೊರಟು ರಾಜಪುತ್ರಿಯ ಬಳಿಗೆ ಹೋಗಿ ಅವನು ಹೇಳಿದಂತೆ ಎಲ್ಲವನ್ನೂ ನಡೆಯಿಸಿ ಹಿಂದಿರುಗಿದನು ಅನಂತರ ತನ್ನ ಸ್ನೇಹಿತನೊಡನೆ ರುದ್ರಮಂಟಪವೆಂಬ ಶ್ಮಶಾನಕ್ಕೆ ಹೋದನು.

೫೧. ಬುದ್ಧಿಶಾಲಿಯೂ ಮಂತ್ರಿಪುತ್ರನೂ ಆದ ಬುದ್ಧಿದಕ್ಷನು ಅಲ್ಲಿ ತಾನು ಯೋಗಿಯ ರೂಪವನ್ನು ಧರಿಸಿ ರಾಜಕುಮಾರನಿಗೆ ಶಿಷ್ಯನ ವೇಷವನ್ನು ಹಾಕಿ ಅಲ್ಲಿಂದ ಅಪಹರಿಸಿ ತಂದಿದ್ದ ಆಭರಣಗಳನ್ನು ವಿಕ್ರಯಮಾಡಿ ಬಾರೆಂದು ಶಿಷ್ಯವೇಷವನ್ನು ಧರಿಸಿದ ರಾಜಪುತ್ರನ ಕೈಗೆ ಕೊಟ್ಟನು.

೫೨. ಶಿಷ್ಯರೂಪವನ್ನು ಧರಿಸಿದ ವಜ್ರಮುಕುಟನು ಗುರುವಿನ ಅಪ್ಪಣೆಯನ್ನು ಪಡೆದು ಪಟ್ಟಣದೊಳಕ್ಕೆ ಹೋದನು. ರಾಜಭಟರು ಇವನನ್ನು ಕಳ್ಳನೆಂದು ಭಾವಿಸಿ ಹಿಡಿದು ಬಂಧಿಸಿದರು.

೫೩. ಅನಂತರ ಅವರು ಜಾಗ್ರತೆಯಾಗಿ ದಂತವಕ್ತ್ರ ಮಹಾರಾಜನಿಗೆ ಈ ವಿಷಯವನ್ನು ನಿವೇದಿಸಿದರು. ಆ ರಾಜನು ಶಿಷ್ಯವೇಷದಲ್ಲಿದ್ದ ಇವನನ್ನು ಕುರಿತು

**ಜಟಿಲಃ ಪ್ರಾಹ ಭೋ ರಾಜನ್ ಶ್ಮಶಾನೇ ಮದ್ಗುರುಃ ಸ್ಥಿತಃ ।**
**ತೇನ ದತ್ತಂ ವಿಕ್ರಯಾರ್ಥಂ ಭೂಷಣಂ ಸ್ವರ್ಣಗುಂಠಿತಂ ॥ ೫೪ ॥**

**ಇತಿ ಶ್ರುತ್ವಾ ಸ ನೃಪತಿಸ್ತೂರ್ಣಮಾಹೂಯ ತದ್ಗುರುಂ ।**
**ಭೂಷಣಂ ಪೃಷ್ಟವಾನ್ ರಾಜಾ ಯೋಗೀ ಪ್ರಾಹ ಶೃಣುಷ್ವ ಭೋಃ ॥೫೫॥**

**ಶ್ಮಶಾನೇ ಸಾಧಿಕಂ ಮಂತ್ರಂ ಮಯಾ ಯೋಗಿಸ್ವರೂಪಿಣಾ ।**
**ಪಿಶಾಚೀ ಪ್ರಾಪಿತಾ ಕಾಚಿತ್ತಸ್ಯಾಶ್ಚಿಹ್ನಂ ಮಯಾ ಕೃತಂ ॥ ೫೬ ॥**

**ವಾಮಜಾನುನಿ ಶೂಲೇನ ತಯಾ ದತ್ತಂ ಹಿ ಭೂಷಣಂ ।**
**ಜ್ಞಾತ್ವಾ ತತ್ಕಾರಣಂ ರಾಜಾ ಸುತಾ ನಿಷ್ಕಾಸಿತಾ ಗೃಹಾತ್ ॥ ೫೭ ॥**

---

“ ಅಯ್ಯಾ ಮನುಷ್ಯಾ! ನಿನಗೆ ಈ ಸುಂದರವಾದ ಒಡವೆಗಳು ಎಲ್ಲಿಂದ ಬಂದುವು? ” ಎಂದು ಕೇಳಿದನು.

೫೪. ಅದಕ್ಕೆ ಶಿಷ್ಯವೇಷದ ರಾಜಕುಮಾರನು—“ ಅಯ್ಯಾ ರಾಜನೇ ! ಶ್ಮಶಾನದಲ್ಲಿ ನಮ್ಮ ಗುರು ಇದ್ದಾರೆ. ಅವರು ಈ ಸ್ವರ್ಣಾಭರಣಗಳನ್ನು ವಿಕ್ರಯಿಸುವುದಕ್ಕಾಗಿ ನನಗೆ ಕೊಟ್ಟರು ” ಎಂದು ಹೇಳಿದನು.

೫೫. ಈ ಮಾತನ್ನು ಕೇಳಿ ದಂತವಕ್ರರಾಜನು ಅವನ ಗುರುವನ್ನು ಕರೆತರಿಸಿ “ ಅಯ್ಯಾ ಯೋಗಿಯಾದ ನಿನಗೆ ಈ ಒಡವೆ ಹೇಗೆ ಬಂದಿತು ? ” ಎಂಬದಾಗಿ ಕೇಳಿದನು. ಆಗ ಯೋಗಿವೇಷಧಾರಿಯಾದ ಮಂತ್ರಿಪುತ್ರನು ರಾಜನನ್ನು ಕುರಿತು, ಇಂತೆಂದನು.

೫೬-೫೭. “ ಪ್ರಭುವೇ ! ಕೇಳು, ಈ ಶ್ಮಶಾನದಲ್ಲಿರುವ ನಾನುಯೋಗಿಸ್ವರೂಪವನ್ನು ಧರಿಸಿ ಮಂತ್ರಸಿದ್ಧಿಯನ್ನು ಹೊಂದಿದೆನು. ಅದರಿಂದ ಒಂದು ಪಿಶಾಚಿಯು ನನ್ನ ಅಧೀನವಾಯಿತು. ನಾನು ಆ ಪಿಶಾಚಿಗೆ ಎಡಮೊಣಕಾಲಿನಲ್ಲಿ ಶೂಲದ ಗುರುತನ್ನು ಮಾಡಿರುವೆನು. ಆ ಪಿಶಾಚಿಯಿಂದಲೇ ನನಗೆ ಈ ಆಭರಣಗಳು ಬಂದುವು” ಎಂಬದಾಗಿ ಹೇಳಿದನು. ದಂತವಕ್ರರಾಜನು ಈ ಹೇಳಿಕೆಯನ್ನು ವಿಮರ್ಶಿಸಿ ತನ್ನ ಮಗಳ ಎಡಮೊಳಕಾಲಿನಲ್ಲಿ ತ್ರಿಶೂಲ ರೇಖೆಯಿದ್ದುದನ್ನು ನೋಡಿ ತನ್ನ ಮಗಳನ್ನೇ ಪಿಶಾಚಿಯೆಂದು ಬಗೆದು ಅವಳನ್ನು ಮನೆಯಿಂದ ಓಡಿಸಿದನು.

ಸ ವಜ್ರಮುಕುಟಸ್ತಾಂ ತು ಗೃಹೀತ್ವಾ ಗೃಹಮಾಯಯೌ ।
ವಿಹಸ್ಯ ಪ್ರಾಹ ವೈತಾಲಃ ಶೃಣು ವಿಕ್ರಮಭೂಪತೇ ॥ ೫೮ ॥

ಕಸ್ಯೈ ಪಾಪಂ ಮಹತ್ಪ್ರಾಪ್ತಂ ಚತುರ್ಣಾಂ ಮೇ ವದಾಧುನಾ ।
॥ ಸೂತ ಉವಾಚ ॥
ಇತಿ ಶ್ರುತ್ವಾ ವಚಸ್ತಸ್ಯ ವಿಕ್ರಮೋ ನಾಮ ಭೂಪತಿಃ ॥ ೫೯ ॥

ವಿಹಸ್ಯ ಭಾರ್ಗವಂ ಪ್ರಾಹ ಪ್ರಾಪ್ತಂ ಪಾಪಂ ಹಿ ಭೂಪತೇಃ ।
ಮಿತ್ರಕಾರ್ಯಮಮಾತ್ಯೇನ ಸ್ವಾಮಿಕಾರ್ಯಂ ಚ ರಕ್ಷಿಭಿಃ ॥ ೬೦ ॥

ಭೂಪಪುತ್ರೇಣಾರ್ಥಸಿದ್ಧಂ ಕೃತಂ ತಸ್ಮಾಚ್ಚ ಭೂಪತೇಃ ।
ಮಹತ್ಪಾಪಂ ಚ ಸಂಪ್ರಾಪ್ತಂ ತೇನಾಸೌ ನರಕಂ ಗತಃ ॥ ೬೧ ॥

ರಜೋವತೀಂ ಸುತಾಂ ದೃಷ್ಟ್ವಾ ನ ವಿವಾಹೇತ ಯೋ ನರಃ ।
ಸ ಪಾಪೀ ನರಕಂ ಯಾತಿ ಷಷ್ಟಿವರ್ಷಸಹಸ್ರಕಂ ॥ ೬೨ ॥

---

೫೮. ಆನಂತರ ಆ ಊರಲ್ಲೇ ಕಾದಿದ್ದ ವಜ್ರಮುಕುಟನು ಅವಳನ್ನು ಕರೆದು ಕೊಂಡು ತನ್ನ ರಾಜಧಾನಿಗೆ ಬಂದು ತನ್ನ ಗೃಹವನ್ನು ಸೇರಿದನು, ಎಂದು ಹೇಳಿ ಭೇತಾಳವು ನಕ್ಕು, "ವಿಕ್ರಮರಾಜನೇ! ಈ ನಾಲ್ಕು ಜನಗಳಲ್ಲಿ ಯಾರಿಗೆ ಇದರ ಮಹಾಪಾಪವು ತಟ್ಟುವುದು ಎಂಬುದನ್ನು ಈಗ ನನಗೆ ಹೇಳು" ಎಂದಿತು.

೫೯-೬೧. ಸೂತನು ಹೇಳುತ್ತಾನೆ—ಈ ಮಾತನ್ನು ಕೇಳಿ ವಿಕ್ರಮರಾಜನು ನಕ್ಕು ಈಶ್ವರ (ಭರ್ಗ) ಭಕ್ತನಾದ ಬೇತಾಳವನ್ನು ಕುರಿತು ಈ ಪಾಪವು ಆ ರಾಜನಿಗೇ ಸಂಭವಿಸುವುದು. ಹೇಗೆಂದರೆ ಅಮಾತ್ಯಪುತ್ರನು ತನ್ನ ಸ್ನೇಹಿತನ ಕಾರ್ಯವನ್ನು ನಿರ್ವಹಿಸುವ ರೂಪವಾದ ಪುಣ್ಯಕಾರ್ಯಮಾಡಿದ್ದಾನೆ ರಾಜಭಟರು ಸ್ವಾಮಿಕಾರ್ಯ ವನ್ನು ನಿರ್ವಹಿಸಿದ ಪುಣ್ಯಭಾಗಿಗಳು, ರಾಜಪುತ್ರನು ತನ್ನ ಇಷ್ಟಾರ್ಥಸಿದ್ಧಿಯನ್ನು ಹೊಂದಲು ಈ ಕಾರ್ಯಮಾಡಿದ್ದಾನೆ. ಆದುದರಿಂದ ಅವರಿಗೆ ಪಾಪ ತಟ್ಟಲಾರದು ಅವಿಚಾರಿಯಾದ ರಾಜನಿಗೇ ಈ ಪಾಪವು ಪ್ರಾಪ್ತವಾಯಿತು. ಆದರಿಂದ ಅವನು ನರಕವನ್ನು ಹೊಂದಿದನು.

೬೨. ಮಗಳು ಪುಷ್ಪವತಿಯಾದಾಗ್ಲೂ ಯಾವನು ಅವಳಿಗೆ ಲಗ್ನಮಾಡದೆ ಸುಮ್ಮನಿರುವನೋ ಅವನು ಪಾಪಿ. ಅವನಿಗೆ ಅರವತ್ತು ಸಾವಿರವರ್ಷ ನರಕಪ್ರಾಪ್ತಿ ಯಾಗುವುದು.

**ಗಾಂಧರ್ವಂ ಚ ವಿವಾಹಂ ವೈ ಕಾಮಿನ್ಯಾ ಚ ಕೃತಂ ಯಯಾ ।**
**ತಸ್ಯಾ ವಿಘ್ನಕರೋ ಯೋ ವೈ ಸ ಪಾಪೀ ಯಮಪೀಡಿತಃ ॥ ೬೩ ॥**

**ಅದೃಷ್ಟದೋಷಾಂ ಯಃ ಕನ್ಯಾಂ ವಿವೇಕೇನ ವಿನಾ ತ್ಯಜೇತ್ ।**
**ಸ ಪಾಪೀ ನರಕಂ ಯಾತಿ ಲಕ್ಷವರ್ಷಪ್ರಮಾಣಕಂ ॥ ೬೪ ॥**

**ಇತಿ ಶ್ರುತ್ವಾ ಸ ವೈತಾಲೋ ಧರ್ಮಗಾಥಾಂ ನೃಪೇರಿತಾಂ ।**
**ಪ್ರಸನ್ನಹೃದಯಃ ಪ್ರಾಹ ಭೂಪತಿಂ ಧರ್ಮತತ್ಪರಂ ॥ ೬೫ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ಚತುರ್ಯುಗ ಖಂಡಾಪರಪರ್ಯಾಯೇ ಕಲಿಯುಗೀಯೇತಿಹಾಸ ಸಮುಚ್ಚಯ ವರ್ಣನಂ ನಾಮ ಪ್ರಥಮೋಽಧ್ಯಾಯಃ.**



---

೬೩. ಕಾಮಾತುರತೆಯಿಂದ ಗಾಂಧರ್ವವಿವಾಹ ಮಾಡಿಕೊಳ್ಳುತ್ತಿರುವವಳಿಗೆ ವಿಘ್ನಮಾಡುವವನು ಪಾಪಿಷ್ಠನೆನಿಸಿಕೊಂಡು ಯಮನ ಕಠೋರ ಶಿಕ್ಷೆಗೊಳಗಾಗುವನು.

೬೪-೬೫. ಮಗಳದು ತಪ್ಪೆಂದು ಖಚಿತವಾಗಿ ತಿಳಿಯದೆ ಅವಿವೇಕದಿಂದ ಯಾವನು ಅವಳನ್ನು ಹೊರದೂಡುವನೋ ಆ ಪಾಪಿಯು ಒಂದುಲಕ್ಷವರ್ಷಗಳಕಾಲ ನರಕಾನುಭವ ಮಾಡುವನು ಎಂದು ಹೇಳಿದನು. ಇದನ್ನು ಕೇಳಿದ ಬೇತಾಳವು ರಾಜನ ಧರ್ಮನಿರ್ಣಯ ಸಾಮರ್ಥ್ಯವನ್ನು ತಿಳಿದು ಹರ್ಷಗೊಂಡು ಧರ್ಮತತ್ಪರನಾದ ರಾಜನನ್ನು ಕುರಿತು ಮತ್ತೆ ಹೇಳತೊಡಗಿತು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ ಖಂಡದಲ್ಲಿ ಕಲಿಯುಗದ ಇತಿಹಾಸ ಸಮುಚ್ಚಯವೆಂಬ ಒಂದನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ದ್ವಿತೀಯೋಽಧ್ಯಾಯಃ

॥ ಸೂತ ಉವಾಚ ॥

ಪ್ರಸನ್ನಮನಸಂ ಭೂಪಂ ಮಹಾಸಿಂಹಾಸನೇ ಸ್ಥಿತಂ ।
ದ್ವಿಜವರ್ಯಃ ಸ ವೈತಾಲೋ ವಚಃ ಪ್ರಾಹ ಪ್ರಸನ್ನಧೀಃ ॥ ೧ ॥

ಏಕದಾ ಯಮುನಾತೀರೇ ಧರ್ಮಸ್ಥಲಪುರೀ ಶುಭಾ ।
ಧನಧಾನ್ಯಸಮಾಯುಕ್ತಾ ಚತುರ್ವರ್ಣಸಮನ್ವಿತಾ ॥ ೨ ॥

ಗುಣಾಧಿಪೋ ಮಹೀಪಾಲಸ್ತತ್ರರಾಜ್ಯಂ ಚಕಾರ ವೈ ।
ಹರಿಶರ್ಮಾ ಪುರೋಧಾಸ್ತು ಸ್ನಾನಪೂಜನತತ್ಪರಃ ॥ ೩ ॥

---

## ಎರಡನೆಯ ಅಧ್ಯಾಯ

೧. ಸೂತನು ಶೌನಕಾದಿಗಳಿಗೆ ಹೇಳುತ್ತಾನೆ— ಅನಂತರ ಬ್ರಾಹ್ಮಣಸ್ವರೂಪಿಯೂ ಬುದ್ಧಿ ಕುಶಲಿಯೂ ಆದ ಬೇತಾಳವು ಪ್ರಸನ್ನಮನಸ್ಕನಾಗಿ ಸಿಂಹಾಸನದ ಮೇಲೆ ಕುಳಿತಿರುವ ವಿಕ್ರಮರಾಜನನ್ನು ಕುರಿತು, ಇಂತೆಂದಿತು.

೨. ಪೂರ್ವಕಾಲದಲ್ಲಿ ಯಮುನಾನದಿಯ ತೀರದಲ್ಲಿ ಧರ್ಮಸ್ಥಲವೆಂಬ ಪಟ್ಟಣವಿದ್ದಿತು. ಧನಧಾನ್ಯ ಸಮೃದ್ಧಿಯಿಂದ ಕೂಡಿದ ಆ ಪಟ್ಟಣವು ಚಾತುರ್ವರ್ಣ್ಯದ ಜನಗಳಿಂದ ಶೋಭಿತವಾಗಿ ವಿರಾಜಿಸುತ್ತಿದ್ದಿತು.

೩. ಅಲ್ಲಿ ಗುಣಾಧಿಪನೆಂಬ ರಾಜನು ರಾಜ್ಯವಾಳುತ್ತಿದ್ದನು. ಅವನ ಬಳಿಯಲ್ಲಿ ಹರಿಶರ್ಮನೆಂಬಾತನು ಮಂತ್ರಿಯಾಗಿದ್ದನು. ಆತನಿಗೆ ಸ್ನಾನ, ಪೂಜೆ ಇವುಗಳಲ್ಲಿ ಯಾವಾಗಲೂ ತುಂಬ ಆಸಕ್ತಿಯಿದ್ದಿತು.

**ತಸ್ಯ ಪತ್ನೀ ಸುಶೀಲಾ ಚ ಪತಿವ್ರತಪರಾಯಣಾ ।**
**ಸತ್ಯಶೀಲಃ ಸುತೋ ಜಾತೋ ವಿದ್ಯಾಧ್ಯಯನತತ್ಪರಃ ॥ ೪ ॥**

**ತಸ್ಯಾನುಜಾ ಮಧುಮತೀ ಶೀಲರೂಪಗುಣಾನ್ವಿತಾ ।**
**ದ್ವಾದಶಾಬ್ದವಯಃಪ್ರಾಪ್ತೇ ವಿವಾಹಾರ್ಥಂ ಪಿತಾ ಯದಾ ॥ ೫ ॥**

**ಭ್ರಾತಾ ಬಭ್ರಾಮ ತೌ ಸರ್ವಂ ಚಿನುತಶ್ಚ ಸುತಾವರಮ್ ।**
**ಕದಾಚಿದ್ರಾಜಪುತ್ರಸ್ಯ ವಿವಾಹೇ ಸಮತೋ ದ್ವಿಜಃ ॥ ೬ ॥**

**ಪಠನಾರ್ಥೇ ತು ಕಾಶ್ಯಾಂ ವೈ ಸತ್ಯಶೀಲಃ ಸ್ವಯಂ ಗತಃ ।**
**ಏತಸ್ಮಿನ್ನಂತರೇ ರಾಜನ್ ದ್ವಿಜಃ ಕಶ್ಚಿತ್ಸಮಾಗತಃ ॥ ೭ ॥**

**ವಾಮನೋ ನಾಮ ವಿಖ್ಯಾತೋ ರೂಪಶೀಲವಯೋಽನ್ವಿತಃ ।**
**ಸುತಾ ಮಧುಮತೀ ತಂ ಚ ದೃಷ್ಟ್ವಾ ಕಾಮಾತುರಾಽಭವತ್ ॥ ೮ ॥**

---

೪ ಆ ಮಂತ್ರಿಗೆ ಪತಿವ್ರತಾ ಶಿರೋಮಣಿಯಾದ ಸುಶೀಲೆಯೆಂಬ ಪತ್ನಿಯಿದ್ದಳು. ಇವರಿಗೆ ಸತ್ಯಶೀಲನೆಂಬ ಮಗನು ಜನಿಸಿ ಶಾಸ್ತ್ರವಿದ್ಯೆ, ವೇದಾಧ್ಯಯನ ಇವುಗಳಲ್ಲಿ ನಿರತನಾಗಿದ್ದನು.

೫-೬. ಅವನಿಗೆ ಸುಶೀಲವತಿಯೂ, ರೂಪಸಂಪನ್ನೆಯೂ, ಗುಣಯುಕ್ತೆಯೂ, ಆದ ಮಧುಮತಿ ಎಂಬ ಹೆಸರಿನ ತಂಗಿಯಿದ್ದಳು. ಅವಳಿಗೆ ಹನ್ನೆರಡುವರ್ಷವಾಗುತ್ತಲೆ ಅವಳ ತಂದೆಯೂ, ಅಣ್ಣನೂ ಆ ಬಾಲೆಗೆ ಸರಿಯಾದ ವರನನ್ನು ಹುಡುಕುತ್ತಾ ಅಲೆಯುತ್ತಿದ್ದರು. ಒಂದುದಿನ ರಾಜಪುತ್ರನ ವಿವಾಹ ಮಹೋತ್ಸವಕ್ಕೆ ಆಹ್ವಾನಿತನಾದ ಮಂತ್ರಿಯು ಅಲ್ಲಿಗೆ ಹೋಗಿದ್ದನು

೭. ಮಗನಾದ ಸತ್ಯಶೀಲನು ವೇದಾಧ್ಯಯನಕ್ಕಾಗಿ ಕಾಶಿಗೆ ಹೋಗಿದ್ದನು. ಅಯ್ಯಾ ರಾಜನೇ ! ಹೀಗೆ ಇವರಿಬ್ಬರೂ ಇಲ್ಲದ ಈ ಸಂದರ್ಭದಲ್ಲಿ ಒಬ್ಬಬ್ರಾಹ್ಮಣನು ಮಂತ್ರಿಯ ಮನೆಗೆ ಬಂದನು.

೮. ಆತನು ಶೀಲವಂತನೂ ಸುಂದರನಾದ ಯುವಕನೂ ಆಗಿ ವಾಮನನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು. ಮಂತ್ರಿಪುತ್ರಿಯಾದ ಮಧುಮತಿಯು ಮನೆಗೆ ಒಂದ ಆತನನ್ನು ನೋಡಿ ಕಾಮಪೀಡಿತೆಯಾದಳು.

ಭೋಜನಂ ಛಾದನಂ ಪಾನಂ ಸ್ವಪ್ನಂ ತ್ಯಕ್ತ್ವಾ ಚ ವಿಹ್ವಲಾ ।
ಚಕೋರೀವ ವಿನಾ ಚಂದ್ರಂ ಕಾಮಬಾಣಪ್ರಪೀಡಿತಾ ॥ ೯ ॥

ದೃಷ್ಟ್ವಾ ಸುಶೀಲಾ ತಂ ಬಾಲಾ ವಾಮನಂ ಬ್ರಾಹ್ಮಣಂ ತಥಾ ।
ವಾರಯಾಮಾಸ ತಾಂಬೂಲೈಃ ಸ್ವರ್ಣದ್ರವ್ಯಸಮನ್ವಿತೈಃ ॥ ೧೦ ॥

ಹರಿಶರ್ಮಾ ಪ್ರಯೋಗೇ ಚ ದ್ವಿಜಂ ದೃಷ್ಟ್ವಾ ತ್ರಿವಿಕ್ರಮಮ್ ।
ವೇದವೇದಾಂಗತತ್ತ್ವಜ್ಞಂ ಸುತಾರ್ಥೇऽವರಯತ್ತದಾ ॥ ೧೧ ॥

ಸತ್ಯಶೀಲಸ್ತು ಕಾಶ್ಯಾಂ ವೈ ಗುರುಪುತ್ರಂ ಚ ಕೇಶವಮ್ ।
ವರಿತ್ವಾ ತಂ ಭಗಿನ್ಯರ್ಥೇ ಯಯೌ ಗೇಹಂ ಮುದಾನ್ವಿತಃ ॥ ೧೨ ॥

---

೯. ಅದುಮೊದಲುಗೊಂಡು ಆಕೆ ಆಹಾರ ಪಾನಾದಿಗಳ ಸೇವನೆ, ನಿದ್ದೆ, ಉತ್ತಮ ವಸ್ತ್ರಧಾರಣೆ ಇವುಗಳನ್ನು ವರ್ಜ್ಯಮಾಡಿ ಚಂದ್ರನನ್ನು ಕಾಣದ ಚಕೋರಿಯಂತೆ ಕಾಮಬಾಣಪೀಡಿತೆಯೂ, ಧೈರ್ಯಗುಂದಿದವಳೂ ಆದಳು.

೧೦. ತನ್ನ ಮಗಳು ಆ ಬ್ರಾಹ್ಮಣನನ್ನು ನೋಡಿದಾರಭ್ಯ ಈರೀತಿಯಾದುದನ್ನು ಕಂಡು ಆ ಕುಮಾರಿಯ ತಾಯಿಯೆನಿಸಿದ ಸುಶೀಲೆಯು ಆತನಿಗೆ ಸುವರ್ಣನಾಣ್ಯಸಮೇತ ತಾಂಬೂಲವನ್ನು ಸಮರ್ಪಿಸಿ ತನ್ನ ಪತಿ ಬರುವವರೆಗೂ ಇಲ್ಲೇ ಇರಬೇಕೆಂದು ಹೇಳಿ ಅತನು ಮುಂದಕ್ಕೆ ಪ್ರಯಾಣಮಾಡುವದನ್ನು ತಡೆದಳು.

೧೧. ಮಂತ್ರಿಯಾದ ಹರಿಶರ್ಮನು ತನ್ನ ಪ್ರವಾಸದ ಸಂದರ್ಭದಲ್ಲಿ ಪ್ರಯೋಗಗಳಲ್ಲಿ ಸಮರ್ಥನೂ, ವೇದವೇದಾಂಗ ಪಾರಂಗತನೂ ಆದ ತ್ರಿವಿಕ್ರಮನೆಂಬ ಮಿತ್ರನನ್ನು ಕಂಡು ತನ್ನ ಮಗಳನ್ನು ವರಿಸುವದಕ್ಕಾಗಿ ನೋಡುವುದಕ್ಕೆ ಬರಬೇಕೆಂದು ಪ್ರಾರ್ಥಿಸಿದನು

೧೨. ಕಾಶಿಗೆ ಹೋಗಿದ್ದ ಮಂತ್ರಿಪುತ್ರನಾದ ಸುಶೀಲನು ತನ್ನ ಗುರುಪುತ್ರನಾದ ಕೇಶವನೆಂಬ ಶ್ರೋತ್ರಿಯನನ್ನು ಕುರಿತು ತನ್ನ ತಂಗಿಯನ್ನು ನೋಡಿ ವರಿಸುವುದಕ್ಕೆ ಬಾ ಎಂದು ಪ್ರಾರ್ಥಿಸಿ ಸಂತೋಷದಿಂದ ಮನೆಗೆ ಬಂದನು.

ಮಾಘಕೃಷ್ಣತ್ರಯೋದಶ್ಯಾಂ ಭೃಗೌ ಲಗ್ನಂ ಶುಭಂ ಸ್ಮೃತಮ್ ।
ತ್ರಯೋ ವಿಪ್ರಾಸ್ತದಾ ಪ್ರಾಪ್ತಾಃ ಕನ್ಯಾರ್ಥೇ ರೂಪಮೋಹಿತಾಃ ॥ ೧೩ ॥

ತಸ್ಮಿನ್ ಕಾಲೇ ತು ಸಾ ಕನ್ಯಾ ಭುಜಂಗೇನೈವ ದಂಶಿತಾ ।
ಮೃತಾ ಪ್ರೇತತ್ವಮಾಪನ್ನಾ ಪೂರ್ವಕರ್ಮಪ್ರಭಾವತಃ ॥ ೧೪ ॥

ತದಾ ತೇ ಬ್ರಾಹ್ಮಣಾ ಯತ್ನಂ ಕಾರಯಾಮಾಸುರುತ್ತಮಮ್ ।
ನ ಜೀವನವತೀ ಬಾಲಾ ಗರಲೇನ ವಿಮೋಹಿತಾ ॥ ೧೫ ॥

ಹರಿಶರ್ಮಾ ತು ತತ್ಸರ್ವಂ ಕೃತ್ವಾ ವೇದವಿಧಾನತಃ ।
ಆಯಯೌ ಮಂದಿರಂ ರಾಜನ್ ಸ್ಸುತಾಗುಣವಿಮೋಹಿತಃ ॥ ೧೬ ॥

ತ್ರಿವಿಕ್ರಮಸ್ತು ಬಹುಧಾ ದುಃಖಂ ಕೃತ್ವಾ ಸ್ಮರಾನುಗಃ ।
ಕಂಥಾಧಾರೀ ಯತಿರ್ಭೂತ್ವಾ ದೇಶಾದ್ದೇಶಾಂತರಂ ಯಯೌ ॥ ೧೭ ॥

---

೧೩. ಮಾಘ ಬಹುಳ ತ್ರಯೋದಶಿ ಶುಕ್ರವಾರದದಿನ ಕನ್ಯಾವೀಕ್ಷಣಕ್ಕಾಗಿ ಶುಭಲಗ್ನವು ನಿಶ್ಚಯವಾಯಿತು. ಆ ವಾಮನ, ಕೇಶವ, ತ್ರಿವಿಕ್ರಮ, ಈ ಮೂವರು ವಿಪ್ರರೂ ಆ ಕನ್ಯೆಯಲ್ಲಿ ಮೋಹವುಳ್ಳವರಾಗಿ ಆಕೆಯನ್ನು ನೋಡುವುದಕ್ಕೆ ಆ ಶುಭ ದಿವಸ ಅಲ್ಲಿಗೆ ಬಂದರು.

೧೪. ಅಷ್ಟುಹೊತ್ತಿಗೆ ಆ ಕನ್ಯೆಯು ಸರ್ಪದಷ್ಟಳಾಗಿ ಮೃತಿಹೊಂದಿ ತನ್ನ ಕರ್ಮವಶದಿಂದ ಪ್ರೇತತ್ವ ಹೊಂದಿದಳು. ಆಗ ಮೂವರು ವಿಪ್ರರೂ ಅವಳನ್ನು ಉಳಿಸಲು ಶ್ರೇಷ್ಠವೂ ಮತ್ತು ಉತ್ತಮವೂ ಆದ ಪ್ರಯತ್ನಗಳನ್ನು ಬೇಕಾದಷ್ಟು ಮಾಡಿದರು.

೧೫-೧೬. ಏನೇನು ಮಾಡಿದರೂ ವಿಷಮೂರ್ಛಿತೆಯಾದ ಆ ಮಧು ಮತಿಯು ಬದುಕಲಿಲ್ಲ. ಹರಿಶರ್ಮನು ವೇದೋಕ್ತರೀತಿಯಿಂದ ಉತ್ತರಕ್ರಿಯಾದಿ ಗಳನ್ನು ಸಾಂಗವಾಗಿ ಮುಗಿಸಿ ತನ್ನ ಮಗಳ ಸುಗುಣಗಳನ್ನು ನೆನೆದು ಹಂಬಲಿಸುತ್ತ ಮನೆಗೆ ಹಿಂದಿರುಗಿದನು.

೧೭. ಅಯ್ಯಾ ರಾಜನೇ! ಕೇಳು, ಅನಂತರ ತ್ರಿವಿಕ್ರಮನು ಕಾಮಪೀಡಿತನಾಗಿ ಬಹುದುಃಖ ಹೊಂದಿ ಕಾವಿಯ ಬಟ್ಟೆಯ ನಿಲುವಂಗಿಯನ್ನು ಧರಿಸಿ ಸಂನ್ಯಾಸಿ ಯಾಗಿ ದೇಶದೇಶಗಳನ್ನು ಸುತ್ತುತ್ತಿದ್ದನು.

ಕೇಶವಸ್ತು ಮಹಾದುಃಖೀ ಪ್ರಿಯಾಸ್ಥೀನಿ ಗೃಹೀತವಾನ್ ।
ತೀರ್ಥಾತ್ತೀರ್ಥಾಂತರಂ ಪ್ರಾಪ್ತಃ ಕಾಮಬಾಣೇನ ಪೀಡಿತಃ ॥ ೧೮ ॥

ಭಸ್ಮಗ್ರಾಹೀ ವಾಮನಸ್ತು ವಿರಹಾಗ್ನಿಪ್ರಪೀಡಿತಃ ।
ತಸ್ಥೌ ಚಿತಾಯಾಂ ಕಾಮಾರ್ತಃ ಪತ್ನೀಧ್ಯಾನಪರಾಯಣಃ ॥ ೧೯ ॥

ಏಕದಾ ಸರಯೂತೀರೇ ಲಕ್ಷ್ಮಣಾಖ್ಯಪುರೇ ಶುಭೇ ।
ತ್ರಿವಿಕ್ರಮಸ್ತು ಭಿಕ್ಷಾರ್ಥೇ ಸಂಪ್ರಾಪ್ತೇ ದ್ವಿಜಮಂದಿರೇ ॥ ೨೦ ॥

ತಸ್ಮಿನ್ ದಿನೇ ರಾಮಶರ್ಮಾ ಶಿವಧ್ಯಾನಪರಾಯಣಃ ।
ಯತಿನಂ ವರಯಾಮಾಸ ಭೋಜನಾರ್ಥಂ ಸ್ವಮಂದಿರೇ ॥ ೨೧ ॥

ತಸ್ಯ ಪತ್ನೀ ವಿಶಾಲಾಕ್ಷೀ ರಚಿತ್ವಾ ಬಹುಭೋಜನಮ್ ।
ಆಹೂಯ ಯತಿನಂ ರಾಜನ್ಪಾತ್ರಮಾಲಭಮಾಕರೋತ್ ॥ ೨೨ ॥

---

೧೮. ಕೇಶವನು ಮದನಾವೇಶದಿಂದ ಮಹಾದುಃಖವುಳ್ಳವನಾಗಿ ಪ್ರಿಯೆಯ ಅಸ್ಥಿಗಳನ್ನು ತೆಗೆದುಕೊಂಡು ತೀರ್ಥಯಾತ್ರೆಗೆ ಹೋದನು.

೧೯. ವಾಮನನು ವಿರಹದಿಂದ ಸಂತಾಪಗೊಂಡವನಾಗಿ ಅವಳನ್ನು ಸುಟ್ಟ ಬೂದಿಯನ್ನು ಲೇಪಿಸಿಕೊಂಡು ಪತ್ನಿಯನ್ನು ಧ್ಯಾನಿಸುವುದರಲ್ಲಿ ಆಸಕ್ತನಾಗಿ ಚಿತಿಯ ಬಳಿಯೇ ನಿಂತನು.

೨೦. ಇತ್ತ ಹೀಗಿರಲು ಅತ್ತ ಸರಯೂತೀರದಲ್ಲಿರುವ ಲಕ್ಷ್ಮಣಪುರವೆಂಬ ಸುಂದರವಾದ ನಗರದಲ್ಲಿ ಒಂದುದಿನ ಈ ಸನ್ಯಾಸಿ ತ್ರಿವಿಕ್ರಮನು ಭಿಕ್ಷೆಗಾಗಿ ರಾಮಶರ್ಮನೆಂಬ ವಿಪ್ರನ ಮನೆಗೆ ಹೋದನು

೨೧. ಆದಿನ ರಾಮಶರ್ಮನು ಶಿವಧ್ಯಾನ ಪರಾಯಣನಾಗಿ ಆ ಸನ್ಯಾಸಿಯನ್ನು ತನ್ನ ಮನೆಗೇ ಭಿಕ್ಷಾವಂದನೆಗೆ ದಯಮಾಡಬೇಕೆಂದು ಪ್ರಾರ್ಥಿಸಿದನು.

೨೨. ಅವನ ಪತ್ನಿಯಾದ ವಿಶಾಲಾಕ್ಷಿಯು ಬಹುವಿಧವಾದ ಭಕ್ಷ್ಯಪಾಕಾದಿಗಳನ್ನು ಸಿದ್ಧಪಡಿಸಿದ್ದರೂ ಪಾತ್ರೆಯನ್ನು ಆಲಭನಮಾಡಿ ಬಳಿದು ಬಡಿಸಿದಳು.

ತಸ್ಮಿನ್ ಕಾಲೇ ಚ ತದ್ಬಾಲೋ ಮೃತಃ ಪಾಪವಶಂ ಗತಃ ।
ಅರೋದೀತ್ತಸ್ಯ ಸೈರಂಧ್ರೀ ವಿಶಾಲಾಕ್ಷ್ಯಪಿ ಭರ್ತ್ಸಿತಾ ॥ ೨೩ ॥

ನ ರೋದನಂ ತ್ಯಕ್ತವತೀ ಪುತ್ರಶೋಕಾಗ್ನಿತಾಪಿತಾ ।
ರಾಮಶರ್ಮಾ ತದಾ ಪ್ರಾಪ್ತೋ ಮಂತ್ರಂ ಸಂಜೀವನಂ ಶುಭಮ್ ॥ ೨೪ ॥

ಜಪಿತ್ವಾ ಮಾರ್ಜನಂ ಕೃತ್ವಾ ಜೀವಯಾಮಾಸ ಬಾಲಕಮ್ ।
ವಿನಯಾವನತೋ ವಿಪ್ರಸ್ತಂ ಚ ಸಂನ್ಯಾಸಿನಂ ತದಾ ॥ ೨೫ ॥

ಭೋಜನಂ ಕಾರಯಿತ್ವಾ ತು ಮಂತ್ರಂ ಸಂಜೀವನಂ ದದೌ ।
ತ್ರಿವಿಕ್ರಮಸ್ತು ತಂ ಮಂತ್ರಂ ಪಠಿತ್ವಾ ಯಮುನಾತಟೇ ॥ ೨೬ ॥

ಪ್ರಾಪ್ತವಾನ್ ಯತ್ರ ಸಾ ನಾರೀ ದಾಹಿತಾ ಹರಿಶರ್ಮಣಾ ।
ಏತಸ್ಮಿನ್ನಂತರೇ ತತ್ರ ರಾಜಪುತ್ರೋ ಮೃತಿಂ ಗತಃ ॥ ೨೭ ॥

ದಾಹಿತಸ್ತನಯಃ ಪಿತ್ರಾ ಶೋಕಕರ್ತಾ ತದಾಮುನಾ ।
ಜೀವನಂ ಪ್ರಾಪ್ತವಾನ್ ಬಾಲಸ್ತಸ್ಯ ಮಂತ್ರಪ್ರಭಾವತಃ ॥ ೨೮ ॥

---

೨೩-೨೭. ಆ ಸಮಯಕ್ಕೆ ಸರಿಯಾಗಿ ಪಾಪವಶದಿಂದ ಅವಳ ಮಗನು ಮೃತಿ ಹೊಂದಿದನು, ಅದನ್ನು ನೋಡಿ ಆಕೆಯ ದಾಸಿಯಾದ ಸೈರಂಧ್ರಿಯು ರೋದನ ಮಾಡಿದಳು, ಅನಂತರ ವಿಶಾಲಾಕ್ಷಿಯು ತನ್ನ ಅದೃಷ್ಟವನ್ನು ನಿಂದಿಸುತ್ತಾ ರೋದಿಸಿದಳು. ಪುತ್ರಶೋಕಾಗ್ನಿಯಿಂದ ಸಂತಪ್ತೆಯಾದ ಅವಳು ರೋದನವನ್ನು ನಿಲ್ಲಿಸಲೇ ಇಲ್ಲ. ಆಗ ರಾಮಶರ್ಮನು ಶುಭಕರವಾದ ಮೃತಸಂಜೀವಿನೀ ಮಂತ್ರವನ್ನು ಜಪಿಸಿ ನೀರನ್ನು ಪ್ರೋಕ್ಷಿಸಲು ಆ ಬಾಲನು ಬದುಕಿದನು ಅನಂತರ ರಾಮಶರ್ಮನು ಆ ಸಂನ್ಯಾಸಿಯನ್ನು ವಿನಯದಿಂದ ಪ್ರಾರ್ಥಿಸಿ ಭೋಜನವನ್ನು ನೆರವೇರಿಸಿ ಆಮೇಲೆ ಯತಿಗೂ ಆ ಮಂತ್ರವನ್ನು ಉಪದೇಶಿಸಿದನು ಸಂನ್ಯಾಸಿಯಾದ ತ್ರಿವಿಕ್ರಮನು ಯಮುನಾ ತೀರದಲ್ಲಿ ಅದನ್ನು ಜಪಿಸಿ, ಸಿದ್ಧಿಹೊಂದಿದವನಾಗಿ ಹರಿಶರ್ಮನು ಮಧುಮತಿಯ ಮೃತಶರೀರವನ್ನು ದಹನಮಾಡಿದ್ದ ಸ್ಥಳಕ್ಕೆ ಬಂದನು. ಇದೇ ಸನ್ನಿವೇಶದಲ್ಲಿ ಆ ಊರಿನ ರಾಜಕುಮಾರನು ಮೃತನಾಗಿದ್ದನು.

೨೮. ಅನಂತರ ದುಃಖಪೀಡಿತನಾದ ರಾಜನಿಂದ ರಾಜಪುತ್ರನ ದಹನಸಂಸ್ಕಾರವೆಲ್ಲಾ ನೆರವೇರಿಸಲ್ಪಟ್ಟಿತು, ಮಂತ್ರಸಿದ್ಧಿ ಪಡೆದ ತ್ರಿವಿಕ್ರಮನು ತನ್ನ ಮಂತ್ರಪ್ರಭಾವದಿಂದ ಈ ರಾಜಪುತ್ರನನ್ನು ಬದುಕಿಸಲು ಉಜ್ಜುಗಿಸಿದನು.

ಗುಣಾಧಿಪಸ್ಯ ತನಯೋ ರಾಜ್ಞೋ ಧರ್ಮಸ್ಥಲೀಪತೇಃ ।
ತ್ರಿವಿಕ್ರಮಂ ವಚಃ ಪ್ರಾಹ ವೀರಬಾಹುರ್ಮಹಾಬಲಃ ॥ ೨೯ ॥

ಜೀವನಂ ದತ್ತವಾನ್ ಮಹ್ಯಂ ವರಯಾದ್ಯ ವರಂ ಮಮ ।
ಸ ವಿಪ್ರಃ ಪ್ರಾಹ ಭೋ ರಾಜನ್ ಕೇಶವೋ ನಾಮ ಯೋ ದ್ವಿಜಃ ॥ ೩೦ ॥

ಗೃಹೀತ್ವಾಸ್ಥಿ ಗತಸ್ತೀರ್ಥೇ ತಮನ್ವೇಷಯ ಮಾ ಚಿರಂ ।
ವೀರಬಾಹುಸ್ತಥಾ ಮತ್ವಾ ದೂತಮಾರ್ಗೇಣ ತಂ ಪ್ರತಿ ॥ ೩೧ ॥

ಪ್ರಾಪ್ತಸ್ತಂ ಕಥಯಾಮಾಸ ಯಥಾಪ್ರಾಪ್ತಂ ಹಿ ಜೀವನಂ ।
ಇತಿ ಶ್ರುತ್ವಾ ವಚಸ್ತಸ್ಯ ಕೇಶವೋಽಸ್ಥಿಸಮನ್ವಿತಃ ॥ ೩೨ ॥

ಪ್ರಗತ್ಯಾಸ್ಥೀನಿ ಸರ್ವಾಣಿ ದದೌ ತಸ್ಮೈ ದ್ವಿಜಾತಯೇ ।
ಪುನಃ ಸಂಜೀವಿತಾ ಬಾಲಾ ಕೇಶವಾದೀನ್ ವಚೋಽಬ್ರವೀತ್ ॥ ೩೩ ॥

ಯೋಗ್ಯಾ ಧರ್ಮೇಣ ಯಸ್ಯಾಹಂ ತಸ್ಮೈ ಪ್ರಾಯಾಮಿ ಧರ್ಮಿಣೇ ।
ಇತಿ ಶ್ರುತ್ವಾ ವಚಸ್ತಸ್ಯಾ ಮೌನವಂತಸ್ತ್ರಯಃ ಸ್ಥಿತಾಃ ॥ ೩೪ ॥

---

೨೯-೩೩. ಧರ್ಮಸ್ಥಲದೊಡೆಯನಾದ ಗುಣಾಧಿಪರಾಜನ ಮಗನೂ ಮಹಾ ಬಲಶಾಲಿಯೂ ಆದ ವೀರಬಾಹುವು ಕೂಡಲೇ ಜೀವಿತನಾಗಿ ಆ ತ್ರಿವಿಕ್ರಮನನ್ನು ಕುರಿತು "ಅಯ್ಯಾ ನೀನು ನನಗೆ ಜೀವದಾನಮಾಡಿದ್ದೀ; ಆದ್ದರಿಂದ ನಿನಗೆ ಬೇಕಾದ ವರವನ್ನು ಕೇಳು" ಎಂದು ಹೇಳಲು ಆ ಬ್ರಾಹ್ಮಣನು "ಎಲೈ ರಾಜನೇ! ಕೇಶವ ನೆಂಬ ಬ್ರಾಹ್ಮಣನು ಮಧುಮತಿಯ ಅಸ್ಥಿ ಸಮೇತ ತೀರ್ಥಯಾತ್ರೆಗೆ ಹೋಗಿದ್ದಾನೆ, ಅವನನ್ನು ಎಲ್ಲಿದ್ದರೂ ಹುಡುಕಿಸಿ ಜಾಗ್ರತೆಯಾಗಿ ಕರೆಯಿಸಬೇಕು" ಎಂದು ಹೇಳಲು ವೀರಬಾಹು ಹಾಗೆಯೇ ಆಗಲಿ ಎಂದು ಒಪ್ಪಿದನು. ದೂತರ ಮುಖಾಂತರ ಅವನು ಇರುವ ಸ್ಥಳವನ್ನು ಗೊತ್ತುಹಚ್ಚಿದ ಕೂಡಲೆ ರಾಜಪುತ್ರನು ಅವನ ಸಮೀಪಕ್ಕೆಹೋಗಿ ತಾನು ಮೃತನಾಗಿದ್ದುದನ್ನೂ ಮಂತ್ರಶಕ್ತಿಯಿಂದ ಮತ್ತೆ ಬದುಕಿದುದನ್ನೂ ಎಲ್ಲ ವನ್ನೂ ಆ ವಿಪ್ರನಿಗೆ ತಿಳಿಸಿ ಕರೆದುತಂದನು. ಆ ಅಸ್ಥಿಯಿಂದ ತ್ರಿವಿಕ್ರಮನು ಆವ ಳನ್ನು ಬದುಕಿಸಿದನು. ಹೀಗೆ ಜೀವಿತಳಾದ ಆ ಬಾಲಿಕೆಯು ಕೇಶವಾದಿಗಳನ್ನು ಕುರಿತು "ಈಗ ನಾನು ಧರ್ಮತಃ ಯಾರಿಗೆ ಪತ್ನಿಯಾಗಬೇಕೋ ತಿಳಿಸಿದರೆ ಅವ ರನ್ನು ವರಿಸುವೆನು" ಎಂದು ಹೇಳಿದಳು.

೩೪. ಅವಳ ಈ ಮಾತನ್ನು ಕೇಳಿ ಈ ಮೂವರೂ ಏನು ಹೇಳಲೂ ತೋರದೆ ಮೌನವಾಗಿ ನಿಂತರು.

**ಅತಸ್ತ್ವಂ ವಿಕ್ರಮಾದಿತ್ಯ ಧರ್ಮಜ್ಞ ಕಥಯಸ್ವ ಮೇ ।**
**ಕಸ್ಮೈ ಯೋಗ್ಯಾ ಚ ಸಾ ಬಾಲಾ ನಾಮ್ನಾ ಮಧುಮತೀ ಶುಭಾ ॥ ೩೫ ॥**

**॥ ಸೂತ ಉವಾಚ ॥**

**ವಿಹಸ್ಯ ವಿಕ್ರಮಾದಿತ್ಯೋ ವೈತಾಲಂ ಪ್ರಾಹ ನಮ್ರಧೀಃ ।**
**ಯೋಗ್ಯಾ ಮಧುಮತೀ ನಾರೀ ವಾಮನಾಯ ದ್ವಿಜನ್ಮನೇ ॥ ೩೬ ॥**

**ಪ್ರಾಣದಾತಾ ತು ಯೋ ವಿಪ್ರಃ ಪಿತೇವ ಗುಣತತ್ಪರಃ ।**
**ಅಸ್ಥಿದಾತಾ ತು ಯೋ ತಿವಿಪ್ರೋ ಭ್ರಾತೃತುಲ್ಯಸ್ಸ ವೇದವಿತ್ ॥ ೩೭ ॥**

**ಇತಿ ಶ್ರೀ ಭವಿಷ್ಯೆಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ ಕಲಿಯುಗೀಯೇತಿಹಾಸ ಸಮುಚ್ಚಯೇ ದ್ವಿತೀಯೋಽಧ್ಯಾಯಃ**



---

೩೫. ಎಲೈ ಧರ್ಮಜ್ಞನಾದ ವಿಕ್ರಮರಾಜನೇ ! ಬಾಲೆಯಾದ ಮಧುಮತಿಯು ಈಗ ಯಾರಿಗೆ ಸೇರಲು ಅರ್ಹಳು ಎಂಬುದನ್ನು ನೀನು ನನಗೆ ಹೇಳು ಎಂದು ಬೇತಾಳವು ಹೇಳಿತು.

೩೬-೩೭. ಸೂತನು ಹೇಳುತ್ತಾನೆ—ಅದಕ್ಕೆ ವಿಕ್ರಮಾದಿತ್ಯನು ನಕ್ಕು ಬೇತಾಳನನ್ನು ಕುರಿತು " ವಿನೀತನಾಗಿ ಪ್ರಾಣದಾನಮಾಡಿದ ವಿಪ್ರನನ್ನು ತಂದೆಯಂತೆ ಭಾವಿಸಬೇಕು. ಅಸ್ಥಿಯನ್ನು ತಂದುಕೊಟ್ಟ ವೇದಪಾರಂಗತನಾದ ವಿಪ್ರನು ಸಹೋದರಪ್ರಾಯನು ಇವರಿಬ್ಬರೂ ಪಿತೃಭ್ರಾತೃಗಳಾದುದರಿಂದ ವಾಮನನೇ ನಿಜವಾಗಿಯೂ ಮಧುಮತಿಯನ್ನು ವರಿಸಲು ಯೋಗ್ಯನು " ಎಂಬುದಾಗಿ ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ
ಖಂಡದಲ್ಲಿ ಕಲಿಯುಗದ ಇತಿಹಾಸಮುಚ್ಚಯವೆಂಬ
ಎರಡನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ಪ್ರಥಮಖಂಡೇ
## ತೃತೀಯೋಽಧ್ಯಾಯಃ

---

॥ ಸೂತ ಉವಾಚ ॥

ವಿಪ್ರವರ್ಯ ಮಹಾಭಾಗ ಶೃಣು ಗಾಥಾಂ ಮನೋರಮಾಂ ।
ವೈತಾಲೋ ಭೂಪತಿಶ್ರೇಷ್ಠ ಪುನರ್ವಿಕ್ರಮಮಬ್ರವೀತ್ ॥ ೧ ॥

ವರ್ಧವನ್ನಗರೇ ರಮ್ಯೇ ನಾನಾಜನನಿಷೇವಿತೇ ।
ತತ್ರಾಭವನ್ಮಹೀಪಾಲೋ ರೂಪಸೇನೋ ಮಹಾಬಲಃ ॥ ೨ ॥

ವಿದ್ವನ್ಮಾಲಾ ಪ್ರಿಯಾ ತಸ್ಯ ಪತಿಸೇವಾಪರಾಯಣಾ ।
ಏಕದಾ ಕ್ಷತ್ರಿಯಃ ಕಶ್ಚಿನ್ನಾಮ್ನಾ ವೀರವರಃ ಸ್ಮೃತಃ ॥ ೩ ॥

---

### ಮೂರನೆಯ ಅಧ್ಯಾಯ

೧-೨. ಅನಂತರ ಸೂತನು ಶೌನಕನನ್ನು ಕುರಿತು ಹೇಳುತ್ತಾನೆ—ಪೂಜ್ಯನಾದ ಬ್ರಾಹ್ಮಣ ಶ್ರೇಷ್ಠನೇ! ಮನೋಹರವಾದ ಈ ಒಗಟೆಯನ್ನು ಕೇಳು, ಬೇತಾಳವು ಪುನಃ ವಿಕ್ರಮಾದಿತ್ಯರಾಯನನ್ನು ಕುರಿತು ಇಂತೆಂದಿತು. ನೋಡುವುದಕ್ಕೆ ಸುಂದರವೂ ನಾನಾಜನಗಳಿಂದ ನಿಬಿಡವೂ ಆದ ವರ್ಧವನ್ನೆಂಬ ಪಟ್ಟಣದಲ್ಲಿ ಮಹಾಪರಾಕ್ರಮಿಯಾದ ರೂಪಸೇನನೆಂಬ ರಾಜನಿದ್ದನು.

೩-೪. ಗಂಡನ ಸೇವೆಯಲ್ಲಿ ಆಸಕ್ತಳಾದ ವಿದ್ವನ್ಮಾಲೆಯೆಂಬವಳು ಆತನಿಗೆ ಪತ್ನಿಯಾಗಿದ್ದಳು. ಒಂದುದಿನ ವೀರವರನೆಂಬ ಹೆಸರಿನ ಕ್ಷತ್ರಿಯನು ತನ್ನ ಹೆಂಡತಿ, ಮಗ, ಮಗಳು ಇವರೊಡನೆ ಜೀವನೋಪಾಯವನ್ನು ಹುಡುಕಿಕೊಂಡು ಆ ಊರಿಗೆ

ಪುತ್ರಕನ್ಯಾಸಪತ್ನೀಕೋ ವೃತ್ತ್ಯರ್ಥಂ ಸಮುಪಾಗತಃ ।
ವಿನಯಾವನತೋ ಭೂತ್ವಾ ರೂಪಸೇನಂ ಮಹೀಪತಿಂ ॥ ೪ ॥

ಕಿಂಚಿಚ್ಛ್ರುತ್ವಾ ದದೌ ಸ್ವರ್ಣಂ ಸಹಸ್ರಂ ಪ್ರತ್ಯಹಂ ನೃಪ ।
ವೀರಸೇನಸ್ತು ತಲ್ಲಬ್ಧ್ವಾ ವಹ್ನೌ ತೀರ್ಥೇ ದ್ವಿಜಾತಿಷು ॥ ೫ ॥

ವ್ಯಯಂ ಕೃತ್ವಾ ತು ತಚ್ಛೇಷಂ ಸ ಕುಲ್ಯೇ ಭುಕ್ತವಾನ್ ಸ್ವಯಂ ।
ಏವಂ ವರ್ಷೇ ಗತೇ ರಾಜನ್ ರಾಜಲಕ್ಷ್ಮೀಃ ಶಿವಾಜ್ಞಯಾ ॥ ೬ ॥

ಪರೀಕ್ಷಾರ್ಥಂ ಸ್ಮಶಾನೇ ಚ ರೋದನಂ ಬಹು ಕುರ್ವತೀ ।
ಅರ್ಧರಾತ್ರೇ ತದಾ ರಾಜಾ ಬುದ್ಧ್ವಾ ಪ್ರಾಹ ಸ್ವಸೇವಕಂ ॥ ೭ ॥

ಗಚ್ಛ ವೀರವರ ತ್ವಂ ವೈ ಯತೋಽಸೌ ಶ್ರೂಯತೇ ರವಃ ।
ಜ್ಞಾತ್ವಾ ತತ್ಕಾರಣಂ ಸರ್ವಂ ಮಹ್ಯಂ ಶೀಘ್ರಂ ನಿವೇದಯ ॥ ೮ ॥

---

ಬಂದನು. ಆತನು ರೂಪಸೇನಮಹಾರಾಜನ ಬಳಿ ಸೇರಿ, ವಿನಯದಿಂದ ನಮ್ರನಾಗಿ ಸೇವೆಮಾಡಿದನು.

೫. ರಾಜನು ಅವನ ವಿಚಾರವನ್ನು ಕೇಳಿ ನಿತ್ಯವೂ ಸಾವಿರ ಹೊನ್ನುಗಳನ್ನು ಕೊಡುತ್ತಿದ್ದನು. ವೀರಸೇನನು ಅದನ್ನು ತೆಗೆದುಕೊಂಡು ಯಜ್ಞ, ತೀರ್ಥಯಾತ್ರೆ ಬ್ರಾಹ್ಮಣರಿಗೆ ದಾನ, ಈ ರೀತಿ ವ್ಯಯಮಾಡಿ ಉಳಿದುದನ್ನು ಹಳ್ಳದೊಳಗೆ ಹುಗಿದಿಡುತ್ತಿದ್ದನು.

೭-೮. ಅಯ್ಯಾ ರಾಜನೇ ! ಹೀಗೆ ಒಂದುವರ್ಷ ಕಳೆಯಿತು. ರಾಜ್ಯಲಕ್ಷ್ಮಿಯು ಈಶ್ವರನ ಅಪ್ಪಣೆಯ ಪ್ರಕಾರ ಇವರನ್ನು ಪರೀಕ್ಷಿಸಬೇಕೆಂದು ಅರ್ಧರಾತ್ರಿಯಲ್ಲಿ ಸ್ಮಶಾನದಲ್ಲಿ ಕುಳಿತುಕೊಂಡು ಘೋರವಾಗಿ ರೋದನಮಾಡುತ್ತಿದ್ದಳು. ಆಗ ರಾಜನು ಎಚ್ಚರಗೊಂಡು ತನ್ನ ಸೇವಕನನ್ನು "ಕುರಿತು ಅಯ್ಯಾ ವೀರವರ! ಈ ಕಠೋರವಾದ ರೋದನಧ್ವನಿ ಎತ್ತಣಿಂದ ಕೇಳಿಬರುವುದೋ ಆ ಸ್ಥಳಕ್ಕೆನೀನು ಹೋಗಿ ಆ ವ್ಯಕ್ತಿಯ ದುಃಖಕ್ಕೆ ಕಾರಣವನ್ನು ತಿಳಿದು, ಕೂಡಲೇ ಬಂದು ನನಗೆ ತಿಳಿಸು" ಎಂದು ಹೇಳಲು ಬಲಶಾಲಿಯಾದ ವೀರವರನು ಅದನ್ನು ಕೇಳಿ ಕೂಡಲೆ ಶಸ್ತ್ರಾಸ್ತ್ರವನ್ನು ಧರಿಸಿ

ಇತಿ ಶ್ರುತ್ವಾ ವೀರವರಃ ಶಸ್ತ್ರಾಸ್ತ್ರಕುಶಲೋ ಬಲೀ ।
ಸ ತತ್ರ ಗತ್ವಾ ಯತ್ರಾಸ್ತೇ ರಾಜಲಕ್ಷ್ಮೀಃ ಶುಭಾನನಾ ॥ ೯ ॥

ಶ್ಲಕ್ಷ್ಣಂ ವಚಶ್ಚ ತಾಮಾಹ ಕಿಮರ್ಥಂ ರೋದಸೇ ಸ್ಥಿತಾ ।
ಮಹತ್ಕಷ್ಟಂ ಚ ಕಿಂ ಪ್ರಾಪ್ತಂ ಕಾರಣಂ ದೇವಿ ಮೇ ವದ ॥ ೧೦ ॥

ಇತಿ ಶ್ರುತ್ವಾ ರಾಜಲಕ್ಷ್ಮೀರ್ವೀರಸೇನಂ ತಮಬ್ರವೀತ್ ।
ರಾಜಲಕ್ಷ್ಮೀಂ ಚ ಮಾಂ ವಿದ್ಧಿ ರೂಪಸೇನಸ್ಯ ಭೂಪತೇಃ ॥ ೧೧ ॥

ಮಾಸಾಂತೇ ಪ್ರಲಯಂ ಯಾಸ್ಯೇ ತಸ್ಮಾಚ್ಛೋಚಾಮಿ ಭೋ ಬಲಿನ್ ।
ಸ ಆಹ ಶೃಣು ಭೋ ದೇವಿ ತ್ವದಲ್ಪಾಯುಸ್ಸಮೀರಿತಂ ॥ ೧೨ ॥

ಕೇನ ಪುಣ್ಯೇನ ದೀರ್ಘಾಯುಸ್ತ್ವಂ ಭವೇಃ ಕಾರಣಂ ವದ ।
॥ ದೇವ್ಯುವಾಚ ॥
ಮಹಾಬಾಹೋ ಮಹಾಪ್ರಾಜ್ಞ ಯದಿ ತೇ ತನಯಸ್ಯ ವೈ । ॥ ೧೩ ॥

---

ರೋದನಧ್ವನಿಯು ಕೇಳುವ ದಿಕ್ಕಿನಲ್ಲಿ ಅರಸುತ್ತಾ ಶುಭರೂಪಿಣಿಯಾದ ರಾಜ್ಯಲಕ್ಷ್ಮಿ ಇದ್ದಲ್ಲಿಗೆ ಬಂದನು.

೧೦. ಅಳುತ್ತಿರುವ ಆಕೆಯನ್ನು ಕುರಿತು ಮೃದುವಾದ ಮಾತಿನಿಂದ "ಅಮ್ಮಾ ಏತಕ್ಕೆ ಅಳುತ್ತ ಕುಳಿತಿರುವೆ? ದೇವಿ! ನಿನಗೆ ಅಂಥ ಪ್ರಬಲವಾದ ಕಷ್ಟವೇನು ಒದಗಿದೆ? ದುಃಖದ ಕಾರಣವನ್ನು ನನಗೆ ಹೇಳು" ಎಂದನು.

೧೧. ಈ ಮಾತುಗಳನ್ನು ಕೇಳಿ ರಾಜ್ಯಲಕ್ಷ್ಮಿಯು "ಅಯ್ಯಾ ವೀರನೇ! ನಾನು ಈ ಮಹಾರಾಜನ ರಾಜ್ಯಲಕ್ಷ್ಮಿಯು, ಈ ತಿಂಗಳು ಮುಗಿಯುವುದರೊಳಗೆ ನನಗೆ ಕೊನೆಗಾಲವೆಂದು ತಿಳಿಯಿತು, ಆದಕ್ಕಾಗಿ ದುಃಖಿಸುತ್ತೇನೆ" ಎಂದಳು.

೧೨. ಆ ಮಾತಿಗೆ ವೀರವರನು, "ಎಲೌ ದೇವೀ! ಕೇಳು; ನಿನ್ನದು ಅಲ್ಪಾಯುಸ್ಸೆಂದು ನೀನೇ ಹೇಳುತ್ತಿದ್ದೀ, ಯಾವ ಪುಣ್ಯಕಾರ್ಯವೆಸಗಿದರೆ ನಿನಗೆ ದೀರ್ಘಾಯುಸ್ಸು ಲಭಿಸುವುದೋ ಅದನ್ನು ತಿಳಿಸು" ಎನ್ನಲು ಆಗ ದೇವಿಯು ಅವನನ್ನು ಕುರಿತು, ಇಂತೆಂದಳು.

೧೩-೧೪. 'ಪಾಪರಹಿತನೂ ಬುದ್ಧಿಶಾಲಿಯೂ ಬಲಿಷ್ಠನೂ ಆದ ವೀರವರನೇ! ಹಾಗೆ ನಿನಗೆ ಇಷ್ಟವಿದ್ದರೆ ನಿನ್ನ ಪುತ್ರನ ಕಪೋಲವನ್ನು ಚಂಡಿಕಾದೇವಿಗೆ ಅರ್ಪಿಸು.

**ಕಪಾಲಮರ್ಪಯ ತ್ವಂ ಚ ಚಂಡಿಕಾಯ್ಮೈ ತವಾನಘ ।**
**ದೀರ್ಘಾಯುರ್ಭವಿತಾ ಚಾಹಂ ಸ್ವಾಮಿಕಾರ್ಯಂ ಪ್ರಸಾಧಯ ॥ ೧೪ ॥**

**ಇತಿ ಶ್ರುತ್ವಾ ವೀರವರೋ ಮಂದಿರಂ ಸ್ವಯಮಾಗತಃ ।**
**ಪತ್ನೀಂ ಪ್ರಾಹ ಪ್ರಸನ್ನಾತ್ಮಾ ಸುತಂ ದೇವ್ಯೈ ನಿವೇದಯ ॥ ೧೫ ॥**

**ತಥೇತ್ಯುಕ್ತ್ವಾ ತು ಸಾ ಸಾಧ್ವೀ ತನಯಂ ಪ್ರಾಹ ನಿರ್ಭಯಾ ।**
**ರಾಜ್ಞೋಽರ್ಥೇ ತವ ದೇಹಂ ವೈ ಪುತ್ರ ಪಾಸಿ ಕುರುಷ್ವ ತತ್ ॥ ೧೬ ॥**

**ತಥಾ ಮತ್ವಾ ತು ತತ್ಪುತ್ರೋ ಭಗಿನ್ಯಾ ಮಾತೃಸಂಯುತಃ ।**
**ಚಂಡಿಕಾಭವನಂ ಪ್ರಾಪ್ಯಾಬ್ರವೀತ್ಸ್ವಪಿತರಂ ತದಾ ॥ ೧೭ ॥**

**ಭೋಸ್ತಾತ ಮೇ ಕಪಾಲಂ ಚ ಚಂಡಿಕಾಯ್ಮೈ ಸಮರ್ಪಯ ।**
**ದೀರ್ಘಾಯುರ್ಯೇನ ಯತ್ನೇನ ರಾಜಲಕ್ಷ್ಮ್ಯಾಶ್ಚ ತತ್ಕುರು ॥ ೧೮ ॥**

---

ಆಗ ನನಗೆ ದೀರ್ಘಾಯುಸ್ಸುಂಟಾಗುವುದು. ನಿನ್ನ ಸ್ವಾಮಿಯ ಕಾರ್ಯವನ್ನೂ ಚೆನ್ನಾಗಿ ಸಾಧಿಸಿದಂತಾಗುವುದು'' ಎಂದು ಹೇಳಿದಳು.

೧೫. ಈ ಮಾತನ್ನು ಕೇಳಿದ ವೀರವರನು ನೇರವಾಗಿ ತನ್ನ ಮನೆಗೆ ಬಂದು ನಡೆದ ವಿಷಯವನ್ನೆಲ್ಲಾ ತನ್ನ ಹೆಂಡತಿಗೆ ಹರ್ಷಚಿತ್ತದಿಂದ ತಿಳಿಸಿ, ''ನಿನ್ನ ಮಗನನ್ನು ದೇವಿಗೆ ಸಮರ್ಪಿಸು'' ಎಂದು ಹೇಳಿದನು.

೧೬. ಪತಿವ್ರತೆಯಾದ ಆಕೆಯು ಹಾಗೆಯೇ ಆಗಲೆಂದು ಒಪ್ಪಿ ನಿರ್ಭಯದಿಂದ ಮಗನನ್ನು ಕುರಿತು ''ಅಯ್ಯಾ ಮಗು! ರಾಜನ ರಕ್ಷಣೆಗಾಗಿ ನಿನ್ನ ದೇಹವನ್ನು ಅರ್ಪಿಸಬೇಕಾಗಿದೆ ಹಾಗೆಮಾಡು'' ಎಂದಳು.

೧೭-೨೦. ಆ ಕುಮಾರನು ಆರೀತಿ ಮಾಡಬೇಕಾದ್ದು ಕರ್ತವ್ಯವೆಂದೆಣಿಸಿ ತನ್ನ ತಾಯಿ, ತಂಗಿ ಇವರೊಡನೆ ಚಂಡೀ ದೇವಾಲಯಕ್ಕೆ ಬಂದು ತನ್ನ ತಂದೆಯನ್ನು ಕುರಿತು ''ಎಲೈ ತಂದೆಯೇ! ನನ್ನ ಕಪಾಲವನ್ನು ಚಂಡೀದೇವಿಗೆ ಸಮರ್ಪಿಸು ಈ ಕಾರ್ಯದಿಂದ ರಾಜ್ಯಲಕ್ಷ್ಮಿಗೆ ದೀರ್ಘಾಯುಸ್ಸು ಲಭಿಸಲಿ'' ಎಂದು ಹೇಳಿದನು. ಈ ಮಾತನ್ನು ಕೇಳಿ ವೀರವರನು ಮಗನ ತಲೆಯನ್ನು ಕತ್ತರಿಸಿ ಕಪಾಲವನ್ನು

**ಇತಿ ಶ್ರುತ್ವಾ ವೀರಸೇನಃ ಶಿರಶ್ಛಿತ್ವಾ ಸಮಾರ್ಪಯತ್ ।**
**ತಸ್ಯಾನುಜಾ ಮೃತಾ ತತ್ರ ತಥಾ ಮಾತಾ ತಥಾ ಪಿತಾ ॥ ೧೯ ॥**

**ದೃಷ್ಟ್ವಾ ತದ್ರೂಪಸೇನಸ್ತು ಕಾರಣಂ ಸರ್ವಮಾದಿತಃ ।**
**ಸೇವಕಂ ಸತ್ಯಸಂಧಂ ಚ ಮತ್ವಾ ತು ಸ್ವಶಿರೋಽರ್ಪಯತ್ ॥ ೨೦ ॥**

**ತದಾ ಪ್ರಸನ್ನಾ ಸಾ ದೇವೀ ನೃಪಮುಜ್ಜೀವ್ಯ ಸಾಬ್ರವೀತ್ ।**
**ವರಂ ವರಯ ಭೂಪಾಲ ಯಥೇಷ್ಟಂ ಶೀಘ್ರಮಾಪ್ನುಯಾಃ ॥ ೨೧ ॥**

**ಸ ಆಹ ವೀರಸೇನಸ್ತು ಸಕುಲೋ ಜೀವಮಾಪ್ನುಯಾತ್ ।**
**ತಥೇತ್ಯುಕ್ತ್ವಾ ತು ಸಾ ದೇವೀ ತತ್ರೈವಾಂತರಧೀಯತ ॥ ೨೨ ॥**

**ರೂಪಸೇನಃ ಪ್ರಸನ್ನಾತ್ಮಾ ಸ್ವಸುತಾಂ ಕಾಮರೂಪಿಣೀಂ ।**
**ದದೌ ಸುತಾಯ ವೈತಾಲೋ ನೃಪತಿಂ ಪ್ರಾಹ ವಿಸ್ಮಿತಃ ॥ ೨೩ ॥**

---

ದೇವಿಗೆ ಸಮರ್ಪಿಸಿದನು. ಅಣ್ಣನು ಮೃತನಾದುದನ್ನು ನೋಡಿ ತಂಗಿಯೂ ಅಲ್ಲೇ ಮೃತಿಹೊಂದಿದಳು. ಆ ಬಾಲನ ತಾಯಿಯೂ ತಂದೆಯೂ ದೇಹತ್ಯಾಗಮಾಡಿದರು. ರೂಪಸೇನ ಮಹಾರಾಜನೂ ಅಲ್ಲಿಗೆ ಬಂದು ನಡೆದಿರುವುದನ್ನೆಲ್ಲಾ ನೋಡಿ ಅದರ ಕಾರಣವನ್ನು ಕೂಲಂಕಷವಾಗಿ ತಿಳಿದು ವೀರವರನು ಸತ್ಯಸಂಧನಾದ ಸೇವಕನೆಂದು ಭಾವಿಸಿ ಅವನ ಮರಣವನ್ನು ಸಹಿಸದೆ ತನ್ನ ತಲೆಯನ್ನೇ ಕತ್ತರಿಸಿ ದೇವಿಗೆ ಅರ್ಪಿಸಿದನು.

೨೧. ಆಗ ದೇವಿಯು ಪ್ರಸನ್ನೆಯಾಗಿ ರಾಜನನ್ನು ಬದುಕಿಸಿದಳು. ಆಮೇಲೆ ಅವನನ್ನು "ಕುರಿತು-ರಾಜನೇ! ನಾನು ಪ್ರಸನ್ನೆಯಾಗಿದ್ದೇನೆ, ನಿನಗೆ ಬೇಕಾದ ವರವನ್ನು ಕೇಳು ಕೂಡಲೆ ಕೊಡುವೆನು" ಎಂದಳು.

೨೨. ಆಗ ರಾಜನು "ತಾಯೇ! ಈ ವೀರಸೇನನು ಪತ್ನೀಪುತ್ರರ ಸಮೇತ ಬದುಕಲಿ" ಎಂದನು. ದೇವಿಯು "ಹಾಗೆಯೇ ಆಗಲಿ" ಎಂದು ವರವನ್ನು ಕೊಟ್ಟು ಅಲ್ಲಿಯೇ ಅಂತರ್ಧಾನಳಾದಳು.

೨೩-೨೬. ರೂಪಸೇನ ಮಹಾರಾಜನು ಸಂತುಷ್ಟವಾದ ಮನಸ್ಸುಳ್ಳವನಾಗಿ ಕಾಮರೂಪಿಣಿ ಎಂಬ ತನ್ನ ಮಗಳನ್ನು ವೀರಸೇನನ ಮಗನಿಗೆ ಕೊಟ್ಟು ವಿವಾಹ

**ಮುಖ್ಯಸ್ನೇಹಂ ಕೃತಂ ಕೇನ ತೇಷಾಂ ಮಧ್ಯೇ ವದಸ್ವ ಮೇ ।**
**॥ ರಾಜೋವಾಚ ॥**
**ಮುಖ್ಯಸ್ನೇಹಂ ಕೃತಂ ರಾಜ್ಞಾ ದಾಸಾರ್ಥೇ ಸ್ವತನುಂ ದದೌ ॥ ೨೪ ॥**

**ಸ್ವರ್ಣಸ್ನೇಹೀ ವೀರವರೋ ಧರ್ಮಪ್ರೀತಿಃ ಪತಿವ್ರತಾ ।**
**ಬಂಧುಪ್ರೀತಿಶ್ಚ ಭಗಿನೀ ಪಿತೃಸ್ನೇಹೀ ತು ಪುತ್ರಕಃ ॥ ೨೫ ॥**

**ಮಹತ್ ಸ್ನೇಹಂ ಕೃತಂ ರಾಜ್ಞಾ ರೂಪಸೇನೇನ ಧೀಮತಾ ॥ ೨೬ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ ಖಂಡೇ ಕಲಿಯುಗೀಯೇತಿಹಾಸ ಸಮುಚ್ಚಯೇ ತೃತೀಯೋಽಧ್ಯಾಯಃ.**



---

ವನ್ನು ನೆರವೇರಿಸಿದನು" ಎಂದು ಹೇಳಿ, ಬಳಿಕ ಬೇತಾಳವು ವಿಸ್ಮಿತನಾಗಿ ರಾಜನನ್ನು ಕುರಿತು "ಇವರುಗಳಲ್ಲಿ ನಿಜವಾಗಿ ಸ್ನೇಹ ತೋರಿದವರು ಯಾರು ? ಅದನ್ನು ನನಗೆ ಹೇಳು" ಎಂದಿತು. ಅದಕ್ಕೆ ರಾಜನು "ಸೇವಕನಿಗಾಗಿ ತನ್ನ ಪ್ರಾಣತ್ಯಾಗಮಾಡಿದ ರಾಜನೇ ನಿಜವಾದ ಸ್ನೇಹ ತೋರಿಸಿದವನು. ವೀರವರನಿಗೆ ಹೊನ್ನಿನಲ್ಲಿ ಪ್ರೀತಿ, ಅವನ ಪತ್ನಿಗೆ ಪ್ರತಿವ್ರತಾ ಧರ್ಮವಮೇಲೆ ಪ್ರೀತಿ, ಆ ಪುತ್ರನಿಗೆ ಪಿತೃವಿನಮೇಲೆ ಪ್ರೀತಿ ಆ ಹುಡುಗನ ತಂಗಿಗೆ ಬಂಧು ಪ್ರೀತಿ ಇವರುಗಳು ಯಾರಲ್ಲಿಯೂ ನಿಜವಾದ ಸ್ನೇಹವಿಲ್ಲ. ರೂಪಸೇನರಾಜನೊಬ್ಬನೇ ಸೇವಕನ ವಿಷಯದಲ್ಲಿ ನಿಜವಾದ ಸ್ನೇಹವನ್ನು ತೋರಿಸಿದನು. ಆದುದರಿಂದ ಅವನ ಸ್ನೇಹದೇ ಹೆಚ್ಚಿನದು" ಎಂದು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ದ್ವಿತೀಯ ಖಂಡದಲ್ಲಿ ಕಲಿಯುಗದ ಇತಿಹಾಸಸಮುಚ್ಚಯವೆಂಬ ಮೂರನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ಚತುರ್ಥೋಽಧ್ಯಾಯಃ

---

॥ ಸೂತ ಉವಾಚ ॥

ಇತಿ ಶ್ರುತ್ವಾ ಸ ವೈತಾಲೋ ರಾಜಾನಮಿದಮಬ್ರವೀತ್ ।
ಕಾಚಿದ್ಭೋಗವತೀ ನಾಮ್ನಾ ನಗರೀ ಪರಮಾದ್ಭುತಾ ॥ ೧ ॥

ರೂಪವರ್ಮಾ ಚ ನೃಪತಿಸ್ತತ್ರ ರಾಜ್ಯಂ ಕರೋತಿ ವೈ ।
ಚೂಡಾಮಣಿರಿತಿ ಖ್ಯಾತಃ ಶುಕೋ ಬುದ್ಧಿವಿಶಾರದಃ ॥ ೨ ॥

ತಸ್ಯ ಭೂಪಸ್ಯ ಗೇಹೇ ಚ ವಸನ್ತಂ ಶುಭಪಂಜರೇ ।
ಕದಾಚಿದ್ರೂಪವರ್ಮಾ ಚ ತ್ರಿಂಶದಬ್ದ ಉರೂರ್ಜಿತಃ ॥ ೩ ॥

---

## ನಾಲ್ಕನೆಯ ಅಧ್ಯಾಯ

೧. ಸೂತನು ಶೌನಕಾದಿಗಳನ್ನು ಕುರಿತು ಹೇಳುತ್ತಾನೆ—ಈ ಮಾತನ್ನು ಕೇಳಿದ ಬೇತಾಳವು ರಾಜನನ್ನು ಕುರಿತು "ಅಯ್ಯಾ ದೊರೆಯೇ! ಪರಮಾದ್ಭುತವಾದ ಭೋಗವತಿಯೆಂಬ ಪಟ್ಟಣವಿದ್ದಿತು. ಅಲ್ಲಿ ರೂಪವರ್ಮನೆಂಬ ಅರಸು ರಾಜ್ಯವಾಳುತ್ತಿದ್ದನು.

೨. ಆ ಅರಮನೆಯಲ್ಲಿ ಸೊಗಸಾದ ಪಂಜರದಲ್ಲಿ ಚೂಡಾಮಣಿ ಎಂಬ ಹೆಸರಿನಿಂದ ಪ್ರಖ್ಯಾತವೂ ಮಹಾಬುದ್ಧಿಶಾಲಿಯೂ ಆದ ಗಿಳಿಯೊಂದು ಇದ್ದಿತು.

೩-೪. ಮೂವತ್ತುವರ್ಷ ವಯಸ್ಸುಳ್ಳವನೂ ದೃಢಕಾಯನೂ ಆದ ಆ ರೂಪ

ಪಪ್ರಚ್ಛ ಮಮ ಯೋಗ್ಯಾ ವೈ ಶುಕ ಕಾಚಿದ್ವರಾಂಗನಾ ।
ಚೇದಾಸ್ತೇ ತರ್ಹಿ ಮೇ ಬ್ರೂಹಿ ಶ್ರುತ್ವಾ ತಂ ಚಾಬ್ರವೀಚ್ಛುಕಃ ॥ ೪ ॥

ಮಗಧೇಶ್ವರಭೂಪಸ್ಯ ಕನ್ಯಾ ಚಂದ್ರವತೀ ಶುಭಾ ।
ತವ ಯೋಗ್ಯಾ ಹಿ ಭೋ ರಾಜನ್ ಸಾಂಪ್ರತಂ ತಾಂ ಗೃಹಾಣ ವೈ ॥ ೫ ॥

ಇತಿ ಶ್ರುತ್ವಾ ಸ ನೃಪತಿರ್ಗಣೇಶಂ ದ್ವಿಜಸತ್ತಮಂ ।
ಪ್ರೇಷಯಿತ್ವಾ ದದೌ ದ್ರವ್ಯಂ ಯಥೋದ್ವಾಹ್ಯಾ ತಥಾ ಕುರು ॥ ೬ ॥

ಗಣೇಶೋಽಪಿ ಗತಸ್ತೂರ್ಣಂ ದೇಶೇ ಮಾಗಧಕೇ ಶುಭೇ ।
ಮಹಾದೇವಂ ಚ ಸಂಪೂಜ್ಯ ಚಕಾರ ಸ್ತವನಂ ಮುದಾ ॥ ೭ ॥

ನಮಃ ಶಿವಾಯ ಶಾಂತಾಯ ಸರ್ವಾಭೀಷ್ಟಪ್ರದಾಯಿನೇ ।
ಭವಾಯ ಶಂಕರಾಯೈವ ರುದ್ರಾಯ ಸತತಂ ನಮಃ ॥ ೮ ॥

---

ವರ್ಮನು ಒಂದುದಿನ "ಎಲೈ ಗಿಳಿಯೇ! ನನಗೆ ಅನುರೂಪಳಾದ ಶ್ರೇಷ್ಠ ಸ್ತ್ರೀರತ್ನವು ಎಲ್ಲಿಯಾದರೂ ಇದ್ದರೆ ತಿಳಸು" ಎಂದನು,

೫. ಆ ಮಾತನ್ನು ಕೇಳ ಗಿಳಿಯು "ಎಲೈ ರಾಜನೇ ! ಮಗಧರಾಜನ ಪುತ್ರಿಯೂ ಶುಭರೂಪಿಣಿಯೂ ಆದ ಚಂದ್ರವತಿಯೆಂಬ ಕನ್ಯೆಯು ನಿನಗೆ ಅನು ರೂಪೆಯಾಗಿರುವಳು, ನೀನು ಜಾಗ್ರತೆಯಾಗಿ ಆವಳನ್ನು ವರಿಸು" ಎಂದಿತು.

೬. ರಾಜನು ಈ ಮಾತನ್ನು ಕೇಳಿ ಗಣೇಶನೆಂಬ ಬ್ರಾಹ್ಮಣೋತ್ತಮನಿಗೆ ಬಹು ದ್ರವ್ಯವನ್ನು ಕೊಟ್ಟು "ಹೇಗಾದರೂ ಮಾಡಿ ಆಕೆಯು ನನ್ನನ್ನು ವರಿಸುವಂತೆ ಮಾಡು" ಎಂದು ಹೇಳಿದನು.

೭. ಆ ಗಣೇಶನು ಮಂಗಳಕರವಾದ ಮಗಧದೇಶಕ್ಕೆ ಜಾಗ್ರತೆಯಾಗಿ ಬಂದು ಅಲ್ಲಿ ದೇವಾಲಯಕ್ಕೆ ಹೋಗಿ ಈಶ್ವರನನ್ನು ದರ್ಶನಮಾಡಿ ಪೂಜಿಸಿ ಸಂತೋಷದಿಂದ ಈರೀತಿ ಸ್ತುತಿಸಿದನು.

೮. ಶಾಂತನೂ ಸರ್ವರ ಇಷ್ಟಾರ್ಥಗಳನ್ನು ಕರುಣಿಸುವನೂ ಆದ ಪರಮೇಶ್ವರಾ ! ನಿನಗೆ ನಮಸ್ಕರಿಸುತ್ತೇನೆ. ಓ ಭವನೇ ! ಶಂಕರನೇ ! ರುದ್ರನೇ ! ನಿನ್ನನ್ನು ಸರ್ವದಾ ವಂದಿಸುತ್ತೇನೆ.

ಮೃಡಾಯಾನಂದರೂಪಾಯ ಸರ್ವದುಃಖಹರಾಯ ಚ ॥ ೯ ॥

ಇತ್ಯುಕ್ತ್ತವತಿ ವಿಪ್ರೇ ಚ ತದಾ ಚಂದ್ರವತೀ ಶುಭಾ ।
ಕಾಮಾತುರಾಬ್ರವೀನ್ಮೇನಾಂ ನಾಮ್ನಾ ಮದನಮಂಜರೀಂ ॥ ೧೦ ॥

ಮಮ ಯೋಗ್ಯಶ್ಚ ಪುರುಷಃ ಕಶ್ಚಿದಸ್ತಿ ಮಹೀತಲೇ ।
ಸಾಹ ಭೋ ರೂಪವರ್ಮಾ ಚ ಯೋಗ್ಯೋ ಭೋಗಾಪುರೀಪತಿಃ ॥ ೧೧ ॥

ಇತಿ ಶ್ರುತ್ವಾ ತು ಸಾ ದೇವೀ ದುರ್ಗಾಂ ವಾಂಛಿತದಾಯಿನೀಂ ।
ತುಷ್ಟಾವ ಮನಸಾ ಸುಭ್ರೂರ್ಯಯಾ ಜಾತಮಿದಂ ಜಗತ್ ॥ ೧೨ ॥

ನಮೋನಮೋ ಜಗನ್ಮಾತರ್ಮಮ ಕಾರ್ಯಪ್ರದಾಯಿನಿ ।
ತ್ರಿಲಿಂಗಜನನೀ ತ್ವಂ ವೈ ವರ್ಣಮೂರ್ತಿಃ ಸನಾತನೀ ॥ ೧೩ ॥

---

೯. ಸಮಸ್ತ ದುಃಖಗಳನ್ನು ಪರಿಹಾರ ಮಾಡತಕ್ಕವನೂ, ಆನಂದ ಸ್ವರೂಪನೂ, ಪಾರ್ವತೀಪತಿಯೂ ಆದ ಮೃಡನೇ !. ನಿನ್ನ ಪಾದವನ್ನೇ ನಂಬಿದ್ದೇನೆ. ನಿನಗೆ ನಮಸ್ಕಾರ.

೧೦-೧೧. ಎಂಬದಾಗಿ ಶಿವ ದೇವಾಲಯದಲ್ಲಿ ಈ ಬ್ರಾಹ್ಮಣನು ಹೀಗೆ ಸ್ತುತಿಸುತ್ತಿರಲು ಅತ್ತ ಚಂದ್ರವತಿಯು ಕಾಮಾತುರತೆಯಿಂದ ಕೂಡಿ ತನ್ನ ಮೇನಾಹಕ್ಕಿ ಮದನಮಂಜರಿಯನ್ನು ಕುರಿತು " ಈ ಲೋಕದಲ್ಲಿ ನನಗೆ ಅನುರೂಪನೂ ಯೋಗ್ಯನೂ ಆದ ಪುರುಷನು ಇದ್ದಾನೆಯೇ " ಎಂದು ಕೇಳಿದಳು.

೧೨. ಆಗ ಮದನಮಂಜರಿಯು " ಭೋಗಪುರಾಧಿಪತಿಯಾದ ರೂಪವರ್ಮನು ನಿನಗೆ ಅನುರೂಪನಾದ ವರನಾಗಿದ್ದಾನೆ " ಎಂದು ಹೇಳಿತು. ಸುಂದರಿಯಾದ ಆ ರಾಜಪುತ್ರಿಯು ಇದನ್ನು ಕೇಳಿ ತನ್ನ ಇಷ್ಟಾರ್ಥವನ್ನು ಕೊಡತಕ್ಕ ದೇವಿಯಾದ ದುರ್ಗೆಯನ್ನು ಮನದಲ್ಲಿಯೇ ಈ ಪ್ರಕಾರ ಸ್ತುತಿಸಿದಳು.

೧೩. ಲೋಕಗಳೆಲ್ಲವನ್ನೂ ನಿರ್ಮಾಣಮಾಡತಕ್ಕವಳಾದ ಜಗನ್ಮಾತೇ ! ನನ್ನ ಮನಸ್ಸಿನ ಇಷ್ಟಾರ್ಥವನ್ನು ಕರುಣಿಸಿ ಸಲಹು. ಸದಾ ನಿನಗೆ ನಮಸ್ಕಾರ ಮಾಡುವೆನು.

ತ್ವಂ ಸ್ವಾಹಾ ತ್ವಂ ಸ್ವಧಾ ಸಂಧ್ಯಾ ನಮಸ್ತಸ್ಯೈ ನಮೋನಮಃ ।
ನೃಪತಿಂ ರೂಪವರ್ಮಾಣಂ ಮತ್ಪತಿಂ ಕುರು ಭೋಃ ಶಿವೇ ॥ ೧೪ ॥

ಇತಿ ಸ್ತುತ್ವಾ ಪ್ರಸನ್ನಾ ಭೂಜ್ಜಗದಂಬಾ ಜಗನ್ಮಯೀ ।
ಪಿತರಂ ಮಾಗಧೇಶಂ ಚ ಮೋಹಯಿತ್ವಾ ಚ ಮಾತರಮ್ ॥ ೧೫ ॥

ವಿವಾಹಂ ಕಾರಯಾಮಾಸ ಮಾಸಾಂತೇ ಸಿದ್ಧರೂಪಿಣೀ ।
ರೂಪವರ್ಮಾ ಚಂದ್ರವತೀ ಬುಭುಜಾತೇ ಪರಂ ಸುಖಂ ॥ ೧೬ ॥

ಏಕಸ್ಮಿನ್ ದಿವಸೇ ರಾಜನ್ಮೇನಾಂ ಮದನಮಂಜರೀಂ ।
ನೃಪಃ ಪ್ರಾಹ ವಿವಾಹಂ ತ್ವಂ ಸುಶುಕೇನ ಕುರುಷ್ವ ಭೋಃ ॥ ೧೭ ॥

ಮೇನಕಾ ಪ್ರಾಹ ಭೋ ರಾಜನ್ ವಿವಾಹಾಶ್ಚೇದ್ವಶೋ ಮತಾಃ ।
ಉತ್ತಮಾಧಮಮಧ್ಯಾಶ್ಚ ಪುರುಷಾಸ್ತ್ರಿವಿಧಾಃ ಸ್ಮೃತಾಃ ॥ ೧೮ ॥

---

೧೪. "ತ್ರಿಲಿಂಗ ಜನನಿಯೂ, ಪುರಾತನ ವರ್ಣಮೂರ್ತಿಯೂ ನೀನೇ ವಾಸ್ತವವಾಗಿ ಸ್ವಾಹೆಯೂ, ಸ್ವಧೆಯೂ, ಸಂಧ್ಯಾರೂಪೆಯೂ ನೀನೇ ಆಗಿರುವೆ. ಹೇ ಸರ್ವಮಂಗಳೇ! ರೂಪವರ್ಮನು ನನಗೆ ಪತಿಯಾಗುವ ಹಾಗೆ ಅನುಗ್ರಹಮಾಡು."

೧೫-೧೬, ಎಂಬದಾಗಿ ಸ್ತುತಿಸಲು ಜಗತ್ತನ್ನೆಲ್ಲಾ ಆವರಿಸಿದವಳೂ, ಲೋಕಗಳಿಗೆಲ್ಲಾ ತಾಯಿಯೂ ಆದ ದುರ್ಗೆಯು ಆ ತಿಂಗಳ ಕೊನೆಯಲ್ಲಿ ಸಿದ್ಧರೂಪಿಣಿಯಾಗಿ ಬಂದು ಆಕೆಯ ತಂದೆ ತಾಯಿಗಳನ್ನು ಮೋಹ (ಮೂರ್ಛೆ) ಗೊಳಿಸಿ, ಆ ಬಾಲಿಗೆ-ರೂಪವರ್ಮನೊಡನೆ ವಿವಾಹಲಗ್ನವನ್ನು ನೆರವೇರಿಸಿದಳು. ಅನಂತರರೂಪವರ್ಮನೂ ಚಂದ್ರವತಿಯೂ ಪರಮಸುಖವನ್ನು ಅನುಭವಿಸಿದರು.

೧೭, ಒಂದುದಿನ ರೂಪವರ್ಮರಾಜನು ಮೇನಾಹಕ್ಕಿ ಮದನಮಂಜರಿಯನ್ನು "ನೀನು ನನ್ನಲ್ಲಿರುವ ಈ ಗಿಣಿಯನ್ನು, ವಿವಾಹಮಾಡಿಕೊಂಡು ಸುಖವಾಗಿರಬಹುದಲ್ಲಾ? ಎಂದನು.

೧೮-೧೯. ಅದನ್ನು ಕೇಳಿ ಮೇನಾಹಕ್ಕಿಯು "ಪುರುಷರಲ್ಲಿ ಉತ್ತಮರು ಮಧ್ಯಮರು ಅಧಮರು ಎಂದು ಮೂರು ವಿಧವಿದೆ. ಸ್ತ್ರೀಯರಲ್ಲಿಯೂ ಹಾಗೆಯೇ ಮೂರು ವಿಧದವರಿದ್ದಾರೆ. ಹೆಂಗಸು ಯಾವ ವರ್ಗಕ್ಕೆ ಸೇರಿದವಳೋ ಆ ಸ್ತ್ರೀಗೆ ಯಥಾ

ತಥೈವ ತ್ರಿವಿಧಾ ನಾರೀ ಯಥಾ ಯೋಗ್ಯೋ ವರೋ ಭವೇತ್ ।
ಉತ್ತಮಾ ಯಾ ಭವೇನ್ನಾರೀ ನ ಯೋಗ್ಯಾ ಚಾಧಮಾಯ ಸಾ ॥ ೧೯ ॥

ಶೃಣು ತತ್ಕಾರಣಂ ರಾಜನ್ ಮಯಾ ದೃಷ್ಟಂ ಯಥಾಽಭವತ್ ।
ಇಲಾಪುರೇ ವಸತ್ಯೇಕೋ ವೈಶ್ಯೋ ಲಕ್ಷಪತಿರ್ಧನೀ ॥ ೨೦ ॥

ಅನಪತ್ಯೋ ದೇವಯಾಜೀ ತಸ್ಯ ಪತ್ನೀ ಪತಿವ್ರತಾ ।
ಬಹುಯತ್ನೇನ ತನಯಸ್ತಸ್ಯ ಜಾತೋ ಮಹಾಧಮಃ ॥ ೨೧ ॥

ದ್ಯೂತಕ್ರೀಡಾಪರೋ ನಿತ್ಯಂ ಸುರಾಪಾನೇ ರತಸ್ಸದಾ ।
ವೇಶ್ಯಾಗಾಮೀ ಮಹಾಧೂರ್ತೋ ನಿತ್ಯಂ ಮಾಂಸಾಶನಃ ಖಲಃ ॥ ೨೨ ॥

ತಸ್ಯ ಧರ್ಮಂ ಚ ಪಿತರೌ ಸಮಾಲೋಕ್ಯ ವನಂ ಗತೌ ।
ನರಂ ನಾರಾಯಣಂ ಧ್ಯಾತ್ವಾ ಪರಮಂ ಪದಮಾಪತುಃ ॥ ೨೩ ॥

---

ಯೋಗ್ಯವಾಗಿ ಅದೇ ವರ್ಗದ ಪುರುಷನು ದೊರೆಯಬೇಕು ವಿವಾಹವೆಂದರೆ ಹೀಗಿರಬೇಕು. ಉತ್ತಮ ಸ್ತ್ರೀಗೆ ಉತ್ತಮ ವರ್ಗದವನು ಪತಿಯಾಗಿ ದೊರೆಯದಿದ್ದರೆ ಆಗುವ ಪರಿಣಾಮವನ್ನು ನಾನು ಎಷ್ಟೋ ನೋಡಿದ್ದೇನೆ.

೨೦-೨೧. ಹೇಳುವೆನು ಕೇಳು ! ಇಳಾಪುರದಲ್ಲಿ ಲಕ್ಷಪತಿ ಎಂಬ ಧನಿಕನಾದ ವೈಶ್ಯನೊಬ್ಬನಿದ್ದನು. ಪತಿವ್ರತಾ ಶಿರೋಮಣಿಯಾದ ದೇವಯಾಜಿ ಎಂಬುವಳು ಆತನಿಗೆ ಪತ್ನಿಯಾಗಿದ್ದಳು. ಅವರಿಗೆ ಮಕ್ಕಳೇ ಇರಲಿಲ್ಲ. ವ್ರತಾರಾಧನಾದಿ ಬಹು ಪ್ರಯತ್ನಗಳಿಂದ ಕೊನೆಗೆ ಆಕೆಗೆ ಮಹಾಅಧಮವರ್ಗದ ಮಗನೊಬ್ಬನು ಜನಿಸಿದನು. ಅವನಿಗೆ ಮದಪಾಲನೆಂದು ಹೆಸರಿಟ್ಟರು.

೨೨. ಅವನು ಪ್ರಾಪ್ತವಯಸ್ಕನಾಗಿ ಜೂಜಾಡುವುದು, ಮದ್ಯಪಾನ, ವೇಶ್ಯಾ ಸ್ತ್ರೀಗಮನ ಮುಂತಾದ ದುರ್ವ್ಯಸನಗಳಲ್ಲಿ ಆಸಕ್ತನಾಗಿ ಮಹಾಮೋಸಗಾರನೂ ನಿತ್ಯವೂ ಮಾಂಸಭಕ್ಷಕನಾದ ನೀಚನೂ ಆಗಿದ್ದನು.

೨೩. ಅವನ ಈ ದುರಾಚಾರಗಳನ್ನು ನೋಡಿ ಬೇಸತ್ತು ಆವನ ತಾಯಿ ತಂದೆಗಳು ಕಾಡಿಗೆ ಹೋಗಿ ಅಲ್ಲಿ ನರನಾರಾಯಣರನ್ನು ಧ್ಯಾನಿಸುತ್ತಿದ್ದು ಪರಮ ಪದವನ್ನು ಹೊಂದಿದರು.

**ಮದಪಾಲಸ್ತು ತನಯಃ ಕೃತ್ವಾ ಸರ್ವಧನವ್ಯಯಂ ।**
**ಅನ್ಯದೇಶೇ ಚ ವೃತ್ತ್ಯರ್ಥಂ ಜಗಾಮ ಧನವರ್ಜಿತಃ ॥ ೨೪ ॥**

**ಪ್ರಾಪ್ತಶ್ಚಂದ್ರಪುರೇ ರಮ್ಯೇ ಯತ್ರ ಹೇಮಪತಿಃ ಸ್ಥಿತಃ ।**
**ವೃತ್ತಾಂತಂ ಕಥಯಾಮಾಸ ವೈಶ್ಯಂ ಹೇಮಪತಿಂ ಹಿ ಸಃ ॥ ೨೫ ॥**

**ದೇವಯಾಜೀಸುತೋಽಹಂ ವೈ ಸ್ವಲ್ಪಂ ವೈ ಧನಮಾಹೃತಂ ।**
**ದೇಶಾಂತರೇ ವಿಕ್ರಯಾರ್ಥೇ ಸಿಂಧುಮಾರ್ಗೇಣ ಪ್ರಾಪ್ತವಾನ್ ॥ ೨೬ ॥**

**ಮಹಾವಾಯುಪ್ರಭಾವೇನ ದ್ರವ್ಯಂ ತನ್ಮಗ್ನಮಂಭಸಿ ।**
**ತಲ್ಲಜ್ಜಯಾ ನ ಯಾಸ್ಯೇಽಹಂ ಪಿತರಂ ಪ್ರತಿ ಮಾರಿಷ ॥ ೨೭ ॥**

**ಇತಿ ಶ್ರುತ್ವಾ ಹೇಮಪತಿಃ ಸ್ವಪತ್ನೀಂ ಕಾಮಮಂಜರೀಂ ।**
**ವಚಃ ಪ್ರಾಹ ಪ್ರಸನ್ನಾತ್ಮಾ ಸಂಯೋಗೋ ವಿಧಿನಾ ಕೃತಃ ॥ ೨೮ ॥**

---

೨೪. ಇತ್ತ ಆವರ ಪುತ್ರನಾದ ಮದಪಾಲನು ಸಮಸ್ತ ದ್ರವ್ಯವನ್ನೂ ದುರ್ವ್ಯಯಮಾಡಿ ನಿರ್ಧನನಾಗಿ ಜೀವನಾರ್ಥವಾಗಿ ದೇಶಾಂತರಕ್ಕೆ ಹೋದನು.

೨೫-೨೭. ಚಂದ್ರಪುರವೆಂದು ಹೆಸರುಳ್ಳ ಸುಂದರವಾದ ಪಟ್ಟಣವೊಂದನ್ನು ಸೇರಿ ಅಲ್ಲಿ ಸ್ವಜನನಾದ ಹೇಮಪತಿಯೆಂಬ ವೈಶ್ಯನ ಸಮೀಪಕ್ಕೆ ಹೋಗಿ "ನಾನು ದೇವಯಾಜಿಯ ಮಗನು; ಊರಿನಿಂದ ಬರುವಾಗ ಸ್ವಲ್ಪ ದ್ರವ್ಯವನ್ನು ತಂದಿದ್ದೆನು. ವ್ಯಾಪಾರಕ್ಕಾಗಿ ದೇಶಾಂತರಕ್ಕೆ ಹೋಗಿದ್ದಾಗ ನಮ್ಮ ಹಡಗು ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿ ಮುಳುಗಿದುದರಿಂದ ನನ್ನ ದ್ರವ್ಯವೆಲ್ಲಾ ನೀರಪಾಲಾಯಿತು. ಎಲೈ ಮಾರಿಷನೇ ! ಈ ಕಾರಣದಿಂದ ನಾನು ತಂದೆಯ ಬಳಿಗೆ ಹೋಗಲು ನಾಚಿಕೆಪಟ್ಟು ನಿನ್ನಲ್ಲಿಗೆ ಬಂದೆನು" ಎಂದು ತನ್ನ ವೃತ್ತಾಂತವನ್ನೆಲ್ಲಾ ಕಲ್ಪನೆಮಾಡಿ ಹೇಳಿದನು.

೨೮-೨೯. ಹೇಮಪತಿಯು ಅವನ ವೃತ್ತಾಂತವನ್ನು ಕೇಳಿ ಹರ್ಷಚಿತ್ತವುಳ್ಳವನಾಗಿ ತನ್ನ ಹೆಂಡತಿಯಾದ ಕಾಮಮಂಜರಿಯನ್ನು ಕುರಿತು "ನಮ್ಮ ಅದೃಷ್ಟವಶದಿಂದ ಈ ಮನುಷ್ಯನು ದೊರೆತಿದ್ದಾನೆ. ನೀನು ಸಮ್ಮತಿಪಡುವುದಾದರೆ ಮಗಳಾದ ಚಂದ್ರಕಾಂತಿಯನ್ನು ಈ ವರನಿಗೆ ಕೊಟ್ಟುಬಿಡುವೆನು" ಎಂದು ಹೇಳಿದನು. ರಾಜನೇ ಕೇಳು! ಆ ದಂಪತಿಗಳು ಕಲೆತು ತಮ್ಮಲ್ಲಿ ಆಲೋಚನೆಮಾಡಿಕೊಂಡು,

ಚಂದ್ರಕಾಂತಿಂ ಸುತಾಂ ದಾಸ್ಯೇ ತದ್ವರಾಯ ತ್ವದಾಜ್ಞಯಾ ।
ಸಂಮಂತ್ರ್ಯ ದಂಪತೀ ರಾಜನ್ ದದೌ ಕನ್ಯಾಂ ವಿಧಾನತಃ ॥ ೨೮ ॥

ಸ್ವಗೃಹೇ ವಾಸಯಾಮಾಸ ಮದಪಾಲಂ ಸುತಾಪತಿಂ ।
ಮಾಸಮೇಕಮುಷಿತ್ವಾ ತಂ ಶ್ವಶುರಂ ಪ್ರಾಹ ನಮ್ರಧೀಃ ॥ ೩೦ ॥

ಆಜ್ಞಾಂ ದೇಹಿ ಧನಾಧ್ಯಕ್ಷ ಸ್ವಗೇಹಂ ಯಾಮಿ ಮಾ ಚಿರಂ ।
ಇತಿ ಶ್ರುತ್ವಾ ಹೇಮಪತಿಃ ಸ್ವಸುತಾಂ ಸ್ವರ್ಣಭೂಷಿತಾಂ ॥ ೩೧ ॥

ಚಂದ್ರಕಾಂತಿಂ ಸದಾಸೀಂ ಚ ತಸ್ಮೈ ದತ್ವಾ ಗೃಹಂ ಯಯೌ ।
ನರಾನ್ ವಿಸೃಜ್ಯ ದುಷ್ಟಾತ್ಮಾ ಶಿಬಿಕಾವಾಹಕಾನ್ ನೃಪ ॥ ೩೨ ॥

ದಾಸೀಂ ಹತ್ವಾ ತದಾ ಪತ್ನೀಂ ವಿಸೃಜ್ಯ ಧನವರ್ಜಿತಾಂ ।
ಏಕಾಕೀ ಪ್ರಾಪ್ತವಾನ್ ಗೇಹಂ ಮದಪಾಲೋ ಮಹಾಧಮಃ ॥ ೩೩ ॥

---

ಹಾಗೆಯೇ ಮಾಡಲು ನಿಶ್ಚಯಿಸಿ ಶುಭದಿನದಲ್ಲಿ ವಿಧಿಪ್ರಕಾರ ಆತನಿಗೆ ಕನ್ಯಾದಾನ ಮಾಡಿದರು.

೩೦-೩೧. ಆನಂತರ ಅಳಿಯನಾದ ಮದಪಾಲನನ್ನು ತಮ್ಮ ಮನೆಯಲ್ಲಿಯೇ ಇಂಸಿಕೊಂಡರು. ಹೀಗೆ ಆ ಮಾವನ ಮನೆಯಲ್ಲಿ ಒಂದು ತಿಂಗಳಕಾಲ ಇದ್ದು ಆನಂತರ ಮದಪಾಲನು ವಿಧೇಯತೆಯಿಂದ ಕೂಡಿ ಮಾವನನ್ನು ಕುರಿತು " ಧನಾಧ್ಯಕ್ಷರಾದ ಮಾವನವರೇ, ನಮ್ಮ ಊರಿಗೆ ಹೋಗುವುದಕ್ಕೆ ಅನುಜ್ಞೆಕೊಡಿ, ಇನ್ನು ಹೆಚ್ಚುದಿನ ನಿಲ್ಲಲು ಆಗುವುದಿಲ್ಲ !' ಎಂದು ಹೇಳಿದನು. ಹೇಮಪತಿಯು ಈ ಮಾತನ್ನು ಕೇಳಿ ತನ್ನ ಮಗಳಿಗೆ ಹೇರಳವಾಗಿ ಒಡವೆ ವಸ್ತುಗಳನ್ನು ಇಟ್ಟು ಅಲಂಕರಿಸಿ ದಾಸೀ ಜನಗಳನ್ನು ಸಂಗಡ ಹೋಗಲು ಏರ್ಪಡಿಸಿ ಮಗಳನ್ನು ಅಳಿಯನನ್ನು ಸಾಗಗಳುಹಿಸಿ ತನ್ನ ಮನೆಗೆ ಬಂದನು.

೩೨-೩೩. ಸ್ವಭಾವತಃ ದುಷ್ಟನಾದ ಆ ಮದಪಾಲನು ಮೇನೆಯನ್ನು ಹೊತ್ತಿದ್ದ ಜನರನ್ನು ಬಿಟ್ಟು ಓಡಿಸಿ, ದಾಸಿಯನ್ನು ಕೊಂದುಹಾಕಿ, ಪತ್ನಿಯ ಹತ್ತಿರ ವಿದ್ದ ಅಭರಣಗಳು ದ್ರವ್ಯ ಎಲ್ಲವನ್ನು ಸುಲಿದುಕೊಂಡು ಧನಹೀನೆಯಾದ ಪತ್ನಿಯನ್ನು ಅಲ್ಲೇ ಬಿಟ್ಟು ಆ ಅಪಾರವಾದ ದ್ರವ್ಯದೊಡನೆ ತಾನೊಬ್ಬನೇ ತನ್ನೂರಿಗೆ ಬಂದನು.

**ವರ್ಷಾಂತರೇ ಚ ತತ್ಸ್ವರ್ಣಂ ವ್ಯಯಂ ಕೃತ್ವಾ ಕುಮಾರ್ಗಕೇ ।**
**ಬುಭುಕ್ಷಿತಃ ಪುನಃ ಶೋಕಂ ಚಕಾರ ಬಹುಧಾ ನೃಪ ॥ ೪೪ ॥**

**ಪುನಶ್ಚ ಶ್ವಶುರಸ್ಯೈವ ಗೃಹೇ ಸಂಪ್ರಾಪ್ತವಾನ್ ಖಲಃ ।**
**ಚಂದ್ರಕಾಂತಿಸ್ತು ತಂ ದೃಷ್ಟ್ವಾ ಸ್ವಪತಿಂ ಪ್ರಾಹ ನಮ್ರಧೀಃ ॥ ೩೫ ॥**

**ಮಯಾ ನಿವೇದಿತಂ ಪಿತ್ರೇ ಧನಂ ಚೋರೈಶ್ಚ ಲುಂಠಿತಂ ।**
**ಅತಸ್ತ್ವಂ ತ್ಯಜ ಸಂತಾಪಂ ಚಿರಂ ವಸ ಗೃಹೇ ಮಮ ॥ ೩೬ ॥**

**ತಥೇತ್ಯುಕ್ತ್ವಾ ಮಹಾಧೂರ್ತ ಉವಾಸ ಕತಿಚಿದ್ದಿನಂ ।**
**ಜ್ಞಾತ್ವಾ ವಿಬೋಹಿತಾಂ ಪತ್ನೀಮರ್ಧರಾತ್ರೇ ತಮೋವೃತೇ ॥ ೩೭ ॥**

**ಹತ್ವಾ ತಾಂ ಸ ಯಯೌ ಗೇಹಂ ಗೃಹೀತ್ವಾ ಬಹುಭೂಷಣಂ ।**
**ಅಯೋಗ್ಯೋಯಮತೋ ರಾಜನ್ ವಿವಾಹಃ ಶುಕಮೇನಯೋಃ ॥ ೩೮ ॥**

---

೩೪. ರಾಜನೇ! ಕೇಳು, ಊರುಸೇರಿದ ಒಂದು ವರ್ಷದೊಳಗೇ ಆ ಆಭರಣಗಳು ದ್ರವ್ಯ ಎಲ್ಲವನ್ನೂ ದುರ್ಮಾರ್ಗಗಳಲ್ಲಿ ವ್ಯಯಮಾಡಿ ಮತ್ತೆ ನಿರ್ಧನನಾಗಿ ತಿನ್ನುವುದಕ್ಕಿಲ್ಲದೆ ಬಹು ಕ್ಲೇಶವನ್ನು ಅನುಭವಿಸಿದನು.

೩೫-೩೬. ಆ ಮೇಲೆ ಆ ನೀಚನು ಮತ್ತೆ ಮಾವನಮನೆಗೆ ಬಂದನು. ಹೀಗೆ ಬಂದ ಪತಿಯನ್ನು ನೋಡಿ ಚಂದ್ರಕಾಂತಿಯು ವಿಧೇಯತೆಯಿಂದ ಕೂಡಿ "ನಾನು ನನ್ನ ತಂದೆಯು ಕೈಲಿ ದಾರಿಯಲ್ಲಿ ಕಳ್ಳರು ಬಂದು ನಮ್ಮ ಒಡವೆವಸ್ತುವನ್ನೆಲ್ಲಾ ದೋಚಿಕೊಂಡರು ಎಂದು ಹೇಳಿದ್ದೇನೆ. ಆದುದರಿಂದ ನೀವು ನಿರಾತಂಕವಾಗಿ ಚಿರಕಾಲ ನಮ್ಮ ಮನೆಯಲ್ಲಿ ಇರಿ" ಎಂದು ಹೇಳಿದಳು.

೩೭-೩೮. ಬಹುಮೋಸಗಾರನಾದ ಅವನು 'ಹಾಗೆಯೇ ಆಗಲಿ' ಎಂದು ಕೆಲವು ದಿನ ಗಂಭೀರವಾಗಿದ್ದನು. ಒಂದುದಿನ ರಾತ್ರಿ ತನ್ನ ಹೆಂಡತಿಗೆ ಗಾಢನಿದ್ದೆ ಹತ್ತಿರುವ ಸಮಯವನ್ನು ನೋಡಿ ಆಕೆಯನ್ನು ಕೊಂದುಹಾಕಿ ಅವಳ ಆಭರಣಗಳನ್ನೆಲ್ಲಾ ತೆಗೆದುಕೊಂಡು ಕಗ್ಗತ್ತಲೆ ಕವಿದ ಆ ಅರ್ಧರಾತ್ರಿಯಲ್ಲೇ ಅಲ್ಲಿಂದ ಹೊರಬಿದ್ದು ತನ್ನ ಊರಿಗೆ ಬಂದನು. ಎಲೈ ರಾಜನೇ! ಆ ದಂಪತಿಗಳು ಒಂದೇವರ್ಗದವರಾಗಿಲ್ಲದ

**ಇತಿ ಶ್ರುತ್ವಾ ಶುಕಃ ಪ್ರಾಹ ಭೂಪತಿಂ ಕರುಣಾನಿಧಿಂ ।**
**ವಿವಾಹಂ ನ ಕರಿಷ್ಯಾಮಿ ನಾರ್ಯಾ ಚಾಧಮಯಾ ಸಹ ॥ ೩೯ ॥**

**ಅಧಮಾ ಮೇನಕಾ ನಾರೀ ಶ್ಯಾಮಾಂಗಾ ಚ ಕುರೂಪಿಣೀ ।**
**ಉತ್ತಮೋಽಹಂ ಶುಕೋ ರಾಜನ್ ಪುರುಷಶ್ಚ ಹರೇತ್ತನುಂ ॥ ೪೦ ॥**

**ಶೃಣು ತತ್ಕಾರಣಂ ಭೂಪ ಮಯಾ ದೃಷ್ಟಂ ಮಹೋತ್ತಮಂ ।**
**ನಗರೇ ಕಾಂಚನಪುರೇ ವಣಿಕ್ಛಂಖಪತಿಃ ಶ್ರುತಃ ॥ ೪೧ ॥**

**ತಸ್ಯ ಪುತ್ರಸ್ತು ಮೇಧಾವೀ ಸಿಂಧುಗುಪ್ತೋ ಗುಣೀ ಧನೀ ।**
**ಪ್ರಭಾವತೀ ಪ್ರಿಯಾ ತಸ್ಯ ಶ್ರೀದತ್ತಸ್ತತ್ಸುತಃ ಸ್ಮೃತಃ ॥ ೪೨ ॥**

**ವಿವಾಹಮಕರೋತ್ತಸ್ಯ ಜಯಶ್ರೀಪತ್ತನೇ ಶುಭೇ ।**
**ಸೋಮದತ್ತಸ್ಯ ಸುತಯಾ ಜಯಲಕ್ಷ್ಮ್ಯಾ ಸಮನ್ವಿತಂ ॥ ೪೩ ॥**

---

ಕಾರಣದಿಂದ ಹೀಗಾಯಿತು. ಆದುದರಿಂದ ಮೇನಾಹಕ್ಕಿ ಗಿಣಿ ಇವು ಒಂದೇ ವರ್ಗದ ವಲ್ಲವಾಗಿ ಅವಕ್ಕೆ ವಿವಾಹಮಾಡುವುದು ತರವಲ್ಲ" ಎಂದು ಹೇಳಿತು.

೪೦. ಇದನ್ನು ಕೇಳಿ ಗಿಣಿಯು ರಾಜನನ್ನು ಕುರಿತು "ಅಯ್ಯಾ ದಯಾಳುವೇ! ಹೆಣ್ಣು ಮೇನಾಹಕ್ಕಿ ಕಪ್ಪುಬಣ್ಣ ಮತ್ತು ಕುರೂಪುಳ್ಳದ್ದು, ಗಿಣಿಗಳಲ್ಲಿ ಉತ್ತಮವಾದ ಹಸುರು ಬಣ್ಣವುಳ್ಳ ಗಂಡುಗಿಳಿ ನಾನು. ಆದುದರಿಂದ ಅಧಮವರ್ಗದ ಮೇನಾಹಕ್ಕಿ ಯನ್ನು ನಾನು ಮದುವೆಯಾಗುವುದಿಲ್ಲ.

೪೧. "ಈ ವಿಚಾರದಲ್ಲಿ ನಾನು ಕಂಡ ಮಹೋತ್ತಮವಾದ ಒಂದು ನಿದರ್ಶನ ಹೇಳುವೆನು ಕೇಳು. ಕಾಂಚನಪುರವೆಂಬ ಪಟ್ಟಣದಲ್ಲಿ ಶಂಖಪತಿಯೆಂಬ ವೈಶ್ಯ ನಿದ್ದನು."

೪೨. ಧನಿಕನಾದ ಅವನಿಗೆ ಮಹಾಬುದ್ಧಿಶಾಲಿಯೂ ಗುಣವಂತನೂ ಆದ ಸಿಂಧುಗುಪ್ತನೆಂಬ ಮಗನೂ, ಪ್ರಭಾವತಿಯೆಂಬ ಸೊಸೆಯೂ, ಶ್ರೀದತ್ತನೆಂಬ ಮೊಮ್ಮಗನೂ ಇದ್ದರು.

೪೩. ಮಂಗಳಕರವಾದ ಜಯಶ್ರೀನಗರದಲ್ಲಿದ್ದ ಸೋಮದತ್ತನ ಮಗಳು ಜಯಶ್ರೀ ಎಂಬವಳನ್ನು ಆ ಶ್ರೀದತ್ತನಿಗೆ ಕೊಟ್ಟು ಲಗ್ನವಾಗಿದ್ದಿತು.

ಶ್ರೀದತ್ತಸ್ತು ಗತೋ ದೇಶಂ ವಾಣಿಜ್ಯಾರ್ಥಂ ಕುರುಸ್ಥಲಂ ।
ಆಯಾತಿ ದ್ವಾದಶಾಬ್ದೇ ತು ಸಧನೋ ಗೇಹಮಾಗತಃ ॥ ೪೪ ॥

ಜಯಲಕ್ಷ್ಮೀಸ್ತು ಕಾಮೇನ ಪೀಡಿತಾ ಪಿತೃಮಂದಿರೇ ।
ಅಮಾತ್ಯತನಯೇನೈವ ಹೋಮದತ್ತೇನ ಮೋಹಿತಾ ॥ ೪೫ ॥

ದೂತೀಮಾರ್ಗೇಣ ತಂ ಪ್ರಾಪ್ಯ ವ್ಯಯಂ ಕೃತ್ವಾ ಧನಂ ಬಹು ।
ರಮಯಾಮಾಸ ಸಾ ನಾರೀ ತೇನ ಸಾರ್ಧಂ ಮಹಾಧಮಾ ॥ ೪೬ ॥

ತ್ರಿಮಾಸಾಂತೇ ಚ ತತ್ಸ್ವಾಮೀ ಶ್ರೀದತ್ತಃ ಶ್ವಶುರಾಲಯೇ ।
ಸಂಪ್ರಾಪ್ತಃ ಸಾ ತು ತಂ ದೃಷ್ಟ್ವಾ ಮಹದ್ದುಃಖಮುಪಾಯಯೌ ॥ ೪೭ ॥

ಅರ್ಧರಾತ್ರೇ ತು ತನ್ಮಾತ್ರಾ ಪ್ರೇಷಿತಾ ಸ್ವಪತಿಂ ಪ್ರತಿ ।
ಜಯಲಕ್ಷ್ಮೀಶ್ಚ ಸಂಪ್ರಾಪ್ತಾ ಕ್ರೋಧೇನ ಸ್ಫುರಿತಾಧರಾ ॥ ೪೮ ॥

---

೪೪. ಆ ಶ್ರೀದತ್ತನು ವ್ಯಾಪಾರಕ್ಕಾಗಿ ಕುರುಸ್ಥಲವೆಂಬ ದೇಶಕ್ಕೆಹೋದನು. ಅಲ್ಲಿ ವ್ಯಾಪಾರಮಾಡಿ ಬೇಕಾದಷ್ಟು ದ್ರವ್ಯವನ್ನು ಸಂಪಾದಿಸಿಕೊಂಡು ಹನ್ನೆರಡು ವರ್ಷದನಂತರ ಊರಿಗೆ ಬಂದನು.

೪೫. ಇತ್ತ ಜಯಲಕ್ಷ್ಮಿಯು ತಂದೆಯ ಮನೆಯಲ್ಲಿರುತ್ತಾ ಕಾಮಾತುರೆಯಾಗಿ ಮಂತ್ರಿ ಕುಮಾರನಾದ ಹೋಮದತ್ತನೆಂಬವನನ್ನು ಕಂಡು ಮೋಹಿಸಿದಳು.

೪೬. ಮಹಾಅಧಮಳಾದ ಆ ಸ್ತ್ರೀಯು ಬಹು ಹಣವನ್ನು ವೆಚ್ಚಮಾಡಿ ದೂತಿಯೊಬ್ಬಳನ್ನು ಅವನ ಬಳಿಗೆ ಕಳುಹಿಸಿ ಅವನನ್ನು ಬರಮಾಡಿಕೊಂಡು ಅವನೊಡನೆ ಭೋಗಿಸಿದಳು.

೪೭. ಇಲ್ಲಿ ಹೀಗೆ ಮೂರು ತಿಂಗಳು ಕಳೆಯಿತು. ಅಷ್ಟರಲ್ಲಿ ಅವಳ ಪತಿಯಾದ ಶ್ರೀದತ್ತನು ಮಾವನಮನೆಗೆ ಬಂದನು. ತನ್ನ ಪತಿಯು ಅನಿರೀಕ್ಷಿತವಾಗಿ ಬಂದುದನ್ನು ನೋಡಿ ಆಕೆ ಮಹಾವ್ಯಥೆಗೊಂಡಳು.

೪೮. ಅವಳು ಪತಿಯಬಳಿಗೆ ಹೋಗದೆ ಇರುವುದನ್ನು ಕಂಡು ಅವಳ ತಾಯಿಯು ಅರ್ಧರಾತ್ರಿಯಲ್ಲಿ ಆಕೆಯನ್ನು ಬಲಾತ್ಕರಿಸಿ ಪತಿಯ ಬಳಿಗೆ ಹೋಗೆಂದು ಕಳುಹಿಸಿದಳು. ಜಯಲಕ್ಷ್ಮಿಯು ಕೋಪದಿಂದ ತುಟಿಗಳು ನಡುಗುತ್ತಿರಲು ಪತಿಯ ಬಳಿಗೆ ಬಂದಳು.

ಬಹುಮಾನೇನ ಸ್ವಪತಿಸ್ನೇಹಂ ಕೃತ್ವಾಲಯಂ ಯಯೌ ।
ತದಾ ತು ಕುಲಟಾ ಸಾ ಚ ಗತಾ ದೂತೀಗೃಹಂ ಪ್ರತಿ ॥ ೪೯ ॥

ಶೂನ್ಯಾಲಯೇ ಹೋಮದತ್ತೋ ದಂಶಿತೋ ಭುಜಗೇನ ವೈ ।
ಸುಷ್ವಾಪ ಮರಣಂ ಪ್ರಾಪ್ಯ ತದಾ ಬಾಲಾ ಸಮಾಗತಾ ॥ ೫೦ ॥

ವೇಗೇನ ರಮಯಾಮಾಸ ತಂ ಜಾರಂ ವಿಷಮೋಹಿತಂ ।
ಪಿಪ್ಪಲಸ್ಥಃ ಪಿಶಾಚಶ್ಚ ದೃಷ್ಟ್ವಾ ತಾಂ ಜಾರಿಣೀಂ ಶುಭಾಂ ॥ ೫೧ ॥

ಶವದೇಹಂ ಚ ಸಂಪ್ರಾಪ್ಯ ರಮಣೀಂ ತಾಮರೀರಮತ್ ।
ಖನಿತ್ವಾ ದಶನೈರ್ನಾಸಾಂ ಪಿಪ್ಪಲೋಪರಿ ಸೋಽಗಮತ್ ॥ ೫೨ ॥

ಕಫಲ್ಲೋನಾಮ ಚೌರಸ್ತು ದೃಷ್ಟ್ವಾ ತತ್ಕಾರಣಂ ತದಾ ।
ಕಾಮಿನ್ಯಾ ಅನುಗೋ ಭೂತ್ವಾ ಮಂದಿರಂ ತತ್ಪ್ರವಿಷ್ಟವಾನ್ ॥ ೫೩ ॥

---

೪೯. ತನ್ನ ಪತಿಯಲ್ಲಿ ಬಹುಮಾನ ಪುರಸ್ಸರವಾಗಿ ಸ್ನೇಹವನ್ನು ತೋರ್ಪಡಿಸಿ ಹಿಂದಿರುಗಿ ಹೊರಟಳು. ವ್ಯಭಿಚಾರಾಸಕ್ತಳಾದ ಆಕೆಯು ಆ ಅರ್ಧರಾತ್ರಿಯಲ್ಲೇ ತನ್ನ ದಾಸಿಯ ಮನೆಗೆ ಹೋದಳು.

೫೦. ಇತ್ತ ಹೋಮದತ್ತನು ತಮ್ಮ ದುರ್ವ್ಯಾಪಾರಕ್ಕೆ ಅನುಕೂಲವಾಗಿ ನಿರ್ಜನವಾದ ಮನೆಯೊಂದರಲ್ಲಿ ವಾಸಿಸುತ್ತಿರಲು ಆ ರಾತ್ರಿ ಹಾವು ಕಡಿದು ಮೃತನಾಗಿ ಬಿದ್ದಿದ್ದನು. ಆ ಜಯಲಕ್ಷ್ಮಿಯು ಆ ಸಮರಾತ್ರಿಯಲ್ಲಿ ಅಲ್ಲಿಗೆ ಬಂದಳು.

೫೧-೫೨. ಪ್ರಿಯನು ವಿಷದಿಂದ ಮೂರ್ಛಿತನಾಗಿ ಬಿದ್ದಿರುವುದನ್ನರಿಯದೆ ಆ ಜಾರನ ದೇಹವನ್ನಾಲಿಂಗಿಸಿ ವೇಗವಾಗಿ ರಮಿಸಿದಳು. ಆಗ ಪಾರ್ಶ್ವದಲ್ಲಿ ಅಶ್ವತ್ಥವೃಕ್ಷದ ಮೇಲಿದ್ದ ಒಂದು ಪಿಶಾಚಿಯು ಸುಮಂಗಲಿಯಾದ ಈ ಜಾರ ಸ್ತ್ರೀಯ ಕಾರ್ಯವನ್ನು ನೋಡಿ, ಆ ಶವದಶರೀರದಲ್ಲಿ ತಾನು ಪ್ರವೇಶಿಸಿ ಆ ರಮಣಿಯೊಡನೆ ಭೋಗಪಟ್ಟಿತು. ಭೋಗಿಸಿದಮೇಲೆ ಆ ಪಿಶಾಚಿಯು ತನ್ನ ಹಲ್ಲುಗಳಿಂದ ಆವಳ ಮೂಗನ್ನು ಕಚ್ಚಿ ಕಿತ್ತುಕೊಂಡು ಪುನಃ ಅರಳಿಯ ಮರದ ಮೇಲಕ್ಕೆ ಹೋಗಿಸೇರಿತು.

೫೩. ಆ ಸಮಯದಲ್ಲಿ ಕಫಲ್ಲನೆಂಬ ಕಳ್ಳನು ಇವಳಿಗೆ ಹೀಗಾದುದರ ಕಾರಣವನ್ನು ಸಾಕ್ಷಾತ್ತಾಗಿ ಕಂಡು ಕಾಮುಕಿಯಾದ ಅವಳ ಬೆಂಬತ್ತಿ ಹೋಗಿ ಅವಳಿಗೆ ಕಾಣಿಸದಂತೆಯೇ ಇದ್ದು ಅವಳೊಡನೆ ಆವಳ ಪತಿಗೃಹವನ್ನು ಪ್ರವೇಶಿಸಿದನು.

**ತದಾ ತು ಜಯಲಕ್ಷ್ಮೀಶ್ಚ ಸ್ವಪತಿಂ ಪ್ರಾಪ್ಯ ದುರ್ಭಗಾ ।**
**ಚಕ್ರೇ ಸಾ ರೋದನಂ ಗಾಢಂ ಸರ್ವೇ ಲೋಕಾಃ ಪ್ರತಸ್ಥಿರೇ ॥ ೫೪ ॥**

**ನಾಸಾಹೀನಾಂ ಸುತಾಂ ದೃಷ್ಟ್ವಾ ಸೋಮದತ್ತೋ ಮಹಾಧನಃ ।**
**ಬದ್ಧ್ವಾ ಜಾಮಾತರಂ ಶೀಘ್ರಂ ರಾಜಾಂತಿಕಮುಪಾಯಯೌ ॥ ೫೫ ॥**

**ನೃಪಾಜ್ಞಯಾ ರಾಜದೂತಾಸ್ತಮುದ್ಬಂಧನಮಾದಧುಃ ।**
**ತದಾ ಕಫಲ್ಲಃ ಸಂಪ್ರಾಪ್ಯ ಸರ್ವಂ ರಾಜ್ಞೇ ನ್ಯವೇದಯತ್ ॥ ೫೬ ॥**

**ಮತ್ವಾ ತಸ್ಯ ವಚಃ ಸತ್ಯಂ ಜಯಲಕ್ಷ್ಮೀಂ ಮಹಾಘನಾಂ ।**
**ರಾಸಭೋಪರಿ ಸಂಸ್ಥಾಪ್ಯ ಕೃತ್ವಾ ದುರ್ಗತಿರೂಪಿಣೀಂ ॥ ೫೭ ॥**

**ನಗರಾತ್ಪ್ರೇಷಯಾಮಾಸ ವನಂ ಶಾರ್ದೂಲಸೇವಿತಂ ।**
**ಅತಸ್ತ್ವಂ ಶೃಣು ಭೂಪಾಲ ಮೇನಾ ಮದ್ಯೋಗ್ಯಿಕಾ ನ ಹಿ ॥ ೫೮ ॥**

---

೫೪-೫೬. ಹೀಗೆ ವಿಕಾರರೂಪಿನಿಂದ ಜಯಲಕ್ಷ್ಮಿಯು ಪತಿಯ ಬಳಿಗೆ ಬಂದು ದೊಡ್ಡ ಧ್ವನಿಯಿಂದ ಅಳಲು ತೊಡಗಿದಳು, ಇದನ್ನು ಕೇಳಿ ಸುತ್ತಿನ ಜನರೆಲ್ಲಾ ಓಡಿ ಬಂದರು. ಜಯಲಕ್ಷ್ಮಿಯ ತಂದೆಯಾದ ಸೋಮದತ್ತನು ತನ್ನ ಮಗಳಿಗೆ ಮೂಗು ಹೋಗಿರುವದನ್ನು ನೋಡಿ ಅಳಿಯನೇ ಹೀಗೆ ಮಾಡಿರಬೇಕೆಂದು ಭಾವಿಸಿ ಅಳಿಯನನ್ನು ಬಂಧಿಸಿ ಶೀಘ್ರವಾಗಿ ರಾಜನ ಸಮ್ಮುಖಕ್ಕೆ ಎಳೆದುತಂದನು. ರಾಜನ ಆಜ್ಞೆಯಂತೆ ರಾಜದೂತರು ಅವನನ್ನು ಬಲವಾಗಿ ಬಂಧನದಲ್ಲಿಟ್ಟರು.

೫೭. ಆ ವೇಳೆಗೆ ಕಳ್ಳನಾದ ಕಫಲ್ಲನು ರಾಜನಬಳಿಗೆ ಬಂದು ನಡೆದುದೆಲ್ಲ ವನ್ನೂ ವಿಜ್ಞಾಪಿಸಿದನು. ರಾಜನು ಅವನ ಮಾತು ಸತ್ಯವಾಗಿರುವುದನ್ನು ಅರಿತು, ಜಯಲಕ್ಷ್ಮಿಯು ಮಹಾಪಾಪಿಷ್ಠೆಯೆಂದು ನಿರ್ಧರಿಸಿ, ನೋಡುವುದಕ್ಕೆ ಅಸಹ್ಯವಾಗಿ ನರಕಸ್ವರೂಪಿಣಿಯಾದ ಅವಳನ್ನು ಕತ್ತೆಯಮೇಲೆ ಕೂರಿಸಿ,

೫೮. ತನ್ನ ಪಟ್ಟಣದಿಂದ ಹೊರಡಿ ಹುಲಿ ಮುಂತಾದ ದುಷ್ಟಮೃಗಭರಿತವಾದ ಘೋರಾರಣ್ಯದಲ್ಲಿ ಬಿಡಿಸಿದನು. ಆದುದರಿಂದ ಎಲೈ ರಾಜನೇ ! ಕೇಳು ಮೈನಾ ಹಕ್ಕಿಯು ನನ್ನೊಡನೆ ವಿವಾಹವಾಗುವುದಕ್ಕೆ ಯೋಗ್ಯವಾದ ಪಕ್ಷಿಯಲ್ಲ, ಎಂಬದಾಗಿ ಗಿಳಿಯು ಹೇಳಿತು.

೫೯. ಅನಂತರ ಬೇತಾಳವು ನಮ್ರತೆಯಿಂದ ಕೂಡಿ ರಾಜನನ್ನು ಕುರಿತು "ಈ ಸಂದರ್ಭದಲ್ಲಿ ಆ ಹೆಂಗಸು ಮಹಾಪಾಪಿಯೋ, ಇಲ್ಲವೇ ಗಂಡಸು ಮಹಾಪಾಪಿ ಯೋ ಎಂಬುದನ್ನು ನೀನು ನನಗೆ ಹೇಳು" ಎಂದು ಕೇಳಿತು.

ಇತ್ಯುಕ್ತ್ವಾ ಸ ತು ವೈತಾಲೋ ವಿಕ್ರಮಂ ಪ್ರಾಹ ನಮ್ರಧೀಃ ।
ನಾರೀ ಪಾಪಾಧಿಕಾ ವಾಥ ಪುರುಷಸ್ತದ್ವದಸ್ವ ಮೇ ॥ ೫೯ ॥

॥ ವಿಕ್ರಮ ಉವಾಚ ॥

ಬ್ರಹ್ಮಣೋಽಗುಣರೂಪಸ್ಯ ಮಾಯಾವರ್ಣಸ್ವರೂಪಿಣೀ ।
ತಮೋ ನಪುಂಸಕಂ ಜ್ಞೇಯಂ ತ್ರಿಲಿಂಗೈಕಂ ತದವ್ಯಯಂ ॥ ೬೦ ॥

ಅವ್ಯಯಂ ಬ್ರಹ್ಮಣೋ ಧಾಮ ಮಾಯಾ ಲಿಂಗಸ್ವರೂಪಿಣೀ ।
ತಯಾ ಜಾತಮಿದಂ ವಿಶ್ವಂ ತದಂಬಾಯೈ ನಮೋನಮಃ ॥ ೬೧ ॥

ಕ್ಲೀಬಾ ಸ್ತ್ರೀ ಸರ್ವದಾ ಶ್ರೇಷ್ಠಾ ಸ್ತ್ರಿಯಾಸ್ತು ಪುರುಷಸ್ತಥಾ ।
ಆದ್ಯಾಧಿಕಶ್ಚ ಪುರುಷೋ ನಾರೀ ಕರ್ಮಾಧಿಕಾ ಮತಾ ॥ ೬೨ ॥

---

೬೦ ಆದಕ್ಕೆ ವಿಕ್ರಮರಾಜನು ಹೇಳಿದನು. ಅಗುಣರೂಪನು ಎಂದರೆ ನಿರ್ಗುಣನೂ ನಿರಾಕಾರನೂ ಆದ ಬ್ರಹ್ಮನಿಗೆ ವರ್ಣ ಆಕಾರ ಇವು ಇವೆ ಎಂಬದಾಗಿ ನಮಗೆ ಅಭಿಪ್ರಾಯ ಬರುವುದೇ ಮಾಯೆಯು. ಮೂರುಲಿಂಗಗಳಲ್ಲಿಯೂ ಒಂದೇ ಸಮನಾದ ರೂಪಹೊಂದಿರುವುದು ಅವ್ಯಯ. ಅಂತೆಯೇ ತಮಸ್ಸು (ಮಾಯಾ) ನಪುಂಸಕಲಿಂಗ; ಇದು ಮೂರು ಲಿಂಗದಲ್ಲೂ ಒಂದೇ ರೂಪವನ್ನು ಹೊಂದುವುದು ಮತ್ತು ಅವ್ಯಯವು .

೬೧. ಬ್ರಹ್ಮನ ಸ್ಥಾನವು ನಾಶರಹಿತವಾದುದು ಎಂದರೆ ಬ್ರಹ್ಮನು ನಿರ್ವಿಕಾರನು, ನಿತ್ಯನು. ಎಂದು ಭಾವ, ಮಾಯೆಯು ಲಿಂಗಸ್ವರೂಪವನ್ನು ಧರಿಸಿರುವುದು (ಎಂದರೆ ಉಪಾಧಿವಶದಿಂದ ಆಕಾರವುಳ್ಳಂತೆ ಕಾಣಿಸುವುದು) ಆ ಮಾಯೆಯಿಂದಲೇ ಈ ಸಕಲ ಪ್ರಪಂಚವೂ ಉಂಟಾಗಿರುವುದು. ಆದುದರಿಂದ ಆ ಮಾಯಾಸ್ವರೂಪಿಣಿಯಾದ ಜಗದಂಬೆಗೆ ನಮಸ್ಕಾರ.

೬೨-೬೩. ನಪುಂಸಕನಿಗಿಂತ ಸ್ತ್ರೀಯೂ ಸ್ತ್ರೀಗಿಂತ ಪುರುಷನೂ ಶ್ರೇಷ್ಠರಾದವರು. ಪುರುಷನು, ಆಧಿಗಳಿಂದ ನಿರ್ಮುಕ್ತನು, ಸ್ತ್ರೀಯು ಕರ್ಮಭೂಯಿಷ್ಠಳು, ನಪುಂಸಕನು ಅಜ್ಞಾನಭೂಯಿಷ್ಠನು ಎಂದು ಪ್ರಾಚೀನರಾದ ಜ್ಞಾನಿಗಳು ಹೇಳಿದ್ದಾರೆ.

**ಕ್ಲೀಬಮಜ್ಞಾನಮಧಿಕಂ ಕಥಿತಂ ಪೂರ್ವಕೋವಿದೈಃ ।**
**ಕರ್ಮೈವ ಬಂಧನಂ ಪುಂಸಾಂ ಜ್ಞಾನಂ ನಿರ್ಬಂಧನಂ ಸ್ಮೃತಂ ॥ ೬೩ ॥**

**ಅತಃ ಪಾಪಾಧಿಕಾ ನಾರೀ ಪುರುಷೋ ಹೀನಕಿಲ್ಬಿಷಃ । ॥ ೬೪ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ ಖಂಡೇ ಚತುರ್ಥೋಽಧ್ಯಾಯಃ.**



---

೬೪. "ಮನುಷ್ಯರಿಗೆ ಕರ್ಮದಿಂದ ಬಂಧನವೂ ಜ್ಞಾನದಿಂದ ಬಂಧನರಾಹಿತ್ಯ (ಮೋಕ್ಷ) ವೂ ಆಗುವುದು ಎಂದು ಹೇಳಿದೆ ಆದುದರಿಂದ ಸ್ತ್ರೀಯು ಕರ್ಮವಶ ದಿಂದ ಪಾಪಾಧಿಕಳು; ಪುರುಷನು ಪಾಪನಿರ್ಮುಕ್ತನು; ಎನಿಸಿಕೊಳ್ಳುವರು" ಎಂಬ ದಾಗಿ ವಿಕ್ರಮನು ಬೇತಾಳನನ್ನು ಕುರಿತು ಹೇಳಿದನು

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ
ಖಂಡದಲ್ಲಿ ಕಲಿಯುಗದ ಇತಿಹಾಸವೆಂಬ ನಾಲ್ಕನೆಯ
ಅಧ್ಯಾಯ ಮುಗಿದುದು



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ಪಂಚಮೋಽಧ್ಯಾಯಃ

॥ ಸೂತ ಉವಾಚ ॥

ಭೃಗುವರ್ಯ ಮಹಾಭಾಗ ಶ್ರುತ್ವಾ ವೈತಾಲ ಏವ ಸಃ ।
ಪ್ರಸನ್ನಾತ್ಮಾ ವಚಃ ಪ್ರಾಹ ಭೂಪತಿಂ ಜ್ಞಾನಸಂಪದಂ ॥ ೧ ॥

ಉಜ್ಜಯಿನ್ಯಾಂ ಮಹಾರಾಜ ಮಹಾಬಲ ಇತಿ ಶ್ರುತಃ ।
ಚಂದ್ರವಂಶೀ ನೃಪಃ ಪ್ರಾಜ್ಞೋ ವೇದಶಾಸ್ತ್ರವಿಶಾರದಃ ॥ ೨ ॥

ತಸ್ಯ ದೂತೋ ಹರೇರ್ದಾಸಃ ಸ್ವಾಮಿಕಾರ್ಯಕರಃ ಸದಾ ।
ಭಕ್ತಿಮಾಲಾ ಪ್ರಿಯಾ ತಸ್ಯ ಸಾಧುಸೇವಾಪರಾಯಣಾ ॥ ೩ ॥

---

## ಐದನೆಯ ಅಧ್ಯಾಯ

೧. ಸೂತನು ಶೌನಕಾದಿಗಳನ್ನು ಕುರಿತು ಹೇಳುತ್ತಾನೆ—ಭೃಗುವಂಶೋತ್ಪನ್ನನೆನಿಸಿ ಮಹಾಪುರುಷನಾದ ಬೇತಾಳನು ರಾಜನಮಾತನ್ನು ಕೇಳಿ ಸಂತೋಷಪಟ್ಟು ಬುದ್ಧಿಶಾಲಿಯಾದ ವಿಕ್ರಮನನ್ನು ಪುನಃ ಇಂತೆಂದನು.

೨. ಅಯ್ಯಾ ಮಹಾರಾಜನೇ ! ಚಂದ್ರವಂಶದಲ್ಲಿ ಜನಿಸಿದ ಪ್ರಾಜ್ಞನಾದ ಮಹಾಬಲನೆಂಬ ಅರಸು ಉಜ್ಜಯಿನಿಯಲ್ಲಿ ರಾಜ್ಯವಾಳುತ್ತಿದ್ದನು.

೩. ಅವನ ಬಳಿ ಸ್ವಾಮಿಕಾರ್ಯತತ್ಪರನಾದ ಹರಿದಾಸ ಎಂಬ ಸೇವಕನಿದ್ದನು. ಸತ್ಪುರುಷರ ಸೇವೆಯಲ್ಲಿ ಆಸಕ್ತೆಯಾದ ಭಕ್ತಿಮಾಲೆ ಯೆಂಬವಳು ಆತನ ಪತ್ನಿಯಾಗಿದ್ದಳು

**ತಸ್ಯಾಂ ಜಾತಾ ರೂಪವತೀ ಕನ್ಯಾ ಕಮಲಲೋಚನಾ ।**
**ಮಹಾದೇವೀತಿ ವಿಖ್ಯಾತಾ ಸರ್ವವಿದ್ಯಾವಿಶಾರದಾ ॥ ೪ ॥**

**ಹರಿದಾಸಂ ಚ ಸಾ ಪ್ರಾಹ ಶೃಣು ತಾತ ವಚೋ ಮಮ ।**
**ಮತ್ತೋಽಧಿಕೋ ನರೋ ಯೋ ವೈ ತಸ್ಮೈ ಮಾಂ ತು ದದಸ್ವ ಭೋಃ ॥**

**ತಥೇತ್ಯುಕ್ತ್ವಾ ಪಿತಾ ರಾಜನ್ ರಾಜ್ಞಾಹೂತೋ ಗತಃ ಸಭಾಂ ।**
**ನತ್ವಾ ತಂ ನೃಪತಿಃ ಪ್ರಾಹ ಹರಿದಾಸ ಶೃಣುಷ್ವ ಭೋಃ ॥ ೬ ॥**

**ತ್ರೈಲಂಗಾಧಿಪತಿಂ ಗಚ್ಛ ಹರಿಶ್ಚಂದ್ರಂ ಮಹೀಪತಿಂ ।**
**ತಸ್ಯ ಕ್ಷೇಮಂ ತಥಾ ಜ್ಞಾತ್ವಾ ಮಾಂ ನಿವೇದಯ ಮಾ ಚಿರಂ ॥ ೭ ॥**

**ಇತಿ ಶ್ರುತ್ವಾ ದ್ವಿಜಃ ಪ್ರಾಗಾದ್ಧರಿಶ್ಚಂದ್ರಂ ಮಹಾಮತಿಂ ।**
**ಕುಶಲಂ ವರ್ಣಯಾಮಾಸ ಮಹಾಬಲನೃಪಸ್ಯ ವೈ ॥ ೮ ॥**

---

೪. ಅವಳಿಗೆ ಕಮಲದಂತೆ ಕಣ್ಣುಳ್ಳ ಸುಂದರಿಯೂ ಸಕಲವಿದ್ಯಾಪ್ರವೀಣೆಯೂ ಆದ ಮಹಾದೇವಿಯೆಂಬ ಮಗಳಿದ್ದಳು.

೫. ಒಂದುದಿನ ಅವಳು ತಂದೆಯಾದ ಹರಿದಾಸನನ್ನು "ಕುರಿತು ಅಪ್ಪಾ! ನನಗಿಂತ ಶ್ರೇಷ್ಠನಾದ ಪುರುಷನಿಗೇ ನನ್ನನ್ನು ಕೊಟ್ಟು ವಿವಾಹ ಮಾಡು" ಎಂದು ಕೇಳಿಕೊಂಡಳು.

೬. ತಂದೆಯಾದ ಹರಿದಾಸನು 'ಹಾಗೆಯೇ ಆಗಲಿ' ಎಂದು ಹೇಳಿದನು. ಅಷ್ಟರಲ್ಲಿ ರಾಜನು ಆತನಿಗೆ ಹೇಳಿಕಳುಹಿಸಲಾಗಿ ಕೂಡಲೆ ರಾಜಸಭೆಗೆ ಹೋದನು. ಅಲ್ಲಿ ರಾಜನು ಅವನನ್ನು ಆದರಿಸಿ ಹರಿದಾಸನನ್ನು ಕುರಿತು 'ಕೇಳಯ್ಯಾ ಹರಿದಾಸ.'

೭. "ತ್ರೈಲಂಗ ದೇಶಾಧಿಪತಿಯಾದ ಹರಿಶ್ಚಂದ್ರನ ಸಮೀಪಕ್ಕೆ ಹೋಗಿ ಅವನ ಕುಶಲವಾರ್ತೆಯನ್ನು ತಿಳಿದು ಜಾಗ್ರತೆಯಲ್ಲಿ ಬಂದು ನನಗೆ ತಿಳಿಸು ತಡಮಾಡಬೇಡ" ಎಂದು ಹೇಳಿದನು.

೮. ಸದ್ಬ್ರಾಹ್ಮಣನಾದ ಹರಿದಾಸನು ಈ ಮಾತನ್ನು ಕೇಳಿ, ಕೂಡಲೆ ಹೊರಟು ಮಹಾಬುದ್ಧಿಶಾಲಿಯಾದ ಹರಿಶ್ಚಂದ್ರರಾಜನ ಬಳಿಗೆ ಹೋಗಿ ತಾನು ಮಹಾಬಲರಾಜನ ಕಡೆಯವನೆಂದು ವಿಜ್ಞಾಪಿಸಿ ಮಹಾಬಲರಾಜನ ಕ್ಷೇಮಸಮಾಚಾರವನ್ನು ತಿಳಿಸಿದನು.

ಶ್ರುತ್ವಾ ಪ್ರಸನ್ನಹೃದಯೋ ಹರಿಶ್ಚಂದ್ರೋ ಮಹೀಪತಿಃ ।
ಶ್ವಶುರಸ್ತಸ್ಯ ನೃಪತೇಃ ಸ ಭೂಯೋ ಹರ್ಷಮಾಗತಃ ॥ ೯ ॥

ಹರಿದಾಸಂ ಸ ಪಪ್ರಚ್ಛ ಕಲೇರಾಗಮನಂ ಕದಾ ।
ಇತ್ಯುಕ್ತಃ ಸ ತು ತಂ ಪ್ರಾಹ ನ್ಯೂಹಶ್ಚ ಭವಿತಾಧಿಕಂ ॥ ೧೦ ॥

ಯದಾ ರಾಜ್ಯಂ ಕೃತಂ ತೇನ ಕಲೇರಾಗಮನಂ ತದಾ ।
ಬ್ರಹ್ಮಣೋಽಸ್ಯ ಮುಖಾಜ್ಜಾತನೋಂಕಾರಂ ಸತ್ಯಪೂಜಿತಂ ॥ ೧೧ ॥

ದ್ವಿತೀಯಾಸ್ಯಾಚ್ಚ ವಿವಿಧಾ ಭಾಷಾ ಲೋಕವಿಮೋಹಿನೀ ।
ಜಾತಾ ಕಲೇರ್ಹಿತಾರ್ಥಾಯ ಯಮಲೋಕಹಿತೈಷಿಣೀ ॥ ೧೨ ॥

ಯದಾ ಧರ್ಮಂ ಚ ವೇದೋಕ್ತಂ ವಿಪರೀತಂ ಹಿ ದೃಶ್ಯತೇ ।
ಕಲಿರಾಜ್ಯಂ ತದಾ ಜ್ಞೇಯಂ ಮ್ಲೇಚ್ಛಾ ಯಸ್ಯ ಪ್ರಿಯಾಃ ಸ್ಮೃತಾಃ ॥೧೩॥

---

೯-೧೦. ಮಹಾಬಲನ ಮಾವನಾದ ಹರಿಶ್ಚಂದ್ರರಾಜನು ಈ ಕುಶಲವಾರ್ತೆಯನ್ನು ಕೇಳಿ ಪ್ರಸನ್ನವಾದ ಮನಸ್ಸುಳ್ಳವನಾದನು. ಬಳಿಕ ಹರಿದಾಸನನ್ನು ಕುರಿತು "ಅಯ್ಯಾ ವಿಪ್ರೋತ್ತಮ ! ಕಲಿಯ ಆಗಮನವು ಯಾವಾಗ ಎಂದು ಕೇಳಿದನು."

೧೧. ಆಗ ಹರಿದಾಸನು ರಾಜನನ್ನು ಕುರಿತು "ಪ್ರಭೂ ! ಮುಂದೆ ನ್ಯೂಹ ಎಂಬವನು ಹುಟ್ಟುವನು. ಅವನ ರಾಜ್ಯಭಾರ ಪ್ರಾರಂಭವಾಗುತ್ತಲೆ ಕಲಿಯುಗವು ಆರಂಭವಾಗುವುದು.

೧೨. ಬ್ರಹ್ಮನ ಒಂದನೆಯ ಮುಖದಿಂದ ಸತ್ಯಸ್ವರೂಪವಾದ ಓಂಕಾರವು ಉತ್ಪನ್ನವಾಯಿತು. ಎರಡನೆಯ ಮುಖದಿಂದ ಕಲಿಯ ಹಿತಕ್ಕಾಗಿಯೂ ಯಮಲೋಕ ತುಂಬುವುದಕ್ಕಾಗಿಯೂ ಲೋಕಮೋಹಕವಾದ ಅನೇಕ ಭಾಷೆಗಳು ಹುಟ್ಟಿದುವು.

೧೩. ವೇದೋಕ್ತಧರ್ಮವನ್ನು ವಿರುದ್ಧ ದೃಷ್ಟಿಯಿಂದ ತಿರಸ್ಕಾರವಾಗಿ ಕಾಣತೊಡಗಿದಾಗ ಕಲಿಯ ಆಧಿಪತ್ಯವು ಮೊದಲಾಗಿ ಮ್ಲೇಂಚ್ಛರ, ಧರ್ಮವಿರುದ್ಧವಾದ ನಡವಳಿಕೆಗಳು ಕಾಣಿಸಿಕೊಳ್ಳುವುವು ಎಂದು ಹೇಳಿದೆ.

ಕಲಿನ್ಯಾಧರ್ಮಮಿತ್ರೇಣ ಸರ್ವೇ ದೇವಾ ನಿರಾಕೃತಾಃ ।
ಪಾಪಸ್ಯೈವ ಮೃಷಾ ಭಾರ್ಯಾ ದುಃಖಂ ತತ್ತನಯಂ ಸ್ಮೃತಂ ॥ ೧೪ ॥

ದುರ್ಗತಿಸ್ತಸ್ಯ ಚಾರ್ಧಾಂಗೀ ಗೇಹೇ ಗೇಹೇ ತದಾ ಭವೇತ್ ।
ಕ್ರೋಧವಶ್ಯಾ ನೃಪಾಃ ಸರ್ವೇ ಬ್ರಾಹ್ಮಣಾಃ ಕಾಮಕಿಂಕರಾಃ ॥ ೧೫ ॥

ಲೋಭವಶ್ಯಾಸ್ತು ಧನಿನೋ ಮಹತ್ತ್ವಂ ಶೂದ್ರಕಾ ಗತಾಃ ।
ನಾರ್ಯೋ ಲಜ್ಜಾವಿಹೀನಾಶ್ಚ ಕಿಂಕರಾಃ ಸ್ವಾಮಿಘಾತಕಾಃ ॥ ೧೬ ॥

ನಿಷ್ಫಲಾ ತು ಮಹೀ ಜಾತಾ ಕಲೌ ಪ್ರಾಪ್ತೇ ಹಿ ದೃಶ್ಯತೇ ।
ಯೇ ಹರೇಃ ಶರಣಂ ಪ್ರಾಪ್ತಾಸ್ತೇ ಸರ್ವೇ ಮುದಿತಾಃ ಕಲೌ ॥ ೧೭ ॥

ಇತಿ ಶ್ರುತ್ವಾ ಹರಿಶ್ಚಂದ್ರೋ ದತ್ವಾ ತಸ್ಮೈ ಸುದಕ್ಷಿಣಾಂ ।
ಸ್ವಗೇಹಂ ಪ್ರಾಪ್ತವಾನ್ ರಾಜಾ ವಿಪ್ರಸ್ತು ಶಿಬಿರಂ ಯಯೌ ॥ ೧೮ ॥

---

೧೪. ಕೇವಲ ಅಧರ್ಮಾಚರಣೆಯನ್ನೇ ಮುಖ್ಯವಾಗಿ ಅನುಸರಿಸುವ ಕಲಿಯು ದೇವತೆಗಳೆಲ್ಲರನ್ನೂ ತಿರಸ್ಕಾರದಿಂದ ಕಾಣುವನು. ಕಲಿಯ ಪತ್ನಿಯಾದ ಮೃಷೆಯು ಕೇವಲ ಪಾಪಸಂಘಟನೆಗಾಗಿಯೇ ಸರ್ವದಾ ಸಿದ್ಧಳಾಗಿರುವಳು.

೧೫. ದುಃಖವೇ ಇವರ ಮಗ, ದುರ್ಗತಿಯು ಆ ಮಗನ ಹೆಂಡತಿ, ಇವರಿಬ್ಬರೂ ಪ್ರತಿಯೊಂದು ಸಂಸಾರದಲ್ಲಿಯೂ ನೆಲಸುವರು. ರಾಜರೆಲ್ಲರೂ ಕ್ರೋಧಾನ್ವಿತರಾಗುವರು, ವಿಪ್ರರು ಕಾಮಾತುರರಾಗುವರು.

೧೬. ಹಣಗಾರರು ಲೋಭಿಗಳಾಗುವರು, ಶೂದ್ರರು ಮಹತ್ವವನ್ನು ಪಡೆಯುವರು, ಸ್ತ್ರೀಯರು ನಿರ್ಲಜ್ಜರಾಗಿ ವರ್ತಿಸುವರು, ಸೇವಕರು ಸ್ವಾಮಿಘಾತುಕರಾಗುವರು.

೧೭. ಕಲಿಪ್ರಾರಂಭವಾಗುತ್ತಲೆ ಭೂಮಿಯು ಫಲರಹಿತವಾಗಿ ಗೋಚರವಾಗುವುದು. ಸಾಮಾನ್ಯ ಪರಿಸ್ಥಿತಿ ಹೀಗಾದಾಗ್ಗೂ ಹರಿಯನ್ನು ಮರೆಹೊಕ್ಕವರೆಲ್ಲ ಕಲಿಗಾಲದಲ್ಲೂ ಸಂತೋಷ ಹೊಂದುವರು ಎಂಬದಾಗಿ ನಿರೂಪಿಸಿದನು.

೧೮. ಈ ಮಾತನ್ನು ಕೇಳಿ ಹರಿಶ್ಚಂದ್ರರಾಜನು ಆ ಹರಿದಾಸನಿಗೆ ತುಂಬಾ ಧನಕನಕಾದಿಗಳಿಂದ ಸನ್ಮಾನಮಾಡಿ ಸಭೆಯನ್ನು ಮುಗಿಸಿ ಎದ್ದು ಒಳಕ್ಕೆ ಹೋದನು. ಹರಿದಾಸನೂ ತನ್ನ ಬಿಡಾರಕ್ಕೆ ಹೋದನು.

ಏಕಸ್ಮಿನ್ನಂತರೇ ತತ್ರ ಬ್ರಾಹ್ಮಣೋ ಬುದ್ಧಿಕೋವಿದಃ ।
ಸ್ವವಿದ್ಯಾಂ ದರ್ಶಯಾಮಾಸ ಹರಿದಾಸಾಯ ಧೀಮತೇ ॥ ೧೯ ॥

ವಿಮಾನಂ ಶೀಘ್ರಗಂ ನಾಮ ದೇವ್ಯಾ ದತ್ತಂ ಮಹೋತ್ತಮಂ ।
ಮಂತ್ರಜಾಪಾತ್ಸಮುದ್ಭೂತಂ ಕಾಮದಂ ವಿಸ್ಮಯಪ್ರದಂ ॥ ೨೦ ॥

ತಸ್ಮಿನ್ ದದರ್ಶ ಕನ್ಯಾರ್ಥೀ ತದಾ ವಿಪ್ರೋ ವಿಮೋಹಿತಃ ।
ವರಿತ್ವಾ ತಂ ಸ್ವಕನ್ಯಾರ್ಥಂ ತತಃ ಸ್ವಪುರಮಾಗತಃ ॥ ೨೧ ॥

ಹರಿದಾಸಸ್ಯ ತನಯೋ ಮುಕುಂದೋ ನಾಮ ಕೋವಿದಃ ।
ಪಠಿತ್ವಾ ಸ್ವಗುರುಂ ಪ್ರಾಹ ವೃಣೀಷ್ವ ಗುರುದಕ್ಷಿಣಾಂ ॥ ೨೨ ॥

ಗುರುರಾಹ ಚ ಶಿಷ್ಯಂ ತಂ ಶೃಣು ವಾಚಂ ಮುಕುಂದ ಮೇ ।
ದಾಪಯಸ್ವ ಸ್ವಭಗಿನೀಂ ಮತ್ಪುತ್ರಾಯ ಚ ಧೀಮತೇ ॥ ೨೩ ॥

---

೧೯. ಅನಂತರ ಈ ಸಂದರ್ಭದಲ್ಲಿ ಬುದ್ಧಿಕೋವಿದನೆಂಬ ಆ ಊರಿನ ಬ್ರಾಹ್ಮಣನು ಪ್ರಾಜ್ಞನಾದ ಹರಿದಾಸನ ಸಮ್ಮುಖದಲ್ಲಿ ಈ ಮುಂದೆ ನಿರೂಪಿಸುವ ಪ್ರಕಾರವಾಗಿ ತನ್ನ ವಿದ್ಯಾಪ್ರಭಾವವನ್ನು ಪ್ರದರ್ಶಿಸಿದನು.

೨೦-೨೧. ಆತನಿಗೆ ಹರಿದಾಸನ ಮಗಳನ್ನು ಮದುವೆಯಾಗಬೇಕೆಂಬ ಅಪೇಕ್ಷೆಯಿದ್ದಿತು. ಆದುದರಿಂದ ಆ ಬುದ್ಧಿಕೋವಿದನು ತಾನು ಮಂತ್ರಜಪದಿಂದ ದೇವಿಯನ್ನು ಪ್ರಸನ್ನಗೊಳಿಸಿ ಅವಳ ಅನುಗ್ರಹದಿಂದ ಪಡೆದುದೂ, ಇಷ್ಟಾರ್ಥವನ್ನು ಕೊಡತಕ್ಕುದೂ, ಆಶ್ಚರ್ಯಕರವಾದುದೂ ಆದ ಶೀಘ್ರಗ ಎಂಬ ಹೆಸರುಳ್ಳ ವಿಮಾನವನ್ನು ಇವನಿಗೆ ತೋರಿಸಿದನು ಆಗ ಹರಿದಾಸನು ಮೆಚ್ಚಿಕೊಂಡು ಇವನು ತನ್ನ ಮಗಳಿಗೆ ಅನುರೂಪನೆಂದು ನಿಶ್ಚಯಿಸಿಕೊಂಡು ತನ್ನ ಪಟ್ಟಣಕ್ಕೆ ಹಿಂದಿರುಗಿದನು.

೨೨. ಹರಿದಾಸನಿಗೆ ಬುದ್ಧಿಶಾಲಿಯಾದ ಮುಕುಂದನೆಂಬ ಮಗನು ಇದ್ದನು. ವ್ಯಾಸಂಗಕ್ಕಾಗಿ ಹೋದ ಅವನು ತನ್ನ ಗುರುವಿನ ಬಳಿ ಅಧ್ಯಯನವನ್ನು ಮುಗಿಸಿ ಅನಂತರ ಗುರುವನ್ನು ಕುರಿತು, "ಸ್ವಾಮೀ! ತಮಗೆ ಗುರುದಕ್ಷಿಣೆಯಾಗಿ ಏನನ್ನು ಕೊಡಬೇಕು ? ಅಪ್ಪಣೆ ಕೊಡಿಸಿ" ಎಂದು ಪ್ರಾರ್ಥಿಸಿದನು.

೨೩. ಆಗ ಗುರುವು ಶಿಷ್ಯನನ್ನು ಕುರಿತು "ಎಲೈ ಮುಕುಂದಾ! ಹಾಗಾದರೆ ನನ್ನ ಮಾತನ್ನು ಕೇಳು, ನಿನ್ನ ತಂಗಿಯನ್ನು ಮೇಧಾವಿಯಾದ ನನ್ನ ಪುತ್ರನಿಗೆ ಕೊಡುವಂತೆ ಮಾಡು ಅದೇ ನನಗೆ ಗುರುದಕ್ಷಿಣೆ" ಎಂದು ಹೇಳಿದಳು

**ತಥೇತ್ಯುಕ್ತ್ವಾ ಮುಕುಂದಸ್ತು ಸ್ವಗೇಹಂ ಶೀಘ್ರಮಾಯಯೌ ।**
**ಅಸ್ಮಿನ್‌ಕಾಲೇ ಮಹಾದೇವೀ ದ್ರೌಣಿಶಿಷ್ಯಂ ದ್ವಿಜಂ ಶುಭಂ ॥ ೨೪ ॥**

**ವಾಮನಂ ವರಯಾಮಾಸ ತಂ ವಿಪ್ರಂ ಶಬ್ದವೇಧಿನಂ ।**
**ದಕ್ಷಿಣಾದಿಭಿರಭ್ಯರ್ಚ್ಯ ತಾಂಬೂಲೇನ ವಿಧಾನತಃ ॥ ೨೫ ॥**

**ತ್ರಯಸ್ತೇ ಬ್ರಾಹ್ಮಣಾಃ ಪ್ರಾಪ್ತಾಃ ಸುತಾರ್ಥೇ ಗುಣಕೋವಿದಾಃ ।**
**ಏತಸ್ಮಿನ್ನಂತರೇ ಕಾಮೀ ರಾಕ್ಷಸೋ ದೈವಮೋಹಿತಃ ॥ ೨೬ ॥**

**ಮಹಾದೇವೀಂ ಜಹಾರಾಶು ಪ್ರಾಪ್ತೋ ವಿಂಧ್ಯಾಚಲೇ ಗಿರೌ ।**
**ತದಾ ತೇ ದುಃಖಿನೋ ಭೂತ್ವಾವಿಲೇಪುಃ ಕಾಮಪೀಡಿತಾಃ ॥ ೨೭ ॥**

**ಧೀಮಾನ್ನಾಮ ದ್ವಿಜೋ ವಿದ್ವಾಂಸ್ತಾನ್ ಪ್ರಾಹ ಗಣಕೋತ್ತಮಃ ।**
**ವಿಂಧ್ಯಾಚಲೇ ಗಿರೌ ಬಾಲಾ ಚಾಸ್ತೇ ಕ್ರವ್ಯಾದವಶ್ಯಗಾ ॥ ೨೮ ॥**

---

೨೪-೨೫. ಮುಕುಂದನು "ಹಾಗೆಯೇ ಆಗಲಿ" ಎಂದು ಹೇಳಿ ತನ್ನ ಊರಿಗೆ ಬಂದನು. ಇಷ್ಟರೊಳಗೆ ಮಗಳಾದ ಮಹಾದೇವಿಯು ಅಶ್ವತ್ಥಾಮನ ಶಿಷ್ಯನೂ, ಶ್ರೇಷ್ಠನೂ, ಮಂಗಳಕರನೂ ಶಬ್ದವೇಧಿ ಎಂಬ ವಿದ್ಯೆಯನ್ನು ತಿಳಿದವನೂ ಆದ ವಾಮನನೆಂಬ ಬ್ರಾಹ್ಮಣನನ್ನು ಮೆಚ್ಚಿ ಪುಷ್ಪತಾಂಬೂಲಾದಿಗಳಿಂದ ಪೂಜಿಸಿ ಆದರಿಸಿದ್ದಳು.

೨೬-೨೭. ಈರೀತಿ ಗುಣಶಾಲಿಗಳಾದ ಮೂವರು ಬ್ರಾಹ್ಮಣರೂ ಹರಿದಾಸನ ಪುತ್ರಿಯನ್ನು ವರಿಸಬೇಕೆಂಬ ಉದ್ದೇಶದಿಂದ ಅಲ್ಲಿಗೆ ಬಂದರು. ಇದೇ ಸಂದರ್ಭದಲ್ಲಿ ಕಾಮುಕನಾದ ರಾಕ್ಷಸನೊಬ್ಬನು ದೈವಮೋಹಿತನಾಗಿ ಹರಿದಾಸ ಕುಮಾರಿಯಾದ ಮಹಾದೇವಿಯನ್ನು ಥಟ್ಟನೆ ಅಪಹರಿಸಿಕೊಂಡು ವಿಂಧ್ಯಪರ್ವತಪ್ರಾಂತಕ್ಕೆ ಎತ್ತಿ ಕೊಂಡು ಹೋದನು. ಆಗ ಅಲ್ಲಿಗೆ ಬಂದಿದ್ದ ಆ ಮೂವರೂ ಮದನಬಾಣ ತಾಡಿತ ರಾಗಿ ವಿರಹದುಃಖದಿಂದ ಪೀಡಿತರಾಗಿ ಆಕೆಯನ್ನು ಅನ್ವೇಷಣಮಾಡಹತ್ತಿದರು.

೨೮. ಆಗ ಧೀಮಾನ್ ಎಂಬ ಜ್ಯೋತಿಷಿಕನು ಈ ಮೂವರನ್ನೂ ಕುರಿತು "ಈಗ ಮಹಾದೇವಿಯು ಒಬ್ಬ ರಾಕ್ಷಸನ ಕೈಗೆ ಸಿಕ್ಕಿಬಿದ್ದು ವಿಂಧ್ಯಪರ್ವತದಲ್ಲಿದ್ದಾಳೆ" ಎಂದು ಹೇಳಿದನು.

ಸ್ವವಿಮಾನೇ ಸಮಾರೋಪ್ಯ ತೌ ದ್ವಿಜೌ ಬುದ್ಧಿಕೋವಿದಃ ।
ವಿಂಧ್ಯಾಚಲೇ ಗಿರೌ ಪ್ರಾಪ್ತಃ ಶಬ್ದವೇಧೀ ತದಾ ಧನುಃ ॥ ೨೯ ॥

ಸಮಾರೋಪ್ಯ ಶರೇಣೈವ ಜಘಾನಾಶು ಸ ರಾಕ್ಷಸಂ ।
ಕನ್ಯಾಂ ಗೃಹೀತ್ವಾ ತೇ ಜಗ್ಮುರುಜ್ಜಯಿನ್ಯಾಂ ವಿಮಾನಗಾಃ ॥ ೩೦ ॥

ಮಿಥೋ ವಿವಾದವಂತಸ್ತೇ ದೃಷ್ಟ್ವಾ ಕನ್ಯಾಂ ಸ್ಮರಾಸುಗಾಃ ।
ಕಸ್ಯೈ ಯೋಗ್ಯಾ ಭವೇತ್ಕನ್ಯಾ ಭೂಪ ಮೇ ಕೃಪಯಾ ವದ ॥ ೩೧ ॥

॥ ಸೂತ ಉವಾಚ ॥

ಇತಿ ಶ್ರುತ್ವಾ ವಚಸ್ತಸ್ಯ ವಿಕ್ರಮೋ ನಾಮ ಭೂಪತಿಃ ।
ಪ್ರಶ್ರಯಾವನತಃ ಪ್ರಾಹ ವೈತಾಲಂ ರುದ್ರಕಿಂಕರಂ ॥ ೩೨ ॥

ವಿದಿತ್ವಾ ಯೋಽವದತ್ಕನ್ಯಾಂ ಪಿತೃತುಲ್ಯೋ ದ್ವಿಜೋ ಹಿ ಸಃ ।
ಯೇನ ಪ್ರಾಪ್ತಾ ವಿಮಾನೇನ ಸ ತು ತದ್ಭ್ರಾತೃಕಃ ಸ್ಮೃತಃ ॥ ೩೩ ॥

---

೨೯-೩೦. ಇದನ್ನು ಕೇಳಿ ಬುದ್ಧಿಕೋವಿದನು ತನ್ನ ಜತೆಯಅವರಿಬ್ಬರನ್ನೂ ತನ್ನ ವಿಮಾನದಲ್ಲಿ ಕೂರಿಸಿಕೊಂಡು ವಿಂಧ್ಯಪರ್ವತಕ್ಕೆ ಬಂದನು. ಅನಂತರ ಶಬ್ದವೇಧಿಯನ್ನರಿತ ವಾಮನನು ತನ್ನ ಧನುಸ್ಸಿಗೆ ಹೆದೆಯೇರಿಸಿ ಆ ರಾಕ್ಷಸನಮೇಲೆ ಬಾಣ ಪ್ರಯೋಗಮಾಡಿ ಜಾಗ್ರತೆ ಕೊಂದುಹಾಕಿ ಆ ಮಹಾದೇವಿಯನ್ನು ಕರೆದುಕೊಂಡು ಅದೇ ವಿಮಾನದಲ್ಲಿ ಕುಳಿತು ಸಂಗಡಿಗರೊಡನೆ ಹೊರಟು ಜಾಗ್ರತೆ ಉಜ್ಜಯಿನಿಗೆ ಬಂದನು.

೩೧ "ಅಯ್ಯಾ ವಿಕ್ರಮರಾಜನೇ! ಈ ಮೂವರೂ ಮದನಾತುರರಾಗಿ ಹುಡುಗಿಯನ್ನು ನೋಡುತ್ತಾ ಪರಸ್ಪರ ವಿವಾದ ಮಾಡಹತ್ತಿದರು. ಆ ಕನ್ಯೆಯು ಈ ಮೂವರಲ್ಲಿ ಯಾರನ್ನು ವರಿಸಲು ಅರ್ಹಳು? ಎಂಬುದನ್ನು ದಯವಿಟ್ಟು ನನಗೆ ತಿಳಿಸು" ಎಂದು ಹೇಳಿದನು.

೩೨-೩೩. ಸೂತನು ಮುಂದುವರಿಸಿ ಹೇಳುತ್ತಾನೆ— ಈ ಮಾತನ್ನು ಕೇಳಿದ ವಿಕ್ರಮರಾಜನು ವಿನಯದಿಂದ ಕೂಡಿ ಶಿವಕಿಂಕರನಾದ ಬೇತಾಳನನ್ನು ಕುರಿತು "ಶಿಷ್ಯನ ಮುಖದಿಂದ ವಿಚಾರ ತಿಳಿದು ಕನ್ಯೆಯನ್ನು ತನ್ನ ಮಗನಿಗೆ ಕೊಡು ಎಂದು ಯಾವನು ಕೇಳಿದನೋ ಅತನ ಮಗನೂ ಹುಡುಗಿಗೆ ತಂದೆಯ ಸಮಾನನು ಆದ್ದರಿಂದ ಅವನು ಅರ್ಹನಲ್ಲ."

**ಹತ್ವಾ ಯೋ ರಾಕ್ಷಸಂ ವೀರಂ ಕನ್ಯಾಯೋಗ್ಯೋ ಹಿ ಸೋಽಭವತ್॥೩೪॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ ಖಂಡೇ ಕಲಿಯುಗೀಯೇತಿಹಾಸಮುಚ್ಚಯೇ ಪಂಚಮೋಽಧ್ಯಾಯ.**



೩೪. ಆ ಹುಡುಗಿಯು ಯಾರ ವಿಮಾನದಲ್ಲಿ ಕುಳಿತು ಪ್ರಯಾಣಮಾಡಿ ಮನೆಯನ್ನು ಸೇರಿದಳೋ ಆ ಬ್ರಾಹ್ಮಣನು ಆ ಹುಡುಗಿಯ ಸಹೋದರ ಸಮಾನನು. ಆದುದರಿಂದ ಅವನೂ ಅರ್ಹನಲ್ಲ. ವೀರನಾದ ರಾಕ್ಷಸನನ್ನು ಕೊಂದ ಆ ವಾಮನನೇ ಕನ್ಯೆಗೆ ಯೋಗ್ಯನಾದ ವರನು ಎಂದು ಹೇಳಿದನು

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ ಖಂಡದಲ್ಲಿ ಕಲಿಯುಗದ ಇತಿಹಾಸವೆಂಬ ಐದನೇ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ

## ಷಷ್ಠೋಽಧ್ಯಾಯಃ

---

॥ ಸೂತ ಉವಾಚ ॥

ಪುನರಾಹ ಸ ವೈತಾಲಃ ಶೃಣು ರಾಜನ್ ಕಥಾಮಿಮಾಂ ।
ಗ್ರಾಮೋ ಧರ್ಮಪುರೇ ರಮ್ಯೇ ನಾನಾಜನನಿಷೇವಿತೇ ॥ ೧ ॥

ತತ್ರಾಭವನ್ಮಹೀಪಾಲೋ ಧರ್ಮಶೀಲೋ ಮಹೋತ್ತಮಃ ।
ಲಜ್ಜಾದೇವೀ ಚ ಮಹಿಷೀ ತಸ್ಯ ಭೂಪಸ್ಯ ಭೂಪತೇ ॥ ೨ ॥

ಅಂಧಕೋ ನಾಮ ತನ್ಮಂತ್ರೀ ನ್ಯಾಯಶಾಸ್ತ್ರವಿಶಾರದಃ ।
ಕಿಯತಾ ಚೈವ ಕಾಲೇನ ದೇವೀಮಂದಿರಮುತ್ತಮಂ ॥ ೩ ॥

---

## ಆರನೆಯ ಅಧ್ಯಾಯ

೧-೨. ಆಗ ಸೂತನು ಶೌನಕಾದಿಗಳಿಗೆ ಹೇಳುತ್ತಾನೆ—ಪುನಃ ಆ ಬೇತಾಳನು "ಎಲೈ ರಾಜನೇ! ಇದೊಂದು ಕಥೆಯನ್ನು ಕೇಳು" ಎಂದು ಹೇಳತೊಡಗಿದನು. ನಾನಾ ಜನಗಳಿಂದ ನಿಬಿಡವೂ ಸುಂದರವೂ ಆದ ಧರ್ಮಪುರವೆಂಬ ಒಂದು ಪಟ್ಟಣವಿದ್ದಿತು. ಅಲ್ಲಿ ಧರ್ಮಶೀಲ ಎಂಬ ಹೆಸರುಳ್ಳ ಶ್ರೇಷ್ಠನಾದ ರಾಜನಿದ್ದನು. ಅವನಿಗೆ ಲಜ್ಜಾದೇವಿಯೆಂಬ ಪಟ್ಟದರಾಣಿಯಿದ್ದಳು.

೩-೪. ನ್ಯಾಯಶಾಸ್ತ್ರವಿಶಾರದನಾದ ಅಂಧಕನೆಂಬವನು ಅವನಿಗೆ ಮಂತ್ರಿಯಾಗಿದ್ದನು. ಆ ಧರ್ಮಶೀಲನು ಕಲಾವಿದರಿಂದ ಹಲವುದಿನಗಳು ಕೆಲಸಮಾಡಿಸಿ ಒಂದು ದೇವಾಲಯವನ್ನು ನಿರ್ಮಿಸಿ, ಅಲ್ಲಿ ದುರ್ಗಾದೇವಿಯನ್ನು ಪ್ರತಿಷ್ಠೆಮಾಡಿಸಿ

**ಧರ್ಮಶೀಲೇನ ರಚಿತಂ ತತ್ರ ದುರ್ಗಾ ಪ್ರತಿಷ್ಠಿತಾ ।**
**ಅಪತ್ಯಾರ್ಥೇ ಭೂಪತಿನಾ ಕೃತಸ್ತತ್ರ ಮಹೋತ್ಸವಃ ॥ ೪ ॥**

**ಅರ್ಧರಾತ್ರೇ ಮಹಾಗೌರೀ ನೃಪಂ ಪ್ರಾಹ ವೃಣೀಷ್ವ ಭೋಃ ।**
**ಶ್ರುತ್ವಾಮೃತಮಯಂ ವಾಕ್ಯಂ ಧರ್ಮಶೀಲೋ ನೃಪೋತ್ತಮಃ ॥ ೫ ॥**

**॥ ಧರ್ಮಶೀಲ ಉವಾಚ ॥**

**ಸ್ತುತಿಂ ಚಕಾರ ನಮ್ರಾತ್ಮಾ ಯೇನ ದುರ್ಗಾ ಪ್ರಸೀದತಿ ।**
**ಏಕಾ ತು ಪ್ರಕೃತಿರ್ನಿತ್ಯಾ ಸರ್ವವರ್ಣಸ್ವರೂಪಿಣೀ ॥ ೬ ॥**

**ಸಾ ತ್ವಂ ಭಗವತೀ ಸಾಕ್ಷಾತ್ ತ್ವಯಾ ಸರ್ವಮಿದಂ ತತಂ ।**
**ತ್ವದಾಜ್ಞಯಾ ಸುರಶ್ರೇಷ್ಠೋ ರಚಿತ್ವಾ ಲೋಕಮುತ್ತಮಂ ॥ ೭ ॥**

**ಮಹಾಲಕ್ಷ್ಮ್ಯಾ ತ್ವಯಾಂ ಸಾರ್ಧಂ ಬುಭುಜೇ ನಿರ್ಮಲಂ ಸುಖಂ ।**
**ತ್ವದ್ಭಕ್ತ್ಯಾ ಭಗವಾನ್ವಿಷ್ಣುಸ್ತ್ರೈಲೋಕ್ಯಂ ಬ್ರಹ್ಮನಿರ್ಮಿತಂ ॥ ೮ ॥**

---

ದನು ತನಗೆ ಪುತ್ರಸಂತಾನವಾಗಲಿ ಎಂಬ ಉದ್ದೇಶದಿಂದ ರಾಜನು ಅಲ್ಲಿ ಒಂದು ಮಹೋತ್ಸವವನ್ನು ನಡೆಯಿಸಿದನು.

೫. ಆ ದಿನ ಅರ್ಧರಾತ್ರಿಯಲ್ಲಿ ಮಹಾಗೌರಿಯು ಸಂತೋಷಗೊಂಡು ರಾಜನನ್ನು ಕುರಿತು "ರಾಜೇಂದ್ರನೇ! ನಿನಗೆ ಬೇಕಾದ ವರವನ್ನು ಕೇಳಿಕೋ ಕೊಡುವೆನು "ಎಂದು ಹೇಳಿದಳು.

೬. ಅಮೃತ ಸದೃಶವಾದ ಈ ವಾಕ್ಯವನ್ನು ಕೇಳಿ ರಾಜೋತ್ತಮನಾದ ಧರ್ಮಶೀಲನು ದುರ್ಗಾದೇವಿಯ ಮನಸ್ಸು ಪ್ರಸನ್ನವಾಗುವಂತೆ ನಮ್ರನಾಗಿ ಇಂತು ಸ್ತುತಿಸಿದನು. ದೇವಿ! ನೀನು ಅದ್ವಿತೀಯೆ, ನಿತ್ಯಳು, ಸರ್ವವಸ್ತು ಸ್ವರೂಪೆ, ಪ್ರಕೃತಿ ಸ್ವರೂಪೆ.

೭. ಷಡ್ಗುಣೈಶ್ವರ್ಯ ಸಂಪನ್ನೆ ನೀನೇ, ಸಮಸ್ತವಾದ ಪ್ರಪಂಚವೆಲ್ಲ ನಿನ್ನಿಂದ ವ್ಯಾಪ್ತವಾಗಿದೆ. ನಿನ್ನ ಅಪ್ಪಣೆಯಿಂದಲೇ ದೇವಶ್ರೇಷ್ಠನಾದ ಬ್ರಹ್ಮನು ಪ್ರಪಂಚವನ್ನು ನಿರ್ಮಿಸಿದನು.

೮. ಭಗವಂತನು ವಿಷ್ಣುಸ್ವರೂಪದಿಂದ ಮಹಾಲಕ್ಷ್ಮೀ ಸ್ವರೂಪಿಣಿಯಾದ ನಿನ್ನೊಡನೆ ಬ್ರಹ್ಮನಿರ್ಮಿತವಾದ ಲೋಕವನ್ನು ರಕ್ಷಿಸುತ್ತಾ ನಿಷ್ಕಲ್ಮಷವಾದ ಸುಖವನ್ನು ಅನುಭವಿಸಿದನು.

**ಪಾಲಯಂಶ್ಚ ಮಹಾಲಕ್ಷ್ಮ್ಯಾ ತ್ವಯಾ ಸಾರ್ಧಂ ಸನಾತನಿ ।**
**ತ್ವದ್ಬಲೇನ ಮಹಾದೇವಿ ತ್ರೈಲೋಕ್ಯಂ ವಿಷ್ಣುಪಾಲಿತಂ ॥ ೯ ॥**

**ಮಹಾಕಾಲ್ಯಾ ತ್ವಯಾ ಸಾರ್ಧಂ ಭಸ್ಮಕೃತ್ವಾ ವಿರಾಜತೇ ।**
**ಸರ್ವೇ ದೇವಾಸ್ತಥಾ ದೈತ್ಯಾಃ ಪಿತರೋ ಮನುಜಾಃ ಖಗಾಃ ॥ ೧೦ ॥**

**ತ್ವಲ್ಲೀಲಯಾ ಚ ತೇ ಜಾತಾ ಜಗನ್ಮಾತರ್ನಮೋಽಸ್ತು ತೇ ।**
**ಇತ್ಯುಕ್ತವಂತಂ ನೃಪತಿಂ ವಾಗುವಾಚಾಶರೀರಿಣೀ ॥ ೧೧ ॥**

**ಮಹಾಬಲೋ ಮಹಾವೀರ್ಯಸ್ತನಯಸ್ತೇ ಭವಿಷ್ಯತಿ ।**
**ತವ ಸ್ತುತ್ಯಾ ಪ್ರಸನ್ನಾಹಂ ದಾಸ್ಯಾಮಿ ವಿವಿಧಂ ಫಲಂ ॥ ೧೨ ॥**

---

೯. ನಿನ್ನಲ್ಲಿರುವ ಭಕ್ತಿಯಿಂದಲೇ ಭಗವಂತನಾದ ವಿಷ್ಣುವು ಮಹಾಲಕ್ಷ್ಮೀ ಸ್ವರೂಪಿಣಿಯೂ ಸನಾತನೆಯೂ ಆದ ನಿನ್ನೊಡಗೂಡಿ ಆ ಬಲದಿಂದಲೇ ಬ್ರಹ್ಮ ನಿರ್ಮಿತವಾದ ಮೂರು ಲೋಕವನ್ನೂ ಕಾಪಾಡುತ್ತಿರುವನು.

೧೦. ರುದ್ರರೂಪೀ ಪರಮಾತ್ಮನು ಮಹಾಕಾಳೀ ಸ್ವರೂಪಿಣಿಯಾದ ನಿನ್ನೊಡಗೂಡಿ ಇದ್ದು ಪ್ರಪಂಚವೆಲ್ಲವನ್ನೂ ಸಂಹರಿಸಿ ಪ್ರಕಾಶಿಸುತ್ತಾನೆ. (ಸೃಷ್ಟಿ, ಸ್ಥಿತಿ, ಲಯಕಾರಕರಾದ ಬ್ರಹ್ಮ, ವಿಷ್ಣು ಶಿವರು ಕೂಡ ಮಹಾಸರಸ್ವತಿ, ಮಹಾಲಕ್ಷ್ಮಿ, ಮಹಾಕಾಳಿ, ಸ್ವರೂಪಳಾದ ನಿನ್ನ ಬಲದಿಂದಲೇ ತಮ್ಮ ಕಾರ್ಯವನ್ನು ನಡೆಸಿದರು ಎಂದು ಭಾವ).

೧೧-೧೨. ದೇವತೆಗಳು, ರಾಕ್ಷಸರು, ಪಿತೃಗಳು, ಮನುಷ್ಯರು ಮೃಗಪಕ್ಷಿಗಳು ಮುಂತಾದ ಸಮಸ್ತವೂ ನಿನ್ನ ಲೀಲೆಯಿಂದ ಹುಟ್ಟಿರುವುವು, ಆದುದರಿಂದ ನೀನೇ ಜಗಜ್ಜನನಿ. ಅಂಥ ನಿನಗೆ ನಮಸ್ಕಾರ, ಈರೀತಿಯಾಗಿ ಸ್ತುತಿಸಿದ ರಾಜನಿಗೆ " ನಿನ್ನ ಸ್ತೋತ್ರಕ್ಕೆ ನಾನು ಮೆಚ್ಚಿದೆನು, ನಿನಗೆ ನಾನಾವರಗಳನ್ನು ಅನುಗ್ರಹಿಸಿರುವೆನು ನಿನಗೆ ಮಹಾಬಲಶಾಲಿಯೂ, ಪರಾಕ್ರಮಿಯೂ ಆದ ಮಗನು ಜನಿಸುವನು" ಎಂಬ ದಾಗಿ ಅಶರೀರವಾಣಿಯು ಕೇಳಿಸಿತು.

**ಇತಿ ಶ್ರುತ್ವಾ ಸ ನೃಪತಿಃ ಸ್ವಗೇಹಂ ಪ್ರಾಪ್ಯ ನಿರ್ಭಯಃ ।**
**ರಾಜ್ಞ್ಯೈ ನಿವೇದಯಾಮಾಸ ದೇವೀವಚನಮುತ್ತಮಂ ॥ ೧೩ ॥**

**ತತಃ ಪ್ರಭೃತಿ ರಾಜೇಂದ್ರ ಮೂರ್ತೌ ಜಾತಾ ಸ್ವಯಂ ಕಿಲ ।**
**ಏಕಸ್ಮಿನ್ ದಿವಸೇ ರಾಜನ್ ರಜಕಃ ಕಲಿಭೋಜನಃ ॥ ೧೪ ॥**

**ಕಾಶೀದಾಸೇನ ಸಹಿತೋ ಗ್ರಾಮಂ ಧರ್ಮಪುರಂ ಗತಃ ।**
**ತತ್ರ ದೃಷ್ಟ್ವಾ ಶುಭಾಂ ಕನ್ಯಾಂ ಕಾಮಾಂಗೀಂ ನಾಮ ವಿಶ್ರುತಾಂ ॥ ೧೫ ॥**

**ಪಿತ್ರಾನ್ವಿತಾಂ ರಾಜಮಾರ್ಗೇ ಗಚ್ಛಂತೀಂ ಶ್ರಮಪೀಡಿತಾಂ ।**
**ಮುಮೋಹ ಕಾಮವೇಗೇನ ರಜಕಃ ಕಲಿಭೋಜನಃ ॥ ೧೬ ॥**

**ಕಾಮಾಂಧಶ್ಚಂಡಿಕಾಂ ಪ್ರಾಹ ಜಗನ್ಮಾತಃ ಸನಾತನಿ ।**
**ಯದಿ ಮೇ ಭವಿತಾ ಸುಭ್ರೂಸ್ತರ್ಹಿ ದಾಸ್ಯಾಮಿ ತೇ ಶಿರಃ ॥ ೧೭ ॥**

---

೧೩. ಈ ಮಾತನ್ನು ಕೇಳಿ ಹರ್ಷಿತನಾಗಿ ಆ ರಾಜನು ತಾನು, ಅಪುತ್ರವಂತ ತನ್ನ ಗತಿಯೇನು ! ಎಂಬ ಭಯರಹಿತನಾಗಿ ತನ್ನ ಮನೆಗೆ ಹಿಂದಿರುಗಿ ಒಂದು ತನ್ನ ಪಟ್ಟದರಾಣಿಯನ್ನು ಕುರಿತು ತನಗೆ ದೇವಿಯು ಮೆಚ್ಚಿ ಅನುಗ್ರಹಮಾಡಿದ ಅಶರೀರ ವಾಣಿಯನ್ನು ತಿಳಿಸಿದನು.

೧೪-೧೬. ಎಲೈ ರಾಜನೇ ಕೇಳು—ಅದು ಮೊದಲ್ಗೊಂಡು ತಾನೂ ರಾಣಿಯೂ ಆ ದೇವೀಮೂರ್ತಿಯ ಧ್ಯಾನದಲ್ಲಿಯೇ ಮಗ್ನರಾಗಿದ್ದರು. ಒಂದುದಿನ ಕಲಿಭೋಜನ ಎಂಬ ಒಬ್ಬ ಅಗಸನು ಕಾಶೀದಾಸನೆಂಬವನ ಜತೆಯಲ್ಲಿ ಧರ್ಮಪುರಕ್ಕೆ ಬಂದನು. ಇವನು ಬೀದಿಯಲ್ಲಿ ಹೋಗುತ್ತಿರುವಾಗ ಕಾಮಾಂಗಿ ಎಂಬ ಹೆಸರುಳ್ಳ ಸುಂದರಿಯಾದ ರಜಕ ಕನ್ಯೆಯು ತನ್ನ ತಂದೆಯ ಜತೆಯಲ್ಲಿ ಹೋಗುತ್ತಿರುವುದನ್ನು ನೋಡಿದನು. ನಡೆದು ಆಯಾಸಪಟ್ಟು ಬಳಲಿ ಮುಖ ಕೆಂಪೇರಿರುವ ಆಕೆಯನ್ನು ಈ ಕಲಿಭೋಜನನು ಮೋಹಿಸಿದನು.

೧೭. ಒಡನೆಯೇ ಕಾಮಾತುರನಾದ ಅವನು ಚಂಡಿಕೆ (ದುರ್ಗೆ) ಯನ್ನು ನಮಿಸಿ " ಸನಾತನೆಯಾದ ಜಗಜ್ಜನನೀ ! ಸುಂದರವಾದ ಹುಬ್ಬುಳ್ಳ ಈ ಕಾಮಾಂಗಿಯು ನನಗೆ ಲಭಿಸುವಂತೆ ನೀನು ಕೃಪೆಮಾಡಿದರೆ ನನ್ನ ತಲೆಯನ್ನು ನಿನಗೆ ಅರ್ಪಿಸುವೆನು."

ಜಾತಿಯೋಗ್ಯಾ ಮಮೈವಾಸ್ತಿ ರಜಕಸ್ಯ ಸುತಾ ಶುಭಾ ।
ಇತಿ ಶ್ರುತ್ವಾ ತು ಸಾ ದೇವೀ ವಚನಂ ರಜಕಸ್ಯ ವೈ ॥ ೧೮ ॥

ಮೋಹಯಿತ್ವಾ ಚ ಪಿತರಂ ತಸ್ಯಾಃ ಪಾಣಿಗ್ರಹಃ ಕೃತಃ ।
ಸ ಸುತಾಂ ಕಾಮಿನೀಂ ಪ್ರಾಪ್ಯ ಪ್ರಸನ್ನಾತ್ಮಾ ಗೃಹಂ ಯಯೌ ॥ ೧೯ ॥

ಭುಕ್ತ್ವಾ ಸ ವಿವಿಧಂ ಭೋಗಂ ತಯಾ ಸಾರ್ಧಂ ಸುಖಪ್ರದಂ ।
ವರ್ಷಾಂತರೇ ಶಿರೋ ದೇವ್ಯೈ ಗತ್ವಾ ಶೀಘ್ರಂ ಸಮಾರ್ಪಯತ್ ॥ ೨೦ ॥

ಕಾಶಿದಾಸಸ್ತು ತಚ್ಛ್ರುತ್ವಾ ಸ್ನೇಹೇನ ತ್ವರಿತೋಽಗಮತ್ ।
ಸ್ವಶಿರೋ ದತ್ತವಾನ್ ದೇವ್ಯೈ ಕಾಮಾಂಗೀ ಪತಿಶೋಕತಃ ॥ ೨೧ ॥

ಅರ್ಪಯಿತ್ವಾ ಶಿರೋ ದೇವ್ಯೈ ದೇವಿರೂಪತ್ವಮಾಗತಾ ।
ತದಾ ಪ್ರಸನ್ನಾ ಸಾ ಚಂಡೀ ತ್ರೀನುಜ್ಜೀವ್ಯಾಬ್ರವೀಚ್ಚ ತಾನ್ ॥ ೨೨ ॥

---

೧೮-೧೯. "ಈಕೆಯು ರಜಕಪುತ್ರಿಯಾದ್ದರಿಂದ ಜಾತಿಯಲ್ಲಿ ನನಗೆ ತಕ್ಕವಳಾಗಿದ್ದಾಳೆ" ಎಂದು ಪ್ರಾರ್ಥಿಸಿದನು. ಈ ರಜಕನ ಪ್ರಾರ್ಥನೆಯನ್ನು ಲಾಲಿಸಿ ದುರ್ಗೆಯು ಒಡನೆಯೇ ಆ ಕಾಮಾಂಗಿಯ ತಂದೆಗೆ ಎಚ್ಚರ ತಪ್ಪುವಂತೆಮಾಡಿ ಆಗಲೇ ಇವನಿಗೆ ಆ ಕಾಮಾಂಗಿಯ ಪಾಣಿಗ್ರಹಣ ಮಾಡಿಸಿದಳು. ಹೀಗೆ ಆ ರಜಕನು ಕಾಮಾಂಗಿಯನ್ನು ಪಡೆದು ಜತೆಯಲ್ಲಿ ಕರೆದುಕೊಂಡು ತನ್ನ ಮನೆಗೆ ಬಂದನು

೨೦. ಆ ರಜಕನು ಸುಂದರಿಯಾದ ಅವಳೊಡನೆ ಪರಿಪರಿಯಾಗಿ ವಿಷಯ ಸುಖಗಳನ್ನು ಅನುಭವಿಸಿ ಒಂದು ವರ್ಷವಾದನಂತರ ತಾನುಮಾಡಿದ್ದ ಹರಕೆಯನ್ನು ಜ್ಞಾಪಿಸಿಕೊಂಡು ಜಾಗ್ರತೆಯಾಗಿ ದುರ್ಗೆಯ ಮಂದಿರಕ್ಕೆ ಹೋಗಿ ತನ್ನ ಶಿರಸ್ಸನ್ನು ಛೇದಿಸಿ ಆ ದೇವಿಗೆ ಅರ್ಪಿಸಿದನು.

೨೧. ಅವನ ಮಿತ್ರನಾದ ಕಾಶೀದಾಸನು ಈ ವೃತ್ತಾಂತವನ್ನು ಕೇಳಿ ಅವನ ಮೇಲಿನ ಸ್ನೇಹದಿಂದ ಜಾಗ್ರತೆಯಾಗಿ ಚಂಡಿಕಾ ದೇವಾಲಯಕ್ಕೆ ಹೋಗಿ ಅಲ್ಲಿ ನಡೆದಿದ್ದುದನ್ನು ನೋಡಿ ಸಹಿಸಲಾರದೆ ತನ್ನ ಶಿರಸ್ಸನ್ನು ಛೇದಿಸಿ ದೇವಿಗೆ ಸಮರ್ಪಿಸಿದನು.

೨೨. ಬಳಿಕ ಕಾಮಾಂಗಿಯೂ ಸಹ ದೇವಾಲಯಕ್ಕೆ ಬಂದು, ಪತಿಶೋಕದಿಂದ ಕೂಡಿ ತನ್ನ ಶಿರಸ್ಸನ್ನು ಕತ್ತರಿಸಿ ದೇವಿಗೆ ಅರ್ಪಿಸಿ, ದೇವೀ ಸಾರೂಪ್ಯವನ್ನು

**ವರಂ ವರಯುತಾಮುದ್ಯ ಯಂ ಯಂ ಕಾಮಮಭೀಪ್ಸಿತಂ ।**
**ಕಾಶಿದಾಸಸ್ತು ತಾಂ ಪ್ರಾಹ ಕಾಮಾಂಗೀಂ ಮಾಂ ಸಮರ್ಪಯ ॥ ೨೩ ॥**

**ಕಾಮಾಂಗೀ ಸಾ ತು ತಾಂ ಪ್ರಾಹ ಸ್ವಪತಿಂ ಮಾಂ ಸಮರ್ಪಯ ।**
**ಕಲಿಭೋಜನ ಏವಾಸೌ ದೇವೀಂ ಪ್ರಾಹ ಪ್ರಸನ್ನಧೀಃ ॥ ೨೪ ॥**

**ಮಿತ್ರಾಂಗಂ ಸುಂದರಂ ಮಹ್ಯಂ ದೇಹಿ ಮಾತರ್ನಮೋನಮಃ ।**
**ತೇಷಾಂ ವಾಚಸ್ತದಾ ಶ್ರುತ್ವಾ ಸಾ ದುರ್ಗಾ ಮೌನಮಾಸ್ಥಿತಾ ॥ ೨೫ ॥**

**ಯಥಾಕಾಮಂ ದತ್ತವತೀ ವರಂ ದಾರಸುರೂಪಿಣೀ ।**
**॥ ಸೂತ ಉವಾಚ ॥**
**ಇತ್ಯುಕ್ತ್ವಾ ಸ ತು ವೈತಾಲೋ ನೃಪಂ ಪ್ರಾಹ ವಿಹಸ್ಯ ಭೋಃ ॥ ೨೬ ॥**

---

ಪಡೆದಳು. ಆಗ ದೇವಿಯು ಪ್ರಸನ್ನೆಯಾಗಿ ಆ ಮೂವರನ್ನೂ ಬದುಕಿಸಿ ಅವರನ್ನು ಕುರಿತು "ನಿಮಗೆ ಇಷ್ಟವಾದ ವರಗಳನ್ನು ಕೇಳಿ, ಕೊಡುತ್ತೇನೆ" ಎಂದು ಹೇಳಿದಳು.

೨೩-೨೪. ಆಗ ಕಾಶೀದಾಸನು "ಕಾಮಾಂಗಿಯನ್ನು ನನಗೆ ಕೊಡು" ಎಂಬದಾಗಿ ಕೇಳಿದನು. ಕಾಮಾಂಗಿಯಾದರೋ "ನನ್ನ ಪತಿಯು ನನ್ನನ್ನು ಸೇರುವಂತೆ ಅನುಗ್ರಹಿಸು" ಎಂದು ಕೇಳಿಕೊಂಡಳು. ಕಲಿಭೋಜನನು ಸಂತೋಷಗೊಂಡು ದೇವಿಯನ್ನು ಕುರಿತು " ಜಗಜ್ಜನನೀ! ನನ್ನ ಸ್ನೇಹಿತನಂತೆ ಸುಂದರವಾದ ಶರೀರವನ್ನು ನನಗೆ ಕೊಡು, ನಿನಗೆ ನಮಸ್ಕಾರ" ಎಂಬದಾಗಿ ಬೇಡಿದನು.

೨೫. ಇವರುಗಳ ಪ್ರಾರ್ಥನೆಯನ್ನು ಕೇಳಿ ದುರ್ಗೆಯು ಸ್ವಲ್ಪಹೊತ್ತು ಮೌನದಿಂದಿದ್ದು ಸುಂದರವಾದ ರೂಪವನ್ನು ಧರಿಸಿ ಅವರವರು ಅಪೇಕ್ಷಿಸಿದ ವರಗಳನ್ನು ಅವರಿಗೆ ಕೊಟ್ಟಳು.

೨೬. ಸೂತನು ಹೇಳುತ್ತಾನೆ—ಬೇತಾಳವು ಈರೀತಿಹೇಳಿ ನಕ್ಕು ರಾಜನನ್ನು ಕುರಿತು "ಅಯ್ಯಾ ವಿಕ್ರಮರಾಜನೇ ! ಅವರಿಗೆ ವರಗಳನ್ನು ಕೊಡುವುದಕ್ಕಾಗಿ ದೇವಿಯು ಏನು ಯುಕ್ತಿಮಾಡಿದಳು ? " ಎಂದು ಕೇಳಲಾಗಿ ವಿಕ್ರಮರಾಜನು ಬೇತಾಳವನ್ನು ಕುರಿತು, ಹೇಳುತ್ತಾನೆ.

ಕಿಂ ಕೃತಂ ಚ ತಯಾ ದೇವ್ಯಾ ತೇಷಾಮರ್ಥಂ ವದಸ್ವ ಮೇ ।
ಇತ್ಯುಕ್ತಃ ಸ ತು ಭೂಪಾಲೋ ವೈತಾಲಮಿದಮಬ್ರವೀತ್ ॥ ೨೭ ॥

ಕಪಾಲಮುತ್ತಮಂ ದೇಹೇ ತಯಾ ಚ್ಛಿನ್ನಂ ದ್ವಯೋಸ್ತದಾ ।
ವಿಪರೀತಂ ಕೃತಂ ಮಾತ್ರಾ ವರಂ ಸ್ವಂಸ್ವಂ ಸಮಾಪ್ನುಯುಃ ॥ ೨೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಖಂಡೇ ಕಲಿಯುಗೀಯೇತಿಹಾಸ ಸಮುಚ್ಚಯೇ ಷಷ್ಠೋಽಧ್ಯಾಯಃ.



---

೨೭-೨೮. 'ದೇವಿಯು ಕಾಶೀದಾಸ, ಕಲಿಭೋಜನ ಇವರೀರ್ವರ ಉತ್ತಮಾಂಗವನ್ನೂ (ಶಿರಸ್ಸನ್ನು) ಕತ್ತರಿಸಿ ಕಾಶೀದಾಸನ ಕಪಾಲ (ರುಂಡ) ವನ್ನು ಕಲಿಭೋಜನನ ಮುಂಡಕ್ಕೂ, ಕಲಿಭೋಜನನ ಕಪಾಲವನ್ನು ಕಾಶೀದಾಸನ ಮುಂಡಕ್ಕೂ, ಸೇರುವಂತೆ ಮಾಡಿದಳು. ಇದರಿಂದ ಅವರೆಲ್ಲ ತಾವು ಕೇಳಿಕೊಂಡ ವರಗಳನ್ನು ಪಡೆದಂತಾಯಿತು' ಎಂದು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ
ಖಂಡದಲ್ಲಿ ಕಲಿಯುಗದ ಇತಿಹಾಸಗಳೆಂಬ ಆರನೆಯ
ಅಧ್ಯಾಯವು ಮುಗಿದುದು



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ಸಪ್ತಮೋಽಧ್ಯಾಯಃ

---

॥ ಸೂತ ಉವಾಚ ॥

ತಸ್ಮಿನ್‌ಕಾಲೇ ಸ ವೈತಾಲೋ ಭೃಗುವರ್ಯಃ ಪ್ರಸನ್ನಧೀಃ ।
ರಾಜಾನಮುತ್ತಮಾಂ ಗಾಥಾಂ ವರ್ಣಯಾಮಾಸ ವಿಶ್ರುತಾಂ ॥ ೧ ॥

ಚಂಪಾಪುರೀ ಚ ವಿಖ್ಯಾತಾ ಚಂಪಕೇಶೋ ಮಹೀಪತಿಃ ।
ತತ್ರಾಸ್ತೇ ಬಲವಾನ್ ಧನ್ವೀ ಮಹಿಷೀ ತತ್ಸುಲೋಚನಾ ॥ ೨ ॥

ತ್ರಿಲೋಕಸುಂದರೀ ನಾಮ ಕನ್ಯಾ ತಸ್ಯಾಮಜಾಯತ ।
ವದನಂ ಚಂದ್ರವದ್ಯಸ್ಯಾ ಭ್ರುವೌ ಚಾಪಸಮೌ ಸ್ಮೃತೌ ॥ ೩ ॥

---

## ಏಳನೆಯ ಅಧ್ಯಾಯ

೧. ಸೂತನು ಶೌನಕನನ್ನು ಕುರಿತು ಹೇಳುತ್ತಾನೆ—ಭೃಗುಶ್ರೇಷ್ಠನೆನಿಸಿ ನಿರ್ಮಲವಾದ ಮನಸ್ಸುಳ್ಳ ಬೇತಾಳನು ಆಗ ಪ್ರಸನ್ನನಾಗಿ ರಾಜನನ್ನು ಕುರಿತು, ಪ್ರಸಿದ್ಧವೂ ಶ್ರೇಷ್ಠವೂ ಆದ ಇನ್ನೊಂದು ಗಾಥೆಯನ್ನು ಹೇಳತೊಡಗಿತು

೨. ಚಂಪಾಪುರವೆಂಬ ಪ್ರಸಿದ್ಧವಾದ ಪಟ್ಟಣದದಲ್ಲಿ ಬಲಶಾಲಿಯೂ ಧನುರ್ವಿದ್ಯಾ ವಿಶಾರದನೂ ಆದ ಚಂಪಕೇಶನೆಂಬ ಒಬ್ಬ ರಾಜನಿದ್ದನು. ಅವನಿಗೆ ಸುಲೋಚನೆಯೆಂಬವಳು ರಾಣಿಯಾಗಿದ್ದಳು.

೩. ಅವಳಿಗೆ ತ್ರಿಲೋಕಸುಂದರಿಯೆಂಬ ಮಗಳು ಹುಟ್ಟಿದಳು. ಅವಳ ಮುಖವು ಚಂದ್ರನಂತೆಯೂ ಹುಬ್ಬುಗಳು ಧನುಸ್ಸಿನಂತೆಯೂ ಇದ್ದುವು.

ಮೃಗಾಕ್ಷೀ ಕೋಕಿಲರವಾ ಕೋಮಲಾಂಗೀ ಮಹೋತ್ತಮಾ ।
ದೇವೈರ್ಮನೋವೃತಾ ಬಾಲಾ ಕಿಮನ್ಯೈರ್ಮಾನುಷೈರ್ನೃಪ ॥ ೪ ॥

ತಸ್ಯಾಃ ಸ್ವಯಂವರೋ ಜಾತೋ ನೃಪಾ ಬಹುವಿಧಾಸ್ತದಾ ।
ತಸ್ಯಾಯೋಗೇನ ಸಂಪ್ರಾಪ್ತಾ ಯೇ ಭೂಪಾ ಭುವಿ ವಿಶ್ರುತಾಃ ॥ ೫ ॥

ಇಂದ್ರೋ ಯಮಃ ಕುಬೇರಶ್ಚ ವರುಣೋ ವಿಬುಧೋತ್ತಮಃ ।
ಕೃತ್ವಾ ನರಮಯಂ ರೂಪಂ ತದರ್ಥೇ ಸಮುಪಾಗತಾಃ ॥ ೬ ॥

ಚಂಪಕೇಶಮಿದಂ ಪ್ರಾಹ ಶೃಣು ರಾಜನ್ ವಚೋ ಮಮ ।
ಸರ್ವಶಾಸ್ತ್ರೇಷು ನಿಪುಣಂ ರೂಪವಂತಂ ಮನೋರಮಂ ॥ ೭ ॥

ಇಂದ್ರದತ್ತಂ ಚ ಮಾಂ ವಿದ್ಧಿ ಸ್ವಸುತಾಂ ಮೇ ಸಮರ್ಪಯ ।
ದ್ವಿತೀಯಸ್ತು ತದಾ ಪ್ರಾಹ ಧರ್ಮದತ್ತಂ ಮನೋರಮಂ ॥ ೮ ॥

---

೪. ಮತ್ತು ಜಿಂಕೆಯ ಕಣ್ಣಿನಂತೆ ಸೊಗಸಾದ ಕಣ್ಣುಗಳೂ, ಕೋಗಿಲೆಯ ಧ್ವನಿಯಂತೆ ಕಂಠಧ್ವನಿಯೂ, ಕೋಮಲವಾದ ಶರೀರವೂ, ಉಳ್ಳ ಆ ಬಾಲಿಕೆಯನ್ನು ದೇವತೆಗಳೇ ಆಶಿಸುತ್ತಿದ್ದರು ಎಂದಮೇಲೆ ಮನುಷ್ಯರು ಆಶಿಸಡುವುದು ಹೆಚ್ಚೆ ?

೫. ಈ ತ್ರಿಲೋಕ ಸುಂದರಿಗೆ ಸ್ವಯಂವರ ಮಹೋತ್ಸವವನ್ನು ನೆರವೇರಿಸಲು ಸಿದ್ಧತೆಯಾಯಿತು. ಲೋಕಪ್ರಸಿದ್ಧರಾದ ನಾನಾದೇಶದ ರಾಜರು ಇವಳನ್ನು ವರಿಸುವುದಕ್ಕಾಗಿ ಅಲ್ಲಿಗೆ ಬಂದಿದ್ದರು.

೬. ದೇವಶ್ರೇಷ್ಠರಾದ ಇಂದ್ರ, ಯಮ, ವರುಣ, ಕುಬೇರ, ಇವರು ಮನುಷ್ಯ ರೂಪವನ್ನು ಧರಿಸಿ, ಇವಳನ್ನು ವರಿಸಬೇಕೆಂದು ಬಂದಿದ್ದರು. ಅವರು ಒಬ್ಬೊಬ್ಬರೇ ಪ್ರತ್ಯೇಕವಾಗಿ ಚಂಪಕೇಶರಾಜನನ್ನು ಸಂದರ್ಶಿಸಿ "ಎಲೈ ರಾಜನೇ! ನನ್ನ ಮಾತನ್ನು ಕೇಳು" ಎಂದು ಪ್ರತಿಯೊಬ್ಬನೂ ಹೇಳತೊಡಗಿದರು.

೭. ಅವರಲ್ಲಿ ಮೊದಲನೆಯವನಾದ ಇಂದ್ರನು "ನಾನು ಸರ್ವಶಾಸ್ತ್ರಗಳಲ್ಲಿ ನಿಪುಣನು. ಮನೋಹರವಾದ ರೂಪುಳ್ಳ ನನ್ನ ಹೆಸರು ಇಂದ್ರದತ್ತ, ನನಗೆ ನಿನ್ನ ಪುತ್ರಿಯನ್ನು ಕೊಟ್ಟು ವಿವಾಹ ಮಾಡು" ಎಂದು ಹೇಳಿದನು.

೮ ಎರಡನೆಯವನಾದ ಯಮನು "ನಾನು ಧನುರ್ವೇದದಲ್ಲಿ ನಿಪುಣ. ಸರ್ವಾಂಗಸುಂದರನಾದ ನನ್ನ ಹೆಸರು ಧರ್ಮದತ್ತ, ನಿನ್ನ ಕನ್ಯೆಯನ್ನು ನನಗೆ ಕೊಡುವುದು ನಿನಗೆ ವಿಹಿತವಾಗಿದೆ" ಎಂದನು.

**ಧನುರ್ವೇದೇಷು ನಿಪುಣಂ ಸ್ವಕನ್ಯಾಂ ದಾತುಮರ್ಹಸಿ ।**
**ತೃತೀಯಶ್ಚಾಹ ಭೋ ರಾಜನ್ ಧನಪಾಲಾಯ ಶೋಭಿನೇ ॥ ೯ ॥**

**ಸರ್ವಜೀವಸ್ಯ ಭಾಷಾಣಾಂ ಜ್ಞಾಯಿನೇ ಗುಣರೂಪಿಣೇ ।**
**ಮಹ್ಯಂ ಚ ಸ್ವಸುತಾಂ ಶೀಘ್ರಂ ಸಮರ್ಪಯ ಸುಖೀ ಭವ ॥ ೧೦ ॥**

**ಚತುರ್ಥಶ್ಚಾಹ ಭೋ ರಾಜನ್ ಕಲಾಸರ್ವೇಷು ಕೋವಿದಃ ।**
**ಪಂಚರತ್ನಸಮುದ್ಯೋಗೀ ಪ್ರತ್ಯಹಂ ಭೂಪತೇ ಹ್ಯಹಂ ॥ ೧೧ ॥**

**ಪುಣ್ಯಾರ್ಥಮೇಕರತ್ನಂ ಚ ಹೋಮಾರ್ಥಂ ದ್ವಿತಿಯಂ ವಸು ।**
**ಆತ್ಮಾರ್ಥೇ ತೃತಿಯಂ ರತ್ನಂ ಪತ್ನ್ಯರ್ಥೇ ತುರಿಯಂ ವಸು ॥ ೧೨ ॥**

**ಶೇಷಂ ಸುಭೋಜನಾರ್ಥಂ ಚ ರತ್ನಂ ನಿತ್ಯಂ ಮಯಾಹೃತಂ ।**
**ಈದೃಗ್ವಿಧಂ ಮಾಂ ಪುರುಷಂ ಸ್ವಸುತಾಂ ದಾತುಮರ್ಹಸಿ ॥ ೧೩ ॥**

---

೯. ಅನಂತರ ಕುಬೇರನು ಬಂದು "ಅಯ್ಯಾ ಪ್ರಭುವೇ! ಸುಂದರನೂ ತೇಜಸ್ವಿಯೂ ಆದ ನನ್ನನ್ನು ಧನಪಾಲನೆಂದು ಕರೆಯುವರು. ನನಗೆ ಸಮಸ್ತ ಪ್ರಾಣಿಗಳ ಭಾಷೆಯೂ ಗೊತ್ತು. ನನಗೆ ನಿನ್ನ ಮಗಳನ್ನು ಕೊಟ್ಟು ಜಾಗ್ರತೆ ವಿವಾಹಮಾಡಿ ಸುಖಿಯಾಗು" ಎಂದು ನಿರೂಪಿಸಿದನು.

೧೧-೧೩. ಆಮೇಲೆ ವರುಣನು ಬಂದು "ಎಲೈ ರಾಜನೇ! ನಾನು ಸರ್ವಕಲಾನಿಪುಣ. ಪ್ರತಿ ನಿತ್ಯವೂ ಐದು ರತ್ನಸಂಪಾದನೆಯ ಉದ್ಯೋಗವುಳ್ಳವನು. ಅದರಲ್ಲಿ ಒಂದು ರತ್ನವನ್ನು ಪುಣ್ಯಸಂಪಾದನೆಗೂ, ಇನ್ನೊಂದು ರತ್ನವನ್ನು ಯಜ್ಞಗಳಿಗೂ, ಮೂರನೆಯ ರತ್ನವನ್ನು ನನಗೋಸ್ಕರವೂ, ನಾಲ್ಕನೆಯ ರತ್ನವನ್ನು ಪತ್ನಿಗೋಸ್ಕರವೂ, ಐದನೆಯ ರತ್ನವನ್ನು ಭೋಜನದ ವೆಚ್ಚಕ್ಕೂ, ಹೀಗೆ ಐದು ರತ್ನಗಳನ್ನು ಸಂಪಾದಿಸುವೆನು. ಇಂಥ ನನ್ನ ಸಾಮರ್ಥ್ಯವನ್ನು ತಿಳಿದು, ನೀನು ನಿನ್ನ ಮಗಳನ್ನು ನನಗೆ ಕೊಟ್ಟು ಲಗ್ನಮಾಡು" ಎಂದು ಹೇಳಿದನು.

೧೪. ಧರ್ಮಾತ್ಮನಾದ ರಾಜನು ಅವರುಗಳ ಈ ಮಾತನ್ನು ಕೇಳಿ ದಿಗ್ಭ್ರಮೆಗೊಂಡು ಮಗಳನ್ನು ತನ್ನ ಬಳಿಗೆ ಕರೆದು "ಅಮ್ಮಾ! ನಿನ್ನನ್ನು ಇವರಲ್ಲಿ ಯಾರಿಗೆ ಕೊಟ್ಟು ಲಗ್ನಮಾಡಲಿ?" ಎಂದು ಕೇಳಿದನು.

ಇತಿ ಶ್ರುತ್ವಾ ವಚಸ್ತೇಷಾಂ ಮೋಹಿತೋ ನೃಪತಿಸ್ತದಾ ।
ಸ್ವಸುತಾಂ ಪ್ರಾಹ ಧರ್ಮಾತ್ಮಾ ಕಸ್ಮೈ ದಾಸ್ಯಾಮಿ ಕನ್ಯಕೇ ॥ ೧೪ ॥

ಸಾ ದೇವೀ ತು ವಚಃ ಶ್ರುತ್ವಾ ವ್ರೀಡಿತಾ ದೈವಮೋಹಿತಾ ।
ನೋತ್ತರಂ ಚ ದದೌ ತಸ್ಮೈ ಸ್ವಪಿತ್ರೇ ಧರ್ಮಶಾಲಿನೀ ॥ ೧೫ ॥

ಇತ್ಯುಕ್ತ್ವಾ ಸ ತು ವೈತಾಲೋ ವಿಹಸ್ಯೋವಾಚ ಭೂಪತಿಂ ।
ಕಸ್ಮೈ ಯೋಗ್ಯಾ ಭವೇತ್ಕನ್ಯಾ ರೂಪಯೌವನಶಾಲಿನೀ ॥ ೧೬ ॥

॥ ಸೂತ ಉವಾಚ ॥

ಇತ್ಯುಕ್ತಃ ಸ ತು ಭೂಪಾಲೋ ವಚನಂ ತಂ ಸಮಬ್ರವೀತ್ ।
ಧರ್ಮದತ್ತಾಯ ಸಾ ಕನ್ಯಾ ಯೋಗ್ಯಾ ಭವತಿ ರೂಪಿಣೀ ॥ ೧೭ ॥

ಸರ್ವಶಾಸ್ತ್ರೇಷು ನಿಪುಣಃ ಸ ದ್ವಿಜೋ ವರ್ಣತಃ ಸ್ಮೃತಃ ।
ಭಾಷಾವೇತ್ತಾ ತು ವಣಿಜೋ ಧನಧಾನ್ಯಪ್ರಸಾರಕಃ ॥ ೧೮ ॥

---

೧೫. ಆ ಹುಡುಗಿಯು ತಂದೆಯ ಈ ಪ್ರಶ್ನೆಗೆ ನಾಚಿಕೊಂಡು, ದೈವಮೋಹಿತಳಾಗಿ ತನ್ನ ತಂದೆಗೆ ಯಾವ ಉತ್ತರವನ್ನೂ ಕೊಡಲಿಲ್ಲ.

೧೬. ಈರೀತಿ ಬೇತಾಳವು ಕಥೆಯನ್ನು ಹೇಳಿ ಸ್ವಲ್ಪ ನಕ್ಕು ರಾಜನನ್ನು ಕುರಿತು "ರೂಪವತಿಯೂ ಯೌವನಶಾಲಿಯೂ ಆದ ಈ ಹುಡುಗಿಯು ಯಾರಿಂದ ವರಿಸಲು ಅರ್ಹಳು?" ಎಂದು ಕೇಳಿತು.

೧೭. ಸೂತನು ಹೇಳುತ್ತಾನೆ—ಬೇತಾಳವು ಈರೀತಿ ಪ್ರಶ್ನೆಮಾಡಲಾಗಿ ವಿಕ್ರಮರಾಜನು ಅದನ್ನು ಕುರಿತು "ರೂಪವತಿಯಾದ ಆ ಹುಡುಗಿಯು ಧರ್ಮದತ್ತನನ್ನೇ ವರಿಸಲು ಯೋಗ್ಯಳು" ಎಂದು ಹೇಳಿದನು.

೧೮-೧೯. ಸರ್ವಶಾಸ್ತ್ರಗಳಲ್ಲಿ ನಿಪುಣನಾದವನನ್ನು ಬ್ರಾಹ್ಮಣನೆನ್ನಬೇಕು. ಸಕಲಪ್ರಾಣಿಗಳ ಭಾಷೆಗಳನ್ನು ತಿಳಿದು ಧನಧಾನ್ಯಸಂಪತ್ತನ್ನುಳ್ಳವನು ವೈಶ್ಯನೆನಿಸುವನು. ಸರ್ವಕಲಾನಿಪುಣನು ಶೂದ್ರನೆನಿಸುವನು. ಧನುರ್ವೇದವನ್ನು ತಿಳಿದವನೇ ಕ್ಷತ್ರಿಯನೆನಿಸಿ ರಾಜನಾಗುವನು. ಕನ್ಯೆಯು ಯಾವಾಗಲೂ ಸಮಾನವರ್ಣದವರಿಗೇ

**ಕಲಾಜ್ಞಃ ಸ ತು ಶೂದ್ರೋ ಹಿ ಧನುರ್ವೇದೀ ಸ ಭೂಪತಿಃ ।**
**ಸವರ್ಣಾಯ ಚ ವೈತಾಲ ಸದಾ ಯೋಗ್ಯಾ ಹಿ ಕನ್ಯಕಾ　　　॥ ೧೯ ॥**
**ಅತೋ ವಿವಾಹಿತಾ ಬಾಲಾ ಧರ್ಮದತ್ತಾಯ ಶೀಲಿನೇ ।**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಸಪ್ತಮೋಽಧ್ಯಾಯಃ**



---

ಕೊಡಲು ಯೋಗ್ಯಳು　ಆದುದರಿಂದ-ಎಲೈ ಬೇತಾಳನೇ! ಆ ಹುಡುಗಿಯು ಒಳ್ಳೆಯ ಸ್ವಭಾವವುಳ್ಳ ಧರ್ಮದತ್ತನಿಗೇ ಸಲ್ಲಬೇಕು” ಎಂದು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ ಖಂಡದಲ್ಲಿ ಕಲಿಯುಗದಇತಿಹಾಸಗಳೆಂಬ ಏಳನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ಅಷ್ಟಮೋಽಧ್ಯಾಯಃ

॥ ಸೂತ ಉವಾಚ ॥

ಇತಿ ಶ್ರುತ್ವಾ ಸ ವೈತಾಲೋ ರಾಜಾನಮಿದಮಬ್ರವೀತ್ ।
ವಿದೇಹದೇಶೇ ಭೂಪಾಲ ನಗರೀ ಮಿಥಿಲಾವತೀ ॥ ೧ ॥

ಗುಣಾಧಿಪಸ್ತತ್ರ ರಾಜಾ ಧನಧಾನ್ಯಸಮನ್ವಿತಃ ।
ಚಿರಂದೇವ ಇತಿ ಖ್ಯಾತೋ ರಾಜನ್ಯಃ ಕಶ್ಚನಾಗತಃ ॥ ೨ ॥

ವೃತ್ತ್ಯರ್ಥಂ ಮಿಥಿಲಾದೇಶೇ ತತ್ರ ವಾಸಂ ಚಕಾರ ಸಃ ।
ವರ್ಷಾಂತೇ ಭೂಪತಿಃ ಸೋಽಪಿ ಚತುರಂಗಬಲಾನ್ವಿತಃ ॥ ೩ ॥

---

## ಎಂಟನೆಯ ಅಧ್ಯಾಯ

೧. ಸೂತನು ಹೇಳುತ್ತಾನೆ—ವಿಕ್ರಮರಾಜನು ಹೇಳಿದ ಈ ಮಾತನ್ನು ಕೇಳಿ ಬೇತಾಳವು ಪುನಃ ರಾಜನನ್ನು ಕುರಿತು ಇಂತೆಂದಿತು.

೨. “ ವಿದೇಹದೇಶದಲ್ಲಿ ಮಿಥಿಲೀವತಿಯೆಂಬ ಪಟ್ಟಣವಿದ್ದಿತು. ಅಲ್ಲಿ ಧನ ಧಾನ್ಯ ಸಮನ್ವಿತನಾದ ಗುಣಾಧಿಪನೆಂಬ ರಾಜನಿದ್ದನು. ಅಲ್ಲಿಗೆ ಚಿರಂದೇವನೆಂದು ಹೆಸರುಳ್ಳ ಒಬ್ಬ ಕ್ಷತ್ರಿಯನು ಬಂದನು.

೩-೪. ಅವನು ಜೀವನನಿರ್ವಾಹಕ್ಕಾಗಿ ಈ ಮಿಥಿಲಾಪತಿಯಲ್ಲಿಯೇ ಸೇವೆ ಮಾಡುತ್ತಿದ್ದನು. ಒಂದು ವರ್ಷವಾದಮೇಲೆ ಆ ಗುಣಾಧಿಪನು ಚತುರಂಗಸೇನೆ

**ಮೃಗಯಾರ್ಥೇ ವನಂ ಪ್ರಾಪ್ತಸ್ತತ್ರ ಶಾರ್ದೂಲಮುತ್ತಮಂ ।**
**ದೃಷ್ಟ್ವಾ ತಂ ಚಾವಧೀದ್ರಾಜಾ ಕ್ರೋಧತಾಮ್ರೇಕ್ಷಣೋ ವನೇ ॥ ೪ ॥**

**ವ್ಯಾಘ್ರಮಾರ್ಗೇಣ ಭೂಪಾಲೋ ವನಾಂತರಮುಪಾಯಯೌ ।**
**ಚಿರಂದೇವಸ್ತು ತತ್ಪಶ್ಚಾದ್ಗತಃ ಸ ಗಹನೇ ವನೇ ॥ ೫ ॥**

**ಕ್ಷುತ್ಕ್ಷಾಮಕಂಠೋ ನೃಪತಿಃ ಶ್ರಮಸಂತಾಪಪೀಡಿತಃ ।**
**ಚಿರಂದೇವಮುವಾಚಾಶು ಭೋಜನಂ ದೇಹಿ ಮೇಽದ್ಯ ಭೋಃ ॥ ೬ ॥**

**ಇತಿ ಶ್ರುತ್ವಾ ಸ ರಾಜನ್ಯೋ ಹತ್ವಾ ಹರಿಣಮುತ್ತಮಂ ।**
**ಸಂಸ್ಕೃತ್ಯ ಪ್ರದದೌ ರಾಜ್ಞೇ ತನ್ಮಾಂಸಂ ಭೂಪತಿಪ್ರಿಯಂ ॥ ೭ ॥**

**ತುಷ್ಟೋ ಭೂಪಸ್ತದಾ ಪ್ರಾಹ ವರಂ ವರಯ ಸತ್ತಮ ।**
**ವಾಂಛಿತಂ ತೇ ದದಾಮ್ಯಾಶು ಸ ಹೋವಾಚ ಮಹೀಪತಿಂ ॥ ೮ ॥**

---

ಯೊಡನೆ ಬೇಟೆಗೋಸ್ಕರ ಕಾಡಿಗೆ ಬಂದು ಅಲ್ಲಿ ಒಂದು ದೊಡ್ಡ ಹುಲಿಯನ್ನು ನೋಡಿ ರೋಷದಿಂದ ಕೆಂಪಾದ ಕಣ್ಣುಳ್ಳವನಾಗಿ ಅದನ್ನು ಬೆನ್ನಟ್ಟಿಹೋಗಿ ಕೊಂದನು.

೫. ಹೀಗೆ ಹುಲಿಯನ್ನು ಬೆನ್ನಟ್ಟುವ ರಭಸದಲ್ಲಿ ರಾಜನು ಬೇರೆ ಯಾವುದೋ ಒಂದುಕಾಡಿಗೆ ಬಂದನು. ಚಿರಂದೇವನೂ ದಟ್ಟವಾದ ಆ ಕಾಡಿನಲ್ಲಿ ಅವನನ್ನೇ ಅನುಸರಿಸಿ ಹೋದನು.

೬. ಆ ಕಾಡಿನಲ್ಲಿ ಗುಣಾಧಿಪರಾಜನು ಹಸಿವು ಬಾಯಾರಿಕೆಗಳಿಂದ ಬಳಲಿದವನಾಗಿ ತುಂಬ ಆಯಾಸಪಟ್ಟು ಚಿರಂದೇವನನ್ನು ಕುರಿತು "ಅಯ್ಯಾ! ಜಾಗ್ರತೆಯಾಗಿ ನನಗೆ ಏನಾದರೂ ಆಹಾರವನ್ನು ಸಿದ್ಧಮಾಡಿಕೊಡು" ಎಂದು ಹೇಳಿದನು.

೭. ಈ ಮಾತನ್ನು ಕೇಳಿ ಚಿರಂದೇವನು ಒಂದು ಸೊಗಸಾದ ಜಿಂಕೆಯನ್ನು ಕೊಂದು, ಅದರಲ್ಲಿ ರಾಜನಿಗೆ ಇಷ್ಟವಾದ ಅಡಿಗೆಮಾಡಿ ಊಟಕ್ಕೆಬಡಿಸಿದನು.

೮-೧೦. ಇದರಿಂದ ಸಂತುಷ್ಟನಾದ ರಾಜನು ಚಿರಂದೇವನನ್ನು ಕುರಿತು "ನಿನಗೆ ಇಷ್ಟವಾದುದನ್ನು ಕೇಳು. ಜಾಗ್ರತೆ ಕೊಡುವೆನು" ಎಂದನು. ರಾಜನ ಈ

ತ್ವಯಾ ಸಹಸ್ರಮುದ್ರಾಶ್ಚ ಖಾದಿತಾಮಮಭೂಪತೇ ।
ಗೃಹಮಾನೀಯ ಭೂಪಾಲ ತಾಃ ಸಮರ್ಪಯ ಮಾ ಚಿರಂ ॥ ೯ ॥

ಶತಮುದ್ರಾಸ್ತು ಮಾಸಾಂತೇ ಮಹ್ಯಂ ದೇಹಿ ಕುಟುಂಬಿನೇ ।
ತಥೇತ್ಯುಕ್ತ್ವಾ ಸ ನೃಪತಿಃ ಸ್ವಗೇಹಂ ಶೀಘ್ರಮಾಯಯೌ ॥ ೧೦ ॥

ಏಕಸ್ಮಿನ್ ದಿವಸೇ ರಾಜನ್ ಸ ಚ ರಾಜಾ ಗುಣಾಧಿಪಃ ।
ಚಿರಂದೇವಂ ಸ್ವಭೃತ್ಯಂ ಚ ಪ್ರೇಷಯಾಮಾಸ ಸಾಗರೇ ॥ ೧೧ ॥

ಸ ಗತ್ವಾ ಸಾಗರತಟೇ ದೇವೀಮೂರ್ತಿಂ ದದರ್ಶ ಸಃ ।
ನಾಮ್ನಾ ಕುಸುಮದಾಂ ದೇವೀಂ ಮಾರ್ಕಂಡೇಯಸ್ಥಲಸ್ಥಿತಾಂ ॥ ೧೨ ॥

ಗಂಧರ್ವತನಯಾಂ ಸುಭ್ರೂಂ ಪೂಜಯಿತ್ವಾ ಪ್ರಸನ್ನಧೀಃ ।
ಪ್ರಾಂಜಲಿಃ ಪುರತಸ್ತಸ್ಥೌ ತದಾ ದೇವೀ ಸಮಾಗತಾ ॥ ೧೩ ॥

---

ಮಾತನ್ನು ಕೇಳಿ ಚಿರಂದೇವನು "ಎಲೈ ರಾಜನೇ! ನೀನು ನನ್ನ ವೇತನದದ ಸಾವಿರ ವರಹಗಳನ್ನೇ ಇನ್ನೂ ಕೊಟ್ಟಿಲ್ಲ.ಊರಿಗೆ ಹೋದೊಡನೆ ಅದನ್ನು ಜಾಗ್ರತೆಯಾಗಿ ನನಗೆ ಕೊಡುವ ಕೃಪೆಮಾಡು, ಕೊನೆಗೆ ಸಂಸಾರಿಯಾದ ನನಗೆ ಪ್ರತಿತಿಂಗಳಲ್ಲಿಯೂ ನೂರು ವರಹಗಳನ್ನಾದರೂ ಕೊಡು" ಎಂದು ಪ್ರಾರ್ಥಿಸಿದನು. ರಾಜನು "ಹಾಗೆಯೇ ಆಗಲೆಂದು" ಹೇಳಿ ಜಾಗ್ರತೆ ಊರಿಗೆ ಹಿಂದಿರುಗಿದನು.

೧೧–೧೩. ಅಯ್ಯಾ ರಾಜನೇ ! ಆ ಗುಣಾಧಿಪರಾಜನು ಒಂದುದಿನ ಚಿರಂದೇವ ನನ್ನೂ, ತನ್ನ ಇನ್ನೊಬ್ಬ ಸೇವಕನನ್ನೂ ಸಹ ಸಮುದ್ರತೀರಕ್ಕೆ ಕಳುಹಿಸಿದನು. ಆ ಚಿರಂದೇವನು ಸಾಗರದ ದಡಕ್ಕೆ ಬಂದು ಆ ಮಾರ್ಕಂಡೇಯಕ್ಷೇತ್ರದಲ್ಲಿರುವ ಕುಸುಮದಾ ಎಂಬ ಹೆಸರುಳ್ಳ ದೇವೀಮೂರ್ತಿಯನ್ನು ಕಂಡನು. ಗಂಧರ್ವ ಪುತ್ರಿಯೂ ಸುಂದರಿಯೂ ಆದ ಆ ದೇವಿಯನ್ನು ಪೂಜಿಸಿ, ಹರ್ಷಗೂಡಿದ ಮನಸ್ಸುಳ್ಳವನಾಗಿ ಆ ದೇವಿಯ ಮುಂದೆ ಕೈಜೋಡಿಸಿ ನಿಂತುಕೊಂಡನು. ಆಗ ದೇವಿ ಪ್ರತ್ಯಕ್ಷವಾದಳು.

**ವರಂ ವರಯ ತಂ ಪ್ರಾಹ ಚಿರಂದೇವಸ್ತು ಚಾಬ್ರವೀತ್ ।**
**ಪಾಣಿಂ ಗೃಹಾಣ ಮೇ ಸುಭ್ರೂಸ್ತ್ವದ್ರೂಪೇಣ ವಿಮೋಹಿತಃ ॥ ೧೪ ॥**

**ಇತಿ ಶ್ರುತ್ವಾ ತು ಸಾ ದೇವೀ ವಿಹಸ್ಯೋವಾಚ ಕಾಮಿನಂ ।**
**ಸ್ನಾಪಯಾದ್ಯ ಚಿರಂದೇವ ಮತ್ಕುಂಡೇ ದೇವನಿರ್ಮಿತೇ ॥ ೧೫ ॥**

**ತಥೇತ್ಯುಕ್ತ್ವಾ ಗತಸ್ತೋಯೇ ಪ್ಲಾವಿತೋ ಮಿಥಿಲಾಂ ಯಯೌ ।**
**ಸ ಸ್ಥಿತೋ ಭೂಪತಿಂ ಪ್ರಾಹ ಕಾರಣಂ ವಿಸ್ಮಯಪ್ರದಂ ॥ ೧೬ ॥**

**ಗುಣಾಧಿಪಸ್ತು ತಚ್ಛ್ರುತ್ವಾ ಸ್ವಭೃತ್ಯೈಸ್ಸಮನ್ವಿತಃ ।**
**ಪ್ರಾಪ್ತವಾನ್ಮಂದಿರೇ ದೇವ್ಯಾಃ ಸಾ ಭೂಯಃ ಪ್ರಾಹ ಪುಷ್ಪದಾ ॥ ೧೭ ॥**

**ಗಾಂಧರ್ವೇಣ ವಿವಾಹೇನ ಮಾಂ ಗೃಹಾಣ ಗುಣಾಧಿಪ ।**
**ಇತಿ ಶ್ರುತ್ವಾ ನೃಪಃ ಪ್ರಾಹ ಯದಿ ದೇವಿ ವಚೋ ಮಮ ॥ ೧೮ ॥**

---

೧೪. ಬಳಿಕ ಆಕೆಯು "ನಿನಗೆ ಬೇಕಾದ ವರವನ್ನು ಬೇಡು" ಎಂದು ಹೇಳಲು; ಚಿರಂದೇವನು "ಎಲೌ ಅಂದವಾದ ಹುಬ್ಬುಳ್ಳ ಸುಂದರಿಯೇ! ನಿನ್ನ ರೂಪಕ್ಕೆ ನಾನು ಮೋಹಗೊಂಡಿರುವೆನು. ನನ್ನನ್ನು ನೀನು ಪಾಣಿಗ್ರಹಣ ಮಾಡು" ಎಂದು ಕೇಳಿದನು.

೧೫. ಈ ಮಾತನ್ನು ಕೇಳಿ ದೇವಿಯು ನಕ್ಕು ಕಾಮುಕನಾದ ಅವನನ್ನು ಕುರಿತು "ನೀನು ದೇವನಿರ್ಮಿತವಾದ ಈ ದೇವೀಕುಂಡದಲ್ಲಿ ಈಗ ಸ್ನಾನಮಾಡು" ಎಂದು ಹೇಳಿದಳು.

೧೬. ಚಿರಂದೇವನು "ಹಾಗೆಯೇ ಆಗಲಿ" ಎಂದು ಹೇಳಿ ಅಲ್ಲಿ ನೀರಿಗೆ ಇಳಿದು ಶರೀರವನ್ನು ಅದ್ದಲು ಅಷ್ಟು ಮಾತ್ರದಿಂದಲೇ ಅವನು ಮಿಥಿಲಾಪಟ್ಟಣದಲ್ಲಿ ಎದ್ದನು. ಆಗ ಅವನು ಅಲ್ಲಿನ ರಾಜನಸಮ್ಮುಖಕ್ಕೆ ಹೋಗಿ ನಿಂತುಕೊಂಡು ಆಶ್ಚರ್ಯಕರವಾದ ಈ ಕಾರ್ಯಕ್ಕೆ ಕಾರಣವನ್ನು ವಿಚಾರಿಸಿದನು.

೧೭-೨೦. ಗುಣಾಧಿಪನು ಈ ಮಾತನ್ನು ಕೇಳಿ ಸೇವಕರೊಡನೆ ಹೊರಟು ಕುಸುಮದಾದೇವೀಮಂದಿರಕ್ಕೆ ಬಂದು ಪೂಜಿಸಿದನು. ಆಗ ದೇವಿಯು ಪುನಃ ಗುಣಾಧಿಪನನ್ನು ಕುರಿತು "ಈಗ ನೀನು ನನ್ನನ್ನು ಗಾಂಧರ್ವವಿಧಿಯಿಂದ ವರಿಸು"

ಪುಣ್ಯದೇ ತ್ವಂ ಗೃಹಾಣಾದ್ಯ ತರ್ಹಿ ತ್ವಾಂ ಸಂಭಜಾಮ್ಯಹಂ ।
ತಥೇತಿ ಮುಕ್ತ್ವಾ ತಂ ಪ್ರಾಹ ಸತ್ವಂ ಕಾರ್ಯಂ ನಿವೇದಯ ॥ ೧೯ ॥

ಸ ಹೋವಾಚ ಶೃಣು ತ್ವಂ ಭೋ ಮಮ ಭೃತ್ಯಂ ಚಿರಂ ಸುರಂ ।
ಭಜ ತ್ವಂ ಚಪಲಾಪಾಂಗಿ ದೇವಿ ಸತ್ಯಂ ವಚಃ ಕುರು ॥ ೨೦ ॥

ವ್ರೀಡಿತಾ ತು ಕಥಾಂ ಕೃತ್ವಾ ಭೂಪತಿಂ ಪ್ರಾಹ ಕಾಮಿನೀ ।
ಮಾಂ ಭಜಸ್ವ ದಯಾಸಿಂಧೋ ಕಾಮಿನೀಂ ಶಕ್ರಚೋದಿತಾಂ ॥ ೨೧ ॥

ಚಿರಂದೇವಂ ತು ಸಂಪ್ರಾಪ್ಯ ಕಾಮಾಂಧಾ ತ್ವಾಂ ಸಮಾಗತಾ ।
ಪುಷ್ಪದಂತಸ್ಯ ತನಯಾ ಗಂಧರ್ವಸ್ಯ ಶುಭಾನನಾ ॥ ೨೨ ॥

---

ಎಂದು ಹೇಳಿದಳು. ದೇವಿಯು ಹೇಳಿದ ಈ ಮಾತನ್ನು ಕೇಳಿ ರಾಜನು "ದೇವಿಯೇ! ಹಾಗಾದರೆ ಪುಣ್ಯಮಯಿಯಾದ ನೀನು ಈಗ ನನ್ನ ಮಾತನ್ನು ಕೇಳು. ಆಮೇಲೆ ನಿನ್ನನ್ನು ವರಿಸುವೆನು" ಎಂದು ಹೇಳಿದನು. ದೇವಿಯು "ಹಾಗೆಯೇ ಆಗಲಿ" ಎಂದು ಒಪ್ಪಿ, "ಅದು ಯಾವ ಕಾರ್ಯ ಎಂಬುದನ್ನು ಹೇಳು" ಎಂದು ಕೇಳಿದಳು. ಆಗ ಗುಣಾಧಿಪನು ದೇವಿಯನ್ನು ಕುರಿತು "ನೀನು ನನ್ನ ಭೃತ್ಯನಾದ ಚಿರಂದೇವನನ್ನು ಜಾಗ್ರತೆಯಾಗಿ ವರಿಸು, ಎಲೌ ಚಂಚಲ ನೇತ್ರೆಯೇ! ನೀನು ಆಡಿದ ಮಾತನ್ನು ಸತ್ಯವಾಗಿ ನಡೆಸು" ಎಂದು ಹೇಳಿದನು.

೨೧. ಆಗ ದೇವಿಯು ನಾಚಿಕೆಗೊಂಡು ಒಂದು ಕಥೆಯನ್ನು ಕಲ್ಪಿಸಿ ರಾಜನನ್ನು ಕುರಿತು "ದಯಾಸಮುದ್ರನಾದ ಪ್ರಭುವೇ! ಇಂದ್ರನಿಂದ ಪ್ರೇರಿತಳಾಗಿ ಬಂದಿರುವ ನನ್ನನ್ನು ನೀನೇ ಅನುಭವಿಸು."

೨೨. "ನಾನು ಚಿರಂದೇವನನ್ನು ವರಿಸಿ ಕಾಮಾಂಧಳಾಗಿ ನಿನ್ನ ಬಳಿಯೂ ಬಂದಿರುವೆನು. ಸುಂದರಿಯಾದ ನಾನು ಪುಷ್ಪದಂತನೆಂಬ ಗಂಧರ್ವನ ಮಗಳು. ನನ್ನನ್ನು ಇಂದ್ರನು ಶಪಿಸಿದುದರಿಂದ ಆ ಶಾಪಕ್ಕಾಗಿ ಮನುಷ್ಯರೊಡನೆ ಭೋಗ ಪಡಬೇಕಾಗಿದೆ" ಎಂದಳು

**ಶಾಪಿತಾ ದೇವದೇವೇನ ನರಭೋಗಕರೀ ಹ್ಯಹಂ ।**
**ಇತಿ ಶ್ರುತ್ವಾ ಸ ಭೂಪಾಲೋ ಧರ್ಮಾತ್ಮಾ ಶೀಲವಿಗ್ರಹಃ ॥ ೨೩ ॥**

**ಕಥಂ ಭಜಾಮ್ಯಹಂ ಸುಭ್ರೂಃ ಸ್ನುಷಾಮಿವ ಸುಧರ್ಮಿಣೀಂ ।**
**ಚಿರಂದೇವಸ್ತು ರಾಜನ್ಯೋ ಮತ್ಪುತ್ರ ಇವ ವರ್ತತೇ ॥ ೨೪ ॥**

**ತಸ್ಯ ತ್ವಂ ಭೋಗಿನೀ ನಾರೀ ಶೋಭನೇ ತ್ವಂ ವಿಚಾರಯ ।**
**ಲಜ್ಜಿತಾ ಸಾ ತದಾ ದೇವೀ ಸ್ನುಷೇವ ಚ ವವರ್ತ ವೈ ॥ ೨೫ ॥**

**ಇತ್ಯುಕ್ತ್ವಾ ಭೂಪತಿಂ ಪ್ರಾಹ ವೈತಾಲೋ ರುದ್ರಕಿಂಕರಃ ।**
**ಸತ್ಯಂ ಧರ್ಮಂ ಚ ಕಸ್ಯೈವ ಜಾತಂ ತನ್ಮೇ ವದಸ್ವ ಭೋಃ ॥ ೨೬ ॥**

**॥ ಸೂತ ಉವಾಚ ॥**

**ಭೂಪತಿಸ್ತಂ ವಿಹಸ್ಯಾಹ ಚಿರಂದೇವಸ್ಯ ಜಾಯತೇ ।**
**ಸತ್ಯಂ ಧರ್ಮಂ ಚ ವೈತಾಲ ಶೃಣು ತತ್ಕಾರಣಂ ಶುಭಂ ॥ ೨೭ ॥**

---

೨೩. ಈ ಮಾತನ್ನು ಕೇಳಿ, ಶೀಲವೇ ಮೂರ್ತಿಮತ್ತಾಗಿ ಒಂದಂತಿರುವವನೂ ಧರ್ಮಿಷ್ಠನೂ ಆದ ಗುಣಾಧಿಪನು "ಎಲೌ ಸುಂದರವಾದ ಹುಬ್ಬುಳ್ಳ ದೇವಿಯೇ! ನನ್ನ ಸೊಸೆಯಂತಿರುವ ನಿನ್ನನ್ನು ನಾನು ಹೊಂದುವುದು ಹೇಗೆ ಸಾಧ್ಯ.?"

೨೪. "ಚಿರಂದೇವನು ಕ್ಷತ್ರಿಯನು, ನನ್ನ ಪುತ್ರಸದೃಶನಾಗಿರುವನು. ನೀನು ಅವನಿಂದಲೇ ಅನುಭವಿಸಲು ಯೋಗ್ಯಳು. ಎಲೌ ಸುಂದರಾಂಗಿಯೇ! ಚೆನ್ನಾಗಿ ವಿಮರ್ಶಿಸಿ ನಾನು ಹೇಳಿದಂತೆ ನೀನು ನಡೆದುಕೋ" ಎಂದು ಹೇಳಿದನು.

೨೫-೨೬. ಆಗ ಲಜ್ಜೆಗೊಂಡ ಕುಸುಮದಾದೇವಿಯು ಸೊಸೆಯಂತೆ ವರ್ತಿಸಿದಳು. ಹೀಗೆ ಹೇಳಿ ರುದ್ರಕಿಂಕರನಾದ ಬೇತಾಳವು ರಾಜನನ್ನು ಕುರಿತು "ಇವರಲ್ಲಿ ಯಾರದ್ದು ಸತ್ಯ, ಯಾರದ್ದು ಧರ್ಮ ಎಂಬುದನ್ನು ತಿಳಿಸು" ಎಂದು ಕೇಳಿತು.

೨೭. ಆಗ ವಿಕ್ರಮನು ನಕ್ಕು ಬೇತಾಳವನ್ನು ಕುರಿತು ಎಲೈ ಬೇತಾಳವೇ! "ಸತ್ಯ, ಧರ್ಮ ಇವೆರಡೂ ಕೂಡ ಚಿರಂದೇವನಿಗೇ ಸಲ್ಲುವುದು ಅದಕ್ಕೆ ಸರಿಯಾದ ಕಾರಣವನ್ನು ಹೇಳುವೆನು ಕೇಳು."

ನೃಪಾಣಾಂ ಪರಮಂ ಧರ್ಮಂ ಸರ್ವೋಪಕರಣಂ ಸ್ಮೃತಂ ।
ಕೃತೋಪಕಾರಂ ಭೃತ್ಯಸ್ಯ ತೇನ ತತ್ಕಿಂ ಹಿ ಸತ್ಯತಾ ॥ ೨೮ ॥

ಭೃತ್ಯೇನ ಚ ಕೃತಂ ಕರ್ಮ ತಚ್ಛೃಣುಷ್ವ ವದಾಮ್ಯಹಂ ।
ವಿನಾ ವೃತ್ತಿಂ ಸ್ಥಿತೋ ಗೇಹೇ ಭೂಪತೇರ್ಗುಣಶಾಲಿನಃ ॥ ೨೯ ॥

ಸೇವಾವೃತ್ತಿಂ ಕೃತಾ ಸರ್ವಾ ಯಥಾನ್ಯೈರ್ನ ನರೈಃ ಕೃತಾ ।
ಪಶ್ಚಾದ್ಭೂಪತಿನಾ ಜ್ಞಾತಃ ಸಂಕಟೇ ಮಹದಾಗತೇ ।
ಚಿರಂದೇವಸ್ತು ತಸ್ಮಾಚ್ಚ ಕಾರಣಾದಧಿಕೋ ಮತಃ ॥ ೩೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಅಷ್ಟಮೋಽಧ್ಯಾಯಃ



---

೨೮. "ಎಲ್ಲರಿಗೂ ಉಪಕಾರಮಾಡುವುದೇ ರಾಜನಿಗೆ ಮುಖ್ಯ ಧರ್ಮವೆಂದು ಹೇಳಿದೆ. ಸೇವಕನಿಂದ ತಾನೇ ಉಪಕಾರಮಾಡಿಸಿಕೊಂಡು ಪುನಃ ಉಪಕಾರಮಾಡಿದರೆ ಪ್ರತ್ಯುಪಕಾರ ಮಾಡಿದಂತಾಯಿತೇ ವಿನಾ ಸತ್ಯವೇನು ಬಂತು."

೨೯-೩೦. "ಸೇವಕನಿಂದ ಏನು ಉಪಕಾರವಾಯಿತೆಂಬುದನ್ನು ಹೇಳುವೆನು ಕೇಳು ಗುಣಶಾಲಿಯಾದ ರಾಜನ ಮನೆಯಲ್ಲಿ ಇತರರ್ಯಾರೂ ಮಾಡದೆ ಇದ್ದ ರೀತಿ ವೇತನವಿಲ್ಲದ ಸೇವೆಯನ್ನು ಈ ಚಿರಂದೇವನು ಮಾಡಿದನು ಕೊನೆಯಲ್ಲಿ ತುಂಬಾ ಕಷ್ಟ ಒದಗಿದಾಗ ರಾಜನಿಗೆ ಈ ವಿಷಯ ತಿಳಿಯಿತು. ಈ ಕಾರಣಕ್ಕಾಗಿ ರಾಜನಿಗಿಂತಲೂ ಚಿರಂದೇವನೇ ಶ್ರೇಷ್ಠನೆನಿಸುವನು. ಆದುದರಿಂದ ಅವನ ಸತ್ಯ ಧರ್ಮ ಇವೇ ಶ್ರೇಷ್ಠವೆಂದು ಹೇಳಬೇಕು" ಎಂದು ತಿಳಿಸಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ ಖಂಡದಲ್ಲಿ ಕಲಿಯುಗದ ಇತಿಹಾಸಗಳೆಂಬ ಎಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
# ನವಮೋಽಧ್ಯಾಯಃ

॥ ಸೂತ ಉವಾಚ ॥

ಭೋಃ ಶೌನಕ ಮಹಾಬುದ್ಧೇ ವೈತಾಲೇನ ಮಹೀಪತಿಃ ।
ಮಹಾಪ್ರವೀಣಶ್ಚ ಮತಸ್ತಮಾಹ ಸ ಚ ಭೂಪತಿಂ ॥ ೧ ॥

ರಾಜನ್ ಕಾಮಪುರೇ ರಮ್ಯೇ ವೀರಸಿಂಹೋ ಮಹೀಪತಿಃ ।
ನ್ಯಾಯತೋ ಧರ್ಮತಶ್ಚೈವ ತತ್ರ ರಾಜ್ಯಮಚೀಕರತ್ ॥ ೨ ॥

ಹಿರಣ್ಯದತ್ತಸ್ತತ್ರೈವ ವೈಶ್ಯೋ ಧನಮದಾನ್ವಿತಃ ।
ಕಾಮಾಲಸಾ ತಸ್ಯ ಸುತಾ ರೂಪಯೌವನಶಾಲಿನೀ ॥ ೩ ॥

---

## ಒಂಭತ್ತನೆಯ ಅಧ್ಯಾಯ

೧. ಸೂತಪುರಾಣಿಕನು ಹೇಳುತ್ತಾನೆ-ಮಹಾಬುದ್ಧಿಶಾಲಿಯಾದ ಶೌನಕ, ಆಗ ವಿಕ್ರಮರಾಜನು ಬೇತಾಳನಿಂದ ಮಹಾಪ್ರವೀಣನಿದ್ದೀ ಎಂದು ಹೊಗಳಿಸಿಕೊಂಡನು.

೨. ಬಳಿಕ ಭೂಪತಿಯನ್ನು ಕುರಿತು ಬೇತಾಳವು “ಅಯ್ಯಾ ರಾಜನೆ ! ಕಾಮಪುರವೆಂಬ ರಮ್ಯವಾದ ಪಟ್ಟಣವೊಂದು ಇದ್ದಿತು. ಅಲ್ಲಿ ವೀರಸಿಂಹನೆಂಬ ರಾಜನು ನ್ಯಾಯದಿಂದಲೂ ಧರ್ಮದಿಂದಲೂ ರಾಜ್ಯವಾಳುತ್ತಿದ್ದನು.

೩. ಆ ಪಟ್ಟಣದಲ್ಲಿ ಹಿರಣ್ಯದತ್ತನೆಂಬ ವೈಶ್ಯನಿದ್ದನು, ಅವನು ತನ್ನಲ್ಲಿ ತುಂಬಾ ಧನವಿದೆಯೆಂಬ ಅಹಂಕಾರವುಳ್ಳವನಾಗಿದ್ದನು. ಅವನಿಗೆ ರೂಪವತಿಯೂ ಪ್ರಾಯಸಮರ್ಥೆಯೂ ಆದ ಕಾಮಾಲಸೆಯೆಂಬ ಮಗಳು ಸುಖದಿಂದ ಬೆಳೆದಿದ್ದಳು.

ಅವಸತ್ಸುಖತೋ ನಿತ್ಯಂ ವಸಂತೇ ಕುಸುಮಪ್ರಿಯಾ ।
ಕದಾಚಿತ್ಕುಸುಮಾರ್ಥಂ ವೈ ವನಂ ಭ್ರಮರನಾದಿತಂ ॥ ೪ ॥

ಗಚ್ಛಂತೀಂ ತಾಂ ಸಮಾಲೋಕ್ಯ ಧರ್ಮದತ್ತಾತ್ಮಜೋ ಬಲೀ ।
ಸೋಮದತ್ತ ಇತಿ ಖ್ಯಾತಃ ಪಸ್ಪರ್ಶ ಮದನಾಲಸಾಂ ॥ ೫ ॥

ಸಾ ತು ತಂ ನಿರ್ಜನೇ ಸ್ಥಾನೇ ಪ್ರೋವಾಚ ವಿನಯಾನ್ವಿತಾ ।
ಕನ್ಯಕಾಹಂ ಮಹಾವೀರ ತ್ಯಜ ಮಾಂ ಧರ್ಮತೋಽದ್ಯ ಭೋಃ ॥ ೬ ॥

ವಿವಾಹೇ ಸತಿ ಪೂರ್ವಂ ತ್ವಾಂ ಭಜಾಮಿ ದಶಮೇಽಹನಿ ।
ಅತೋ ದಶದಿನಸ್ಯೈವಾದೇಶಂ ದೇಹಿ ದಯಾನಿಧೇ ॥ ೭ ॥

ತಥೇತಿ ಮತ್ವಾ ತಾಂ ತ್ಯಕ್ತ್ವಾ ನಿಜಗೇಹಂ ಸಮಾಗತಃ ।
ಕಾಮಾಲಸಾ ತು ತದ್ಗ್ರಾಮೇ ಪಿತ್ರಾ ದತ್ತಾ ವರಾಯ ಚ ॥ ೮ ॥

---

೪. ಹೂವಿನಲ್ಲಿ ಆಶೆಯುಳ್ಳ ಅವಳು ವಸಂತಕಾಲದಲ್ಲಿ ಒಂದುದಿನ ಹೂವನ್ನು ಕುಯ್ಯುವುದಕ್ಕಾಗಿ ಒಂದು ವನಕ್ಕೆ ಹೋದಳು. ಅಲ್ಲಿ ಭ್ರಮರಗಳ ಝೇಂಕಾರವು ಸರ್ವತ್ರವ್ಯಾಪಿಸಿತ್ತು.

೫. ಧರ್ಮತ್ತನೆಂಬ ವೈಶ್ಯಪುತ್ರನೂ ಬಲಶಾಲಿಯೆಂದು ಪ್ರಸಿದ್ಧನೂ ಆದ ಸೋಮದತ್ತನೆಂಬವನು ಹಾಗೆ ಹೋಗುತ್ತಿರುವ ಅವಳನ್ನು ನೋಡಿ ಆ ಮದನಾಲಸೆಯನ್ನು ಸೋಂಕಿದನು.

೬. ನಿರ್ಜನವಾದ ಆ ಸ್ಥಳದಲ್ಲಿ ಹಾಗೆ ಸಂಧಿಸಿದ ಆಕೆಯು ವಿನಯವುಳ್ಳವಳಾಗಿ "ಎಲೈ ಮಹಾಬಲಶಾಲಿಯೆ! ನಾನು ಅವಿವಾಹಿತೆಯಾದ ಕನ್ಯೆ, ಆದುದರಿಂದ ನನ್ನನ್ನು ಬಿಟ್ಟುಬಿಡುವುದು ಧರ್ಮ.

೭. ಒಂದುಪಕ್ಷ ನನಗೆ ವಿವಾಹವಾದಾಗ್ಯೂ ಅಂದಿನಿಂದ ಹತ್ತನೆಯದಿನ ಬಂದು ನಾನು ನಿನ್ನನ್ನು ಸೇವಿಸುವೆನು. ಅಯ್ಯಾ ಕರುಣಾಳುವೇ! ಹತ್ತುದಿನಗಳ ಮಟ್ಟಿಗೆ ದಯೆಯಿಟ್ಟು ಅವಕಾಶಕೊಡು" ಎಂದು ಕೇಳಿಕೊಂಡಳು.

೮. ಅದಕ್ಕೆ ಅವನು "ಹಾಗೆಯೇ ಆಗಲಿ" ಎಂದು ಸಮ್ಮತಿಸಿ ಆಕೆಯನ್ನು ಬಿಟ್ಟುಬಿಟ್ಟು ಹಿಂದಿರುಗಿ ತನ್ನ ಮನೆಗೆ ಬಂದನು. ಇತ್ತ ಕಾಮಾಲಸೆಯ ತಂದೆಯು ಅದೇ ಊರಿನಲ್ಲಿದ್ದ ಮಣಿಗ್ರೀವನೆಂಬ ವೈಶ್ಯನ ಪುತ್ರನಾದ ಮದಪಾಲನೆಂಬವನಿಗೆ ಆಕೆಯನ್ನು ಕೊಟ್ಟು ಮದುವೆಮಾಡಿದನು.

ಮದಪಾಲಾಯ ವೈಶ್ಯಾಯ ಮಣಿಗ್ರೀವಸುತಾಯ ಚ ।
ಶ್ವಶುರಸ್ಯ ಗೃಹಂ ಗತ್ವಾ ಸ್ವಮಿತ್ರಂ ಪ್ರತ್ಯಚಿಂತಯತ್ ॥ ೯ ॥

ನವಮೇऽಹನಿ ತತ್ಸ್ವಾಮೀ ಗೃಹೀತ್ವಾ ಕಾಮಿನೀಂ ಬಲಾತ್ ।
ಕಾಮಾತುರಃ ಸ ಪತ್ನೀಂ ತಾಮಾಲಿಲಿಂಗ ಮುದಾನ್ವಿತಃ ॥ ೧೦ ॥

ಅರುದತ್ಸಾ ತು ತತ್ಪತ್ನೀ ಮಿತ್ರವಾಕ್ಯೇನ ಕರ್ಷಿತಾ ।
ತಾಮುವಾಚ ತದಾ ವೈಶ್ಯಃ ಶಾಂತಿಪೂರ್ವಮಿದಂ ವಚಃ ॥ ೧೧ ॥

ಕಿಂ ರೋದಿಷಿ ಮದಾಘೂರ್ಣೇ ಸತ್ಯಂ ಕಥಯ ಶೋಭನೇ ।
ಸಾ ತು ಸತ್ಯವತೀ ಪ್ರಾಹ ಯಥಾಜಾತಂ ಹಿ ಕಾನನೇ ॥ ೧೨ ॥

ಯದಿ ನಾಯಾಮಿ ಪಾರ್ಶ್ವೇ ತ್ವಾಂ ಸೋಮದತ್ತ ಧನೋತ್ತಮ ।
ತದಾ ವೈಧವ್ಯತಾಂ ಪ್ರಾಪ್ಯ ಭಜಾಮಿ ವೃಜಿನಂ ಹಿ ತತ್ ॥ ೧೩ ॥

---

೯. ಆಕೆಯು ತನ್ನ ಮಾವನ ಮನೆಗೆ ಹೋದಮೇಲೆ ತಾನು ಅಂದು ಸೋಮದತ್ತನಿಗೆ ಹೇಳಿದ್ದ ಮಾತನ್ನು ಜ್ಞಾಪಿಸಿಕೊಂಡಳು.

೧೦. ವಿವಾಹವಾದ ಒಂಭತ್ತನೆಯದಿನ ಆಕೆಯ ಪತಿಯು ಕಾಮಾತುರತೆಯಿಂದ ಮದನೇರಿದವನಾಗಿ ಗಾಢಾಲಿಂಗನ ಮಾಡಿದನು.

೧೧. ಆಕೆಯು ಸೋಮದತ್ತನಿಗೆ ಮಾಡಿದ್ದ ವಾಗ್ದಾನಕ್ಕೆ ಕಟ್ಟುಬಿದ್ದಿದ್ದುದರಿಂದ ಆಗ ರೋದನಮಾಡತೊಡಗಿದಳು. ಆಗ ಮದಪಾಲನು ಶಾಂತಮನಸ್ಸಿನಿಂದ ಕೂಡಿ ಅವಳನ್ನು ಕುರಿತು,

೧೨-೧೩. "ಎಲೌ ಮದೋನ್ಮತ್ತೆಯಾದ ಶೋಭನಾಂಗಿಯೇ! ನೀನು ಏತಕ್ಕಾಗಿ ಅಳುತ್ತೀಯೆ ಎಂಬುದನ್ನು ಸತ್ಯವಾಗಿ ಹೇಳಿಬಿಡು" ಎಂದನು. ಅದನ್ನು ಕೇಳಿ ಸತ್ಯವಾಕ್ಕುಳ್ಳ ಆಕೆಯು ಹಿಂದೆ ತಾನು ವನಕ್ಕೆ ಹೋಗಿದ್ದಾಗ ನಡೆದ ವಿಚಾರವನ್ನೂ ಆಡಿದಮಾತನ್ನೂ ವಿವರವಾಗಿ ಹೇಳುವಳಾಗಿ "ಎಲೈ ಧನಿಕನಾದ ಸೋಮದತ್ತನೇ! ಹತ್ತನೆಯದಿನ ನಿನ್ನ ಸಮೀಪಕ್ಕೆ ನಾನು ಬಾರದೆ ಹೋದರೆ ವೈಧವ್ಯಹೊಂದಿ ಪಾಪಿಯಾಗುವೆನು" ಎಂದಿದ್ದೆನು. ಈ ವಾಕ್ಯಕ್ಕೆ ಬದ್ಧಳಾದ ನಾನು ಅವನ ಸಮೀಪಕ್ಕೆ ಹೋಗಬೇಕು. ಎಂದು ಪತಿಗೆ ತಿಳಿಸಿದಳು. ಈ ಮಾತನ್ನು ಕೇಳಿ ಅವಳ

**ಇತಿ ವಾಕ್ಯೇನ ಬದ್ಧಾಹಂ ಯಾಸ್ಯಾಮ್ಯದ್ಯ ತದಂತಿಕೇ ।**
**ಇತಿ ಶ್ರುತ್ವಾ ಚ ತತ್ಸ್ವಾಮೀ ತಾಮಾಜ್ಞಾಪ್ಯ ಮುದಾನ್ವಿತಃ ॥ ೧೪ ॥**

**ಸುಷ್ವಾಪ ಸಾ ತು ತತ್ಪಾರ್ಶ್ವೇ ಹ್ಯಗಮತ್ಕಾಮವಿಹ್ವಲಾ ।**
**ತದಾ ಚೌರಸ್ತು ತಾಂ ದೃಷ್ಟ್ವಾ ಸರ್ವಾಭರಣಭೂಷಿತಾಂ ॥ ೧೫ ॥**

**ವಚಶ್ಚೋವಾಚ ಲೋಭಾತ್ಮಾ ಕುತ್ರ ಯಾಸಿ ಚ ಸುಂದರಿ ।**
**ಕೇನೈವಾಪೇಕ್ಷಿತಾ ರಾತ್ರೌ ಸತ್ಯಂ ಕಥಯ ಭಾಮಿನಿ ॥ ೧೬ ॥**

**ಕಾಮಾಲಸಾ ತು ತಂ ಚೌರಮುವಾಚ ಮದವಿಹ್ವಲಾ ।**
**ರಕ್ಷಿತಾ ಕಾಮಬಾಣೇನ ಸ್ವಮಿತ್ರಂ ಪ್ರತಿ ಯಾಮಿ ಭೋಃ ॥ ೧೭ ॥**

**ಚೌರಸ್ತಾಮಾಹ ಭೋಃ ಸುಭ್ರೂರ್ಭೂಷಣಂ ದೇಹಿ ಮೇಽಬಲೇ ।**
**ಚೌರೋಽಹಂ ತೇ ಧನಗ್ರಾಹೀ ಸಾ ಶ್ರುತ್ವಾ ವಾಕ್ಯಮಬ್ರವೀತ್ ॥ ೧೮ ॥**

---

ಪತಿಯು ಸಂತೋಷಪಟ್ಟು ಆಕೆಗೆ ಅಲ್ಲಿಗೆ ಹೋಗಲು ಅನುಮತಿಕೊಟ್ಟು ತಾನು ನಿದ್ದೆ ಹೋದನು.

೧೫. ಅನಂತರ ಕಾಮಾತುರೆಯಾದ ಕಾಮಾಲಸೆಯು ಸೋಮದತ್ತನ ಸಮೀಪಕ್ಕೆ ಸೇರುವುದಕ್ಕಾಗಿ ಅಂಥ ನಿಶಿಯ ಸಮಯದಲ್ಲಿ ಸರ್ವಾಲಂಕಾರ ಭೂಷಿತೆ ಯಾಗಿ ಹೊರಟಳು.

೧೬. ಆ ಹೊತ್ತಿನಲ್ಲಿ ಏಕಾಕಿಯಾಗಿದ್ದ ಕಾಮಾಲಸೆಯನ್ನು ನೋಡಿದ ಲೋಭಿ ಯಾದ ಒಬ್ಬ ಕಳ್ಳನು “ ಎಲೌ ಸುಂದರೀ ! ಎಲ್ಲಿಗೆ ಹೋಗುವೆ, ಇಂತಹ ರಾತ್ರಿಯಲ್ಲಿ ನಿನ್ನನ್ನು ಅಪೇಕ್ಷಿಸಿದವನಾರು ? ” ಎಂದು ಕೇಳಿದನು. ಆಗ ಮದೋನ್ಮತ್ತೆಯಾದ ಕಾಮಾಲಸೆಯು ಅವನನ್ನು ಕುರಿತು,

೧೭. “ ಮದನನ ಬಾಣದಿಂದ ರಕ್ಷಿತೆಯಾದ ನಾನು ನನ್ನ ಸ್ನೇಹಿತನಬಳಿಗೆ ಹೋಗುತ್ತಿದ್ದೇನೆ” ಎಂದು ಹೇಳಿದಳು.

೧೮. ಆಗ ಕಳ್ಳನು ಆಕೆಯನ್ನು ಕುರಿತು “ ಎಲೌ ಅಂದವಾದ ಹುಬ್ಬು ಗಳುಳ್ಳ ಸುಂದರೀ ! ನಿನ್ನ ಆಭರಣಗಳನ್ನು ತೆಗೆದುಕೊಡು, ನಾನು ಧನವನ್ನು ಆಶಿಸುವ ಕಳ್ಳನು ” ಎಂದು ಹೇಳಿದನು.

**ಆಲಿಂಗ್ಯೋಪಪತಿಂ ಮಿತ್ರಂ ತುಭ್ಯಂ ದಾಸ್ಯಾಮಿ ಭೂಷಣಂ ।**
**ತಥೇತ್ಯುಕ್ತ್ವಾ ತು ತೇನೈವ ಸೋಮದತ್ತಂ ಸಮಾಗತಾ　　॥ ೧೯ ॥**

**ದೃಷ್ಟ್ವಾ ತಾಮಬ್ರವೀದ್ವೈಶ್ಯಃ ಕಥಂ ಯಾತಾ ಸ್ಮರಾಲಸೇ ।**
**ಸತ್ಯಂ ಕಥಯ ಮೇ ಶೀಘ್ರಂ ತತ್ಪಶ್ಚಾತ್ತ್ವಾಂ ಭಜಾಮ್ಯಹಂ　　॥ ೨೦ ॥**

**ಕಾಮಾಲಸಾ ತು ತಚ್ಛ್ರುತ್ವಾ ಯಥಾಜಾತಂ ತಥಾಬ್ರವೀತ್ ।**
**ಶ್ರುತ್ವಾ ಸ ಜ್ಞಾನ ಹೃದಯೋ ವಿಷ್ಣುದೇವೇನ ಬೋಧಿತಃ　　॥ ೨೧ ॥**

**ಮತ್ವಾ ಪತಿವ್ರತಾಂ ನಾರೀಂ ಪರಿಕ್ರಮ್ಯ ವ್ಯಸರ್ಜಯತ್ ।**
**ಚೌರಸ್ತು ಕಾರಣಂ ಶ್ರುತ್ವಾ ವಿಷ್ಣುದೇವೇನ ಬೋಧಿತಃ　　॥ ೨೨ ॥**

**ಗೇಹೇ ಪ್ರವೇಶಯಾಮಾಸ ತತ್ಪತಿರ್ಯತ್ರ ತಿಷ್ಠತಿ ।**
**ಸಾ ತು ಕಾಮಾಲಸಾ ದೇವೀ ಸ್ವಪಾತಿವ್ರತ್ಯಧರ್ಮಿಣೀ　　॥ ೨೩ ॥**

---

೧೯. ಆದಕ್ಕೆ ಆಕೆಯು "ನನ್ನ ಉಪಪತಿಯೂ, ಮಿತ್ರನೂ ಆದ ಸೋಮದತ್ತನನ್ನು ಆಲಿಂಗಿಸಿ ತುಷ್ಟಿಪಡಿಸಿದನಂತರ ನಿನಗೆ ನನ್ನ ಅಭರಣವನ್ನು ಕೊಡುವೆನು" ಎಂದು ಹೇಳಿ ಅವನ ಜತೆಯೇ ಸೋಮದತ್ತನ ಮನೆಗೆ ಹೋದಳು.

೨೦. ಆವೇಳೆಯಲ್ಲಿ ಬಂದಿರುವ ಕಾಮಾಲಸೆಯನ್ನು ನೋಡಿ ಸೋಮದತ್ತನು "ಎಲೌ ಸುಂದರಿಯಾದ ಕಾಮಾಲಸೇ ! ಇಷ್ಟು ಹೊತ್ತಿನಲ್ಲಿ ನೀನು ಹೇಗೆ ಬಂದೆ ? ಎಲೇ ಕಾಮಾತುರೆಯೇ ! ಜಾಗ್ರತೆ ನಿಜಾಂಶವನ್ನು ತಿಳಿಸು, ಆಮೇಲೆ ನಾನು ನಿನ್ನ ಒಡಗೂಡುವೆನು" ಎಂದನು.

೨೧ ಅದನ್ನು ಕೇಳಿ ಕಾಮಾಲಸೆಯು ಅಂದು ನಡೆದ ಸಂಗತಿಯೆಲ್ಲವನ್ನೂ ಸ್ವಲ್ಪವೂ ಮರೆಮಾಚದೆ ಹೇಳಿದಳು. ಜ್ಞಾನದೃಷ್ಟಿಯುಳ್ಳ ಸೋಮದತ್ತನು ಆ ಮಾತನ್ನು ಕೇಳಿ ಪರಮಾತ್ಮ ಪ್ರೇರಣೆಯಿಂದ ಜ್ಞಾನೋದಯವಾದವನಾಗಿ,

೨೨. ಆಕೆಯು ಮಹಾಪತಿವ್ರತೆಯೆಂದು ತಿಳಿದು, ಆವಳನ್ನು ಗೌರವದಿಂದ ಹಿಂದಕ್ಕೆ ಕಳುಹಿಸಿಕೊಟ್ಟನು. ಕಳ್ಳನೂ ಕೂಡ ಪರಮಾತ್ಮನಿಂದ ಪ್ರೇರಿತನಾಗಿ ಆಕೆ ಮಹಾಪತಿವ್ರತೆಯೆಂದು ಭಾವಿಸಿ ಆಕೆಯ ಪತಿಯ ಮನೆಗೆ ಕರೆತಂದುಬಿಟ್ಟನು.

೨೩-೨೫. ಅನಂತರ ಆ ಕಾಮಾಲಸೆಯು ತನ್ನ ಪಾತಿವ್ರತ್ಯಧರ್ಮದಿಂದ ಬ್ರಹ್ಮನಿರೂಪಿತವಾದ ಅನೇಕ ದಿವ್ಯಭೋಗಗಳನ್ನು ಅನುಭವಿಸಿದಳು, ಎಂಬದಾಗಿ

ಬುಭುಜೇ ವಿಷಯಾನ್ ದಿವ್ಯಾನ್ ದೇವದೇವೇನ ಚೋದಿತಾನ್ ।
ಇತ್ಯುಕ್ತ್ವಾ ಸ ತು ವೈತಾಲೋ ನೃಪತಿಂ ಪ್ರಾಹ ಕೋವಿದಂ ॥ ೨೪ ॥

ಕಸ್ಯ ಸತ್ಯಂ ಸ್ಮೃತಂ ಶ್ರೇಷ್ಠಂ ತೇಷಾಂ ಮಧ್ಯೇ ವದಸ್ವ ಮೇ ।

॥ ಸೂತ ಉವಾಚ ॥

ಇತ್ಯುಕ್ತಃ ಸ ತು ಭೂಪಾಲೋ ವೈತಾಲಮಿದಮಬ್ರವೀತ್ ॥ ೨೫ ॥

ಚೋರಸ್ಯ ಸತ್ಯತಾ ಶ್ರೇಷ್ಠಾ ಯಥಾ ಜಾತಾ ತಥಾ ಶೃಣು ।
ನೃಪಭೀತ್ಯಾ ಸ ವೈಶ್ಯಸ್ತು ತಾಂ ನಾರೀಂ ನ ತು ಭುಕ್ತವಾನ್ ॥ ೨೬ ॥

ವೈಧವ್ಯಭೀತ್ಯಾ ಸಾ ದೇವೀ ಸ್ವಮಿತ್ರಂ ಪ್ರತಿ ಚಾಗತಾ ।
ಧರ್ಮಭೀತ್ಯಾ ಚ ತತ್ಸ್ವಾಮೀ ಸ್ವಪತ್ನೀಂ ನ ತು ಭುಕ್ತವಾನ್ ॥ ೨೭ ॥

ಚೋರಸ್ತು ಸತ್ಯಭೀತ್ಯಾ ವೈ ತ್ಯಕ್ತ್ವಾ ತಾಂ ಮುದಮಾಗತಃ ॥ ೨೮ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ನವಮೋಽಧ್ಯಾಯಃ.

---

ಬೇತಾಳವು ತಿಳಿಸಿ ಪ್ರಾಜ್ಞನಾದ ವಿಕ್ರಮ ರಾಜನನ್ನು ಕುರಿತು, "ಅಯ್ಯಾ! ಇವರಲ್ಲಿ ಯಾರ ಸತ್ಯವು ಶ್ರೇಷ್ಠವಾದ್ದು ಎಂಬುದನ್ನು ಹೇಳು" ಎಂದು ಕೇಳಿತು.

೨೬. ಹೀಗೆ ಪ್ರಶ್ನಿಸಲ್ಪಟ್ಟ ರಾಜನು ಬೇತಾಳವನ್ನು ಕುರಿತು "ಕಳ್ಳನ ಸತ ವರ್ತನವೇ ಶ್ರೇಷ್ಠ ಏಕೆಂದರೆ—ಸೋಮದತ್ತನು ರಾಜಭೀತಿಯಿಂದ ಕಾಮಾಲಸೆ ಯನ್ನು ಭೋಗಿಸಲಿಲ್ಲ.

೨೭. ವೈಧವ್ಯದ ಹೆದರಿಕೆಯಿಂದ ಕಾಮಾಲಸೆಯು ಸ್ನೇಹಿತನಾದ ಸೋಮ ದತ್ತನ ಬಳಿಗೆ ಬಂದಳು. ಆಕೆಯ ನಿಜಪತಿಯಾದ ಮದಪಾಲನು ಧರ್ಮಭೀತಿ ಯಿಂದ ತನ್ನ ಪತ್ನಿಯಲ್ಲಿ ಒಂಬತ್ತನೆಯದಿನ ಸುಖಾನುಭವ ಮಾಡಲಿಲ್ಲ.

೨೮. ಕಳ್ಳನಾದರೋ ಸತ್ಯಭೀತಿಯಿಂದಲೇ ಕಾಮಾಲಸೆಯನ್ನು ಬಿಟ್ಟು ಕೊಟ್ಟು ಸಂತೋಷಹೊಂದಿದನು. ಆದುದರಿಂದ ಕಳ್ಳನ ಸತ್ಯವರ್ತನವೇ ಶ್ರೇಷ್ಠ ವಾದುದು" ಎಂದು ರಾಜನು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ ಖಂಡದ ಕಲಿ ಯುಗದ ಇತಿಹಾಸಸಮುದಾಯವೆಂಬ ಒಂಭತ್ತನೆಯ ಅಧ್ಯಾಯ ಮುಗಿದುದು.

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ

## ದಶಮೋಽಧ್ಯಾಯಃ

---

॥ ಸೂತ ಉವಾಚ ॥

ವೈತಾಲಸ್ತು ಮಹಾಭಾಗ ರಾಜಾನಮಿದಮಬ್ರವೀತ್ ।
ಗೌಡದೇಶೇ ಮಹಾರಾಜ ವರ್ಧನಂ ನಾಮ ವೈ ಪುರಂ ॥ ೧ ॥

ಗುಣಶೇಖರ ಆಖ್ಯಾತೋ ಭೂಪಾಲಸ್ತತ್ರ ಧರ್ಮವಾನ್ ।
ತನ್ಮಂತ್ರೀ ನಿರ್ಭಯಾನಂದೋ ಜೈನಧರ್ಮಪರಾಯಣಃ ॥ ೨ ॥

ಕದಾಚಿದ್ಭೂಪತಿರ್ಯಾತೋ ಮಂದಿರೇ ಗಿರಿಜಾಪತೇಃ ।
ಪೂಜಯಾಮಾಸ ತಂ ದೇವಂ ಸರ್ವವ್ಯಾಪಿನಮೀಶ್ವರಂ ॥ ೩ ॥

---

### ಹತ್ತನೆಯ ಅಧ್ಯಾಯ

೧-೨. ಅನಂತರ ಸೂತನು ಶೌನಕನನ್ನು ಕುರಿತು ಹೇಳುತ್ತಾನೆ— ಪೂಜ್ಯನಾದ ಶೌನಕನೇ ಕೇಳು. ಆಮೇಲೆ ಬೇತಾಳವು ರಾಜನನ್ನು ಕುರಿತು “ ಎಲೈ ವಿಕ್ರಮರಾಜನೇ ! ಗೌಡದೇಶದಲ್ಲಿ ವರ್ಧನ ಎಂಬ ಹೆಸರಿನ ಪಟ್ಟಣವುಂಟು. ಅಲ್ಲಿ ಗುಣಶೇಖರನೆಂಬ ರಾಜನು ಧರ್ಮದಿಂದ ರಾಜ್ಯವಾಳುತ್ತಿದ್ದನು. ಅವನಬಳಿ ಜೈನ ಧರ್ಮದಲ್ಲಿ ಆಸಕ್ತನಾದ ನಿರ್ಭಯಾನಂದನೆಂಬ ಮಂತ್ರಿಯಿದ್ದನು.

೩. ಒಂದಾನೊಂದುದಿನ ರಾಜನು ಪಾರ್ವತೀಪತಿಯಾದ ಶಿವನ ದೇವಾಲಯಕ್ಕೆ ಹೋಗಿ, ಸರ್ವವ್ಯಾಪಿಯಾದ ಪರಮೇಶ್ವರನನ್ನು ಪೂಜಿಸುತ್ತಿದ್ದನು.

ವೃಶ್ಚಿಕಸ್ತತ್ರ ಸಂಪ್ರಾಪ್ಯ ದದಂಶ ನೃಪತಿಂ ರುಷಾ ।
ತತ್ಕಷ್ಟೇನ ಸ ಭೂಪಾಲೋ ಮೂರ್ಛಿತಃ ಪತಿತೋ ಭುವಿ ॥ ೪ ॥

ತದಾ ತು ನಿರ್ಭಯಾನಂದೋ ವಿಷಮುತ್ಸಾರ್ಯ ತಸ್ಯ ವೈ ।
ಭೂಪತಿಂ ವರ್ಣಯಾಮಾಸ ಜೈನಧರ್ಮಪರಾಯಣಃ ॥ ೫ ॥

ಶೃಣು ರಾಜನ್ ಮಹಾಭಾಗ ಶತ್ರೂನ್ ಷಣ್ಮಾನಸಾಧಮಾನ್ ।
ಕಾಮಃ ಕ್ರೋಧಸ್ತಥಾ ಲೋಭೋ ರತಿರ್ಹಿಂಸಾ ಚ ತೃಷ್ಣಿಕಾ ॥ ೬ ॥

ರಜೋಗುಣಾಚ್ಚ ತೇ ಜಾತಾಸ್ತೇಷಾಂ ಭೇದಾಃ ಪೃಥಕ್ಪೃಥಕ್ ।
ಮೋಹೋ ದಂಭೋ ಮದಶ್ಚೈವ ಮಮತಾಶಾ ಚ ಗರ್ಹಣಾ ॥ ೭ ॥

ತಮೋಗುಣಾಚ್ಚ ತೇ ಜಾತಾ ಸ್ತೈರಿದಂ ಪೂರಿತಂ ಜಗತ್ ।
ಕಾಮೀ ವಿಷ್ಣುಸ್ತಥಾ ರುದ್ರಃ ಕ್ರೋಧೀ ಲೋಭೀ ವಿಧಿಸ್ತಥಾ ॥ ೮ ॥

---

೪. ಆಗ ಅಲ್ಲಿ ಎಲ್ಲಿಯೋ ಇದ್ದ ಒಂದು ಚೇಳು ಹರಿದು ಬಂದು, ಕೋಪದಿಂದ ಮಹಾರಾಜನನ್ನು ಕುಟುಕಿತು. ಆ ನೋವನ್ನು ಸಹಿಸಲಾರದೆ ಆ ರಾಜನು ಮೂರ್ಛಿತನಾಗಿ ನೆಲದಮೇಲೆ ಬಿದ್ದನು.

೫. ಆಗ ಜೈನಧರ್ಮಪರನಾದ ನಿರ್ಭಯಾನಂದಮಂತ್ರಿಯು ರಾಜನಿಗೆ ಉಂಟಾಗಿದ್ದ ವಿಷಭಾದೆಯನ್ನು ಪರಿಹರಿಸಿ, ಅವನನ್ನು ಕುರಿತು "ಪೂಜ್ಯನಾದ ಮಹಾ ಪ್ರಭುವೇ ! ಕೇಳು,

೬. ಮಾನಸಶತ್ರುಗಳೆನಿಸಿ ಅಧಮವರ್ಗದವುಗಳಾದ ಕಾಮ, ಕ್ರೋಧ, ಲೋಭ, ರತಿ, ಹಿಂಸಾ, ತೃಷ್ಣಾ, ಎಂಬ ಇವು ಆರೂ, ರಜೋಗುಣದಿಂದ ಹುಟ್ಟಿದುವು. ಅವುಗಳಲ್ಲಿಯೂ ಬೇರೆ ಬೇರೆ ಭೇದಗಳಿವೆ.

೭. ಮೋಹ, ದಂಭ, ಮದ, ಮಮತೆ, ಆಶೆ, ನಿಂದೆ ಇವು ತಮೋಗುಣದಿಂದ ಹುಟ್ಟಿದುವು, ಇವುಗಳಿಂದ ಈ ಜಗತ್ತೆಲ್ಲವೂ ತುಂಬಿಹೋಗಿದೆ.

೮. ವಿಷ್ಣುವು ಕಾಮಾಸಕ್ತನು, ರುದ್ರನು ಕ್ರೋಧಶೀಲನು, ಬ್ರಹ್ಮನು ಮಹಾ ಲೋಭಿ ದೇವೇಂದ್ರನು ಮಹಾಡಾಂಭಿಕನು, ಯಮನು ಮಹಾಮೋಹಾವೃತನು, ಕುಬೇರನು ಮಹಾಮದಶಾಲಿಯು.

**ದಂಭೀ ಶಕ್ರೋ ಯಮೋ ಮೋಹೀ ಮದೀ ಯಕ್ಷಪತಿಃ ಸ್ವಯಂ ।**
**ಮಾಯಾವಶ್ಯಾಶ್ಚ ತೇ ಸರ್ವೇ ತರ್ಹಿ ತತ್ಪೂಜನೇನ ಕಿಂ ॥ ೯ ॥**

**ಷಟ್‌ಶತ್ರುಭಿರ್ಜಿತೋ ಯೋ ವೈ ಸ ಜಿನೋ ಮುನಿಭಿಃ ಸ್ಮೃತಃ ।**
**ನ ಜಿತಃ ಸ ಜಿನೋ ಜ್ಞೇಯೋಽದ್ವೈತವಾದೀ ನಿರಂಜನಃ ॥ ೧೦ ॥**

**ತಸ್ಯ ಧ್ಯಾನೇನ ಭಾವೇನ ಮೋಕ್ಷವಂತೋ ನರಾಃ ಸದಾ ।**
**ತತ್ಪ್ರಸಾದಾಯ ಯೋ ಧರ್ಮಃ ಶೃಣು ಮೇ ವಸುಧಾಧಿಪ ॥ ೧೧ ॥**

**ಗೋಪೂಜನೇನ ತೇ ದೇವಾಸ್ತುಷ್ಟಿಂ ಯಾಂತಿ ಸದೈವ ಹಿ ।**
**ಅತೋ ಗೋಪೂಜನಂ ಶುದ್ಧಂ ಹಿಂಸಾ ಸರ್ವತ್ರ ವರ್ಜಿತಾ ॥ ೧೨ ॥**

**ಮದಪಾನೇನ ಸರ್ವಾತ್ಮಾ ಜಿನಃ ಕ್ಲೇಶಂ ಸಮಾಪ್ನುಯಾತ್ ।**
**ತಸ್ಮಾನ್ಮಾಂಸಂ ಚ ಪಾನಂ ಚ ವರ್ಜಿತಂ ಸರ್ವದೈವ ಹಿ ॥ ೧೩ ॥**

---

೯. ಹೀಗೆ ದೇವತೆಗಳೆನಿಸಿದ ಇವರೆಲ್ಲರೂ ಮಾಯೆಗೆ ವಶರಾಗಿದ್ದಾರೆ. ಇಂಥ ವರನ್ನು ಪೂಜಿಸಿದುದರಿಂದ ಏನು ಫಲ ?

೧೦. ಈ ಅರಿಷಡ್ವರ್ಗಗಳನ್ನು ಜಯಿಸಿದವನೇ ಜಿನನು ಎಂದು ಮುನಿಗಳು ಹೇಳುತ್ತಾರೆ. ಅವನು ಇವುಗಳಿಂದ (ಅರಿಷಡ್ವರ್ಗಗಳಿಂದ) ಜಯಿಸಲ್ಪಟ್ಟಿಲ್ಲ. ಆದುದರಿಂದ ಅದ್ವಿತೀಯನು. ಜಿನನು ನಿರ್ಲೇಪನು ಎಂಬದಾಗಿ ಹೇಳಿಸಿಕೊಳ್ಳುತ್ತಾನೆ ಸದಾ ಅವನನ್ನು ಧ್ಯಾನಿಸಿದರೂ ಮನಸಾ ಭಾವನೆಮಾಡಿದರೂ ಜನರಿಗೆ ಮೋಕ್ಷ ಲಭಿಸುವುದು.

೧೧. ಅಯ್ಯಾ ಪ್ರಭುವೇ ! ಅವನ ಅನುಗ್ರಹವನ್ನು ಸಂಪಾದಿಸುವುದಕ್ಕೆ ಯಾವ ಧರ್ಮವನ್ನು ಅನುಸರಣೆ ಮಾಡಬೇಕೆಂಬುದನ್ನು ನಾನು ಹೇಳುತ್ತೇನೆ ತಿಳಿದುಕೋ. ಸದಾ ಗೋಪೂಜೆ ಮಾಡುವುದರಿಂದ ದೇವನು ಸಂತುಷ್ಟನಾಗುವನು.

೧೨ ಆದುದರಿಂದ ಮಾನವನು ಪ್ರಾಣಹಿಂಸೆಯನ್ನು ವರ್ಜ್ಯಮಾಡಿ ಗೋಪೂಜೆಮಾಡಿದರೆ ಪರಿಶುದ್ಧನಾಗುವನು. ಮನುಷ್ಯನಲ್ಲಿ ಮದಯುಕ್ತತೆ, ಪಾನಾಸಕ್ತಿ ಮುಂತಾದ ಗುಣವುಂಟಾದರೆ ಸರ್ವಾತ್ಮನಾದ ಜಿನನು ಕ್ಲೇಶಹೊಂದುವನು.

೧೩. ಆದುದರಿಂದ ಮಾಂಸಭಕ್ಷಣ, ಮದ್ಯಪಾನ ಇವನ್ನು ಎಂದೂ ಮಾಡದೆ ಶುದ್ಧಾಂಗವಾಗಿ ವರ್ಜ್ಯಮಾಡಬೇಕು. ತಾನು ನ್ಯಾಯಮಾರ್ಗದಲ್ಲಿ ಸಂಪಾದಿಸಿದ ದ್ರವ್ಯದಿಂದ ಹಸಿದವರಿಗೆ ಅನ್ನದಾನಮಾಡಬೇಕು.

ನ್ಯಾಯೇನೋಪಾರ್ಜಿತಂ ವಿತ್ತಂ ಭೋಜಯೇಚ್ಚ ಬುಭುಕ್ಷಿತಾನ್ ।
ರವಿರಾತ್ಮಾ ಜಿನಸ್ಯೈವ ತತ್ಪ್ರಕಾಶೇ ಹಿ ಭೋಜಯೇತ್ ॥ ೧೪ ॥

ಇತ್ಯೇವಂ ವರ್ಣಯಿತ್ವೈನಂ ಮಂತ್ರೀ ಗೇಹಮುಪಾಯಯೌ ।
ತಥೈವ ಮತ್ವಾ ಸ ನೃಪೋ ಜಿನಧರ್ಮಂ ಗೃಹೀತವಾನ್ ॥ ೧೫ ॥

ಕಿಯತಾ ಚೈವ ಕಾಲೇನ ವೇದಮಾರ್ಗೋ ಹಿ ಲಂಘಿತಃ ।
ತದಾ ತು ದುಃಖಿತಾ ರಾಜ್ಞೀ ಶಿವಸ್ಯ ಶರಣಂ ಯಯೌ ॥ ೧೬ ॥

ವರದಾನೇನ ರುದ್ರಸ್ಯ ಪುತ್ರೋ ಜಾತೋ ಮಹೋತ್ತಮಃ ।
ಧರ್ಮರಾಜ ಇತಿ ಖ್ಯಾತೋ ವೇದವ್ರತಪರಾಯಣಃ ॥ ೧೭ ॥

ಗುಣಶೇಖರ ಏವಾಸೌ ಪಂಚತ್ವೇ ನಿರಯಂ ಯಯೌ ।
ಧರ್ಮರಾಜಸ್ತದಾ ರಾಜ್ಯಂ ಕೃತವಾನ್ ಧರ್ಮತಃ ಸ್ವಯಂ ॥ ೧೮ ॥

---

೧೪. ಜಿನನಿಗೆ ಸೂರ್ಯನೇ ಆತ್ಮನು, ಆದುದರಿಂದ ಸೂರ್ಯನು ಪ್ರಕಾಶಿಸುತ್ತಿರುವಾಗಲೇ (ಅಸ್ತಮಿಸುವುದಕ್ಕೆ ಮುಂಚೆಯೇ) ಜೈನರು ಭೋಜನಮಾಡತಕ್ಕದ್ದು" ಎಂಬದಾಗಿ ಆ ಮಂತ್ರಿಯು ರಾಜನಿಗೆ ಈ ವಿಚಾರವನ್ನು ತಿಳಿಸಿ, ತನ್ನ ಮನೆಗೆ ಹೋದನು.

೧೫ ಅನಂತರ ರಾಜನು 'ಈ ಅಭಿಪ್ರಾಯವೇ ಸರಿ' ಎಂದು ತಿಳಿದು ಜೈನ ಧರ್ಮವನ್ನು ಅವಲಂಬಿಸಿದನು. ರಾಜನು ಈರೀತಿ ಪರಧರ್ಮವನ್ನು ಆಶ್ರಯಿಸಿ ವೇದೋಕ್ತವಾದ ಮಾರ್ಗವನ್ನು ಮೀರಲು ಉಪಕ್ರಮಿಸಿದನು.

೧೬. ಆಗ ಅವನ ಪತ್ನಿಯಾದ ಮಹಾರಾಣಿಯು, ಪತಿಯು ಹೀಗೆ ವಿಧರ್ಮಿಯಾದುದನ್ನು ನೋಡಿ "ಪರಮೇಶ್ವರಾ ! ನೀನೇಗತಿ" ಎಂದು ಅವನ ಮರೆಹೊಕ್ಕಳು.

೧೭. ಆಗ ಆಕೆಗೆ ಪರಮೇಶ್ವರನ ಅನುಗ್ರಹವುಂಟಾಗಿ ಶ್ರೇಷ್ಠನಾದ ಪುತ್ರನು ಜನಿಸಿದನು. ಕಾಲಕ್ರಮದಲ್ಲಿ ಅವನು, ವೇದೋಕ್ತವಾದ ವ್ರತಾಚರಣೆಯಲ್ಲಿ ಆಸಕ್ತನಾಗಿ ಧರ್ಮರಾಜನೆಂದು ಪ್ರಖ್ಯಾತನಾದನು.

೧೮. ಕೆಲವು ಕಾಲದೊಳಗೆ ರಾಜನಾದ ಗುಣಶೇಖರನು ಮೃತನಾಗಲು ಅವನಿಗೆ ನರಕಪ್ರಾಪ್ತಿಯಾಯಿತು. ಅನಂತರ ಆ ರಾಜನ ಪುತ್ರನಾದ ಧರ್ಮರಾಜನು ತಾನೇ ಧರ್ಮದಿಂದ ರಾಜ್ಯವಾಳಿದನು.

**ತಸ್ಯ ಧರ್ಮಪ್ರಭಾವೇನ ತತ್ಪಿತಾ ಸ್ವರ್ಗಮಾಪ್ತವಾನ್ ।**
**ತ್ರಯಃ ಪತ್ನ್ಯೋಽಭವಂಸ್ತಸ್ಯ ಗುಣರೂಪಸಮಹೋತ್ತಮಾಃ ॥ ೧೯ ॥**

**ವಸಂತಸಮಯೇ ರಾಜಾ ತಾಭಿಃ ಸಹ ವನಾಂತರೇ ।**
**ಸಂಯಾತೋ ರಮಯಾಮಾಸ ಪುಷ್ಪಭ್ರಮರನಾದಿತೇ ॥ ೨೦ ॥**

**ಶ್ರಮಿತಃ ಸ ತು ಭೂಪಾಲೋ ರಾಜ್ಞೀಭಿಃ ಸಹ ಮೋದಿತಃ ।**
**ಸರೋವರೇ ಸ್ನಾಪಿತವಾನ್ ಮದಾಘೂರ್ಣಿತಲೋಚನಃ ॥ ೨೧ ॥**

**ಗೃಹೀತ್ವಾ ಕುಸುಮಂ ಪಾದ್ಮಂ ಕರೇ ರಾಜ್ಞ್ಯೈ ಸಮರ್ಪಯತ್ ।**
**ಪದಿ ಹೀನತ್ವಮಾಯಾತಾ ಪತತಾ ಕುಸುಮೇನ ವೈ ॥ ೨೨ ॥**

**ದುಃಖಿತಃ ಸ ತು ಭೂಪಾಲಃ ರಾಜ್ಞೀಂ ತಾಮಚಿಕಿತ್ಸಯತ್ ।**
**ರಾತ್ರೌ ಪ್ರಾಪ್ತೇ ದ್ವಿತೀಯಾ ತು ಚಂದ್ರಶೀಲೇನ ಮೋಹಿತಾ ॥ ೨೩ ॥**

---

೧೯. ಮಗನ ಧರ್ಮಪ್ರಭಾವದಿಂದ ತಂದೆಗೆ ನರಕವಾಸವು ತಪ್ಪಿ ಸ್ವರ್ಗ ಪ್ರಾಪ್ತಿಯಾಯಿತು ಆ ಧರ್ಮರಾಜನಿಗೆ ಗುಣದಲ್ಲಿಯೂ, ರೂಪದಲ್ಲಿಯೂ ಉತ್ತಮ ರೆನಿಸಿದ ಮೂವರು ಪತ್ನಿಯರು ಇದ್ದರು.

೨೦. ವಸಂತಕಾಲದಲ್ಲಿ ಒಂದಾನೊಂದು ದಿವಸ ರಾಜನು ತನ್ನ ರಾಣಿಯ ರೆಲ್ಲರೊಡನೆ ವನವಿಹಾರಕ್ಕೆ ಹೋದನು. ಅಲ್ಲಿ ಹೂಗಳಿಗೆ ಮುತ್ತುವ ಸಣ್ಣಭ್ರಮರ ಗಳು ಝೇಂಕರಿಸುತ್ತಿದ್ದುವು.

೨೧. ವನಮಧ್ಯದಲ್ಲಿ ಸಂತೋಷದಿಂದ ವಿಹರಿಸಿ ಬಳಲಿದ ರಾಜನು ರಾಣಿಯ ರೊಡನೆ ಸರೋವರದಲ್ಲಿ ಸ್ನಾನಮಾಡುತ್ತಾ ಜಲಕ್ರೀಡೆಯಾಡಿದನು. ಆ ರಾಜನು ಮದೋನ್ಮತ್ತ ದೃಷ್ಟಿಯುಳ್ಳವನಾಗಿ

೨೨. ಆಗ ಒಂದು ಕಮಲ ಪುಷ್ಪವನ್ನು ಕೈಗೆ ತೆಗೆದುಕೊಂಡು ಅದನ್ನು ಹಿರಿಯ ರಾಣಿಯ ಮೇಲೆ ಎಸೆದನು. ಬೀಳುತ್ತಿರುವ ಆ ಕುಸುಮವನ್ನು ಹಿಡಿದು ಕೊಂಡುದರಿಂದ ಅವಳ ಕಾಲು ನೋವಾಯಿತು.

೨೩. ಇದನ್ನು ನೋಡಿ ರಾಜನು ದುಃಖಿತನಾಗಿ ಕೂಡಲೆ ರಾಣಿಗೆ ಸರಿಯಾದ ಚಿಕಿತ್ಸೆಮಾಡಿಸಿದನು. ರಾತ್ರಿಯಾಗುತ್ತಲೆ ಚಂದ್ರನ ಸ್ವಭಾವವಾದ ಬೆಳದಿಂಗಳ ಪ್ರಸಾರದಿಂದ ಎರಡನೆಯ ರಾಣಿಯು ವ್ಯಾಕುಲಮನಸ್ಕಳಾಗಿ ಕೆಳಗೆಬಿದ್ದಳು.

ಆಪತದ್ವ್ಯಾಕುಲೀಭೂತ್ವಾ ಶುದ್ಧಂ ಪಾದಮಭೂತ್ತತಃ ।
ಪತಿತಾಯಾಶ್ಚ ಶಬ್ದೇನ ತೃತೀಯಾ ಜ್ವರಿತಾಽಭವತ್ ॥ ೨೪ ॥

ತಸ್ಯಾ ಮೂರ್ಛಾ ತದಾ ಕ್ಷೀಣಾ ದ್ವಿತೀಯಾಯಾ ಅಜಾಯತ ।
ನೃಪಸ್ಪರ್ಶೇನ ಸಾ ಸುಭ್ರೂರ್ಜ್ವರತಾಪಂ ವಿಹಾಯ ಚ ॥ ೨೫ ॥

ಪ್ರಭಾತೇ ಸುಂದರೇ ಜಾತೇ ಸ ತಾಭಿರ್ಗೃಹಮಾಯಯೌ ।
ಇತ್ಯುಕ್ತ್ವಾ ಸ ತು ವೈತಾಲೋ ಭೂಪತಿಂ ಪ್ರಾಹ ನಮ್ರಧೀಃ ॥ ೨೬ ॥

ಆಸಾಂ ಮಧ್ಯೇ ಮಹಾರಾಜ ಕಾ ಶ್ರೇಷ್ಠಾ ಸುಕುಮಾರಿಕಾ ।
॥ ರಾಜೋವಾಚ ॥
ತೃತೀಯಾ ಸುಕುಮಾರೀ ಚ ತಾಸಾಂ ಮಧ್ಯೇ ಮಹೋತ್ತಮಾ ॥ ೨೭ ॥

ವಾಯುಪ್ರಕೃತಿತಶ್ಚಾಸೌ ಪದ್ಮಪುಷ್ಪೇಣ ಖಂಜಿತಾ ।
ಶೀತಾಂಶುನಾ ದ್ವಿತೀಯಾ ತು ಮೂರ್ಛಿತಾ ಕಫಭಾವತಃ ॥ ೨೮ ॥

---

೨೪ ಆಗ ಮೊದಲನೆಯ ರಾಣಿಯ ಪಾದವು ಸರಿಹೋಯಿತು. ಎರಡನೆಯ ರಾಣಿಯು ಬಿದ್ದ ಶಬ್ದವನ್ನು ಕೇಳಿ, ಮೂರನೆಯ ರಾಣಿಗೆ ಜ್ವರ ಬಂದಿತು.

೨೫. ಅಷ್ಟರಲ್ಲಿ ಎರಡನೆಯ ರಾಣಿಗೆ ಮೂರ್ಛೆ ತಿಳಿದು ಎಚ್ಚರವಾಯಿತು. ರಾಜನ ಸ್ಪರ್ಶದಿಂದ ಸುಂದರಿಯಾದ ಮೂರನೆಯ ರಾಣಿಗೂ ಜ್ವರದ ತಾಪವು ಶಾಂತವಾಯಿತು.

೨೬. ಮನೋಹರವಾಗಿ ಬೆಳಗಾಗುತ್ತಲೆ, ರಾಜನು ಆ ಮೂವರು ಪತ್ನಿಯರೊಡನೆ ತನ್ನ ಅರಮನೆಗೆ ಬಂದನು" ಎಂಬದಾಗಿ ಬೇತಾಳವು ಹೇಳಿ, ಆಮೇಲೆ ನಮ್ರತೆಯಿಂದ ರಾಜನನ್ನು ಕುರಿತು "ಎಲೈ ರಾಜನೇ! ಈ ಮೂವರಲ್ಲಿ ಯಾವಳು ಶ್ರೇಷ್ಠಳಾದ ಸುಕುಮಾರಿ ಎಂಬುದನ್ನು ಹೇಳು" ಎಂದಿತು.

೨೭. ಅದಕ್ಕೆ ರಾಜನು "ಅವರಲ್ಲಿ ಮೂರನೆಯವಳೇ ಉತ್ತಮಳಾದ ಸುಕುಮಾರಿಯು. ಮೊದಲನೆಯವಳು ವಾತಪ್ರಕೃತಿಯುಳ್ಳವಳಾದುದರಿಂದ ಪದ್ಮಪುಷ್ಪದ ಸೋಂಕಿನಿಂದ ಅವಳ ಕಾಲು ನೋವಾಯಿತು.

೨೮. ಎರಡನೆಯವಳು ಕಫಪ್ರಕೃತಿಯುಳ್ಳವಳಾದುದರಿಂದ ಚಂದ್ರಕಿರಣದ ಸೋಂಕಿನಿಂದ ಮೂರ್ಛಿತೆಯಾದಳು. ಮೂರನೆಯವಳಾದರೋ ಯಾರೋ ಬಿದ್ದ

**ಶಬ್ಧಮಾತ್ರೇಣ ಸಂತಾಪೋ ಯಸ್ಯಾಂ ಜಾತೋ ಹಿ ಸೋತ್ತಮಾ ।**
**ವಿಹಸ್ಯಾಹ ಪುನರ್ದೇವೋ ಭವಭಕ್ತಂ ಮಹೀಪತಿಂ ॥ ೨೯ ॥**

**ಜೈನಧರ್ಮಃ ಪ್ರಧಾನೋ ಹಿ ವೇದಧರ್ಮೋಽಥ ವಾ ವದ ।**
**ಸಹೋವಾಚ ಪ್ರಧಾನೋ ಹಿ ವೇದಧರ್ಮಃ ಸನಾತನಃ ॥ ೩೦ ॥**

**ಅಷ್ಟೌ ಶ್ರೇಣ್ಯೋ ಹಿ ತಸ್ಯೈವ ಬ್ರಹ್ಮಣೋವ್ಯಕ್ತರೂಪಿಣಃ ।**
**ಶೂದ್ರೋ ವೈಶ್ಯಸ್ತಥಾ ಕ್ಷತ್ರೀ ಬ್ರಾಹ್ಮಣೋ ಬ್ರಹ್ಮಚರ್ಯಕೃತ್ ॥ ೩೧ ॥**

**ಗೇಹೀ ವನ್ಯೋ ಯತಿಶ್ಚೈವ ಕ್ರಮಾಚ್ಛ್ರೇಷ್ಠಾಃ ಪ್ರಕೀರ್ತಿತಾಃ ।**
**ಯಃ ಕೃತ್ವಾ ದಾರಸಂಸರ್ಗಂ ಯತಿವದ್ವರ್ತತೇ ಗೃಹೀ।**
**ಸ ಪಾಪೀ ನರಕಂ ಯಾತಿ ಯಾವದಾಭೂತಸಂಪ್ಲವಂ ॥ ೩೨ ॥**

---

ಶಬ್ದ ಕೇಳಿದಷ್ಟಕ್ಕೇ ಸಂತಾಪಗೊಂಡಳಾದುದರಿಂದ ಅವಳೇ ಅತಿ ಉತ್ತಮಳಾದ ಸುಕುಮಾರಿ" ಎಂದನು.

೨೯. ಆಗ ಬೇತಾಳನು ನಕ್ಕು, ಈಶ್ವರಭಕ್ತನಾದ ರಾಜನನ್ನು ಕುರಿತು "ಅಯ್ಯಾ ! ಜೈನ ಧರ್ಮಕ್ಕೆ ಪ್ರಾಮುಖ್ಯವೋ ? ಅಥವಾ ವೇದಧರ್ಮಕ್ಕೆ ಪ್ರಾಮುಖ್ಯವೋ ? ಹೇಳು" ಎಂದು ಪ್ರಶ್ನೆ ಮಾಡಿದನು.

೩೦. ಒಡನೆ ಈ ರಾಜನು "ಪುರಾತನವಾದ ವೇದಧರ್ಮವೇ ಪ್ರಶಸ್ತವಾದುದು." ಎಂಬದಾಗಿ ಹೇಳಿದುದಲ್ಲದೆ, "ಅವ್ಯಕ್ತರೂಪಿಯಾದ ಬ್ರಹ್ಮಪ್ರಾಪ್ತಿಗೆ ಎಂಟು ಮೆಟ್ಟಿಲುಗಳುಂಟು.

೩೧. ಕೃಷಿಜೀವಿಯಾದ ಶೂದ್ರ, ಅವನಿಗಿಂತ ವೈಶ್ಯನು, ಅವನಿಗಿಂತ ಕ್ಷತ್ರಿಯನು, ಅವನಿಗಿಂತ ಬ್ರಾಹ್ಮಣನು ಈರೀತಿ ಉತ್ತಮವರ್ಣಕರು. ದ್ವಿಜರಲ್ಲಿ ಬ್ರಹ್ಮಚಾರಿ, ಅವನಿಗಿಂತ ಗೃಹಸ್ಥನು, ಅವನಿಗಿಂತ ವಾನಪ್ರಸ್ಥ, ಅವನಿಗಿಂತ ಯತಿ, ಹೀಗೆ ಕ್ರಮವರಿತು ಶ್ರೇಷ್ಠರೆನಿಸಿದ್ದಾರೆ.

೩೨. ಗೃಹಸ್ಥನೆನಿಸಿ ಹೆಂಡತಿಯೊಡನೆ ಸಂಸಾರಿಯಾಗಿರದೆ ಯತಿಯಂತೆ ನಡೆದುಕೊಂಡರೆ ಅವನು ಪಾಪಿಷ್ಠನೆನಿಸುವನಲ್ಲದೆ ಕಲ್ಪಾಂತದವರೆಗೆ ನರಕವಾಸವನ್ನು ಅನುಭವಿಸುತ್ತಾನೆ.

**ಗೃಹೇಷು ಯತಿವದ್ಧರ್ಮೋ ಜೈನಶಾಸ್ತ್ರೇ ಪ್ರಕೀರ್ತಿತಃ ।**
**ಪಾಖಂಡಃ ಸ ಸ್ಮೃತಃ ಪ್ರಾಜ್ಞೈರ್ವರ್ಜನೀಯೋ ಹಿ ಸರ್ವದಾ ॥ ೩೩ ॥**

**ಇತಿ ಶ್ರೀ ಭವಿಷ್ಯೆಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ದಶಮೋಽಧ್ಯಾಯಃ.**



---

೩೩. ಗೃಹಸ್ಥರಾಗಿದ್ದರೂ ಯತಿಯಂತೆ ನಡೆದುಕೊಳ್ಳಬೇಕೆಂದು ಜೈನಶಾಸ್ತ್ರದಲ್ಲಿ ಹೇಳಿದೆ. ಹಾಗೆ ಆಚರಿಸಿದವನನ್ನು ಪ್ರಾಜ್ಞರು ಪಾಖಂಡನೆಂದು ಕರೆದು ಅವನನ್ನು ಯಾವಾಗಲೂ ವರ್ಜ್ಯಮಾಡುತ್ತಾರೆ. ಆದುದರಿಂದ ಜೈನಧರ್ಮಕ್ಕಿಂತ ವೇದಧರ್ಮವೇ ಉತ್ತಮವಾದುದು." ಎಂದು ಪ್ರತಿಪಾದಿಸಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ದ್ವಿತೀಯಖಂಡದಲ್ಲಿ ಕಲಿಯುಗದ ಇತಿಹಾಸ ಸಮುದಾವೆಂಬ ಹತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ಏಕಾದಶೋಽಧ್ಯಾಯಃ

---

॥ ಸೂತ ಉವಾಚ ॥

ಭೋಃ ಶೌನಕ ಮಹಾಭಾಗ ಸ ವೈತಾಲೋ ಹಿ ದೇವತಾ ।
ರಾಜಾನಮಬ್ರವೀದ್ಗಾಥಾಂ ಧರ್ಮಪ್ರಶ್ನಮಯೀಂ ಶುಭಾಂ ॥ ೧ ॥

ರಾಜನ್ ಪುಣ್ಯಪುರೇ ರಮ್ಯೇ ನಾನಾಜನನಿಷೇವಿತೇ ।
ಧರ್ಮವಲ್ಲಭಭೂಪಾಲಸ್ತತ್ರ ರಾಜ್ಯಂ ಪುರಾಕರೋತ್ ॥ ೨ ॥

ಸತ್ಯಪ್ರಕಾಶಸ್ತನ್ಮಂತ್ರೀ ಲಕ್ಷ್ಮೀಶ್ಚಾಮಾತ್ಯಕಾಮಿನೀ ।
ಕದಾಚಿತ್ಸ ತು ಭೂಪಾಲೋ ಮಂತ್ರಿಣಂ ಪ್ರಾಹ ಧರ್ಮವಿತ್ ॥ ೩ ॥

---

## ಹನ್ನೊಂದನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಪೂಜ್ಯನಾದ ಶೌನಕನೇ! ದೇವಸ್ವರೂಪಿಯಾದ ಬೇತಾಳವು ವಿಕ್ರಮರಾಜನನ್ನು ಕುರಿತು ಶುಭಕರವೂ ಧರ್ಮಪ್ರಶ್ನಾರೂಪವೂ ಆದ ಒಂದು ಗಾಥೆ (ಒಗಟಿ) ಯನ್ನು ಹೇಳಿತು ಅದು ಏನೆಂದರೆ—

೨. "ಅಯ್ಯಾ ಪ್ರಭುವೇ! ಪೂರ್ವಕಾಲದಲ್ಲಿ ನಾನಾ ಜನಗಳಿಂದ ಕೂಡಿದ ಪುಣ್ಯಪುರವೆಂಬ ಸುಂದರವಾದ ಪಟ್ಟಣವಿದ್ದಿತು. ಆ ನಗರದಲ್ಲಿ ಧರ್ಮವಲ್ಲಭನೆಂಬ ರಾಜನು ರಾಜ್ಯವಾಳುತ್ತಿದ್ದನು.

೩. ಅವನಿಗೆ ಸತ್ಯಪ್ರಕಾಶನೆಂಬ ಮಂತ್ರಿಯಿದ್ದನು. ಲಕ್ಷ್ಮಿ ಎಂಬಾಕೆಯು ಆ ಮಂತ್ರಿಯ ಪತ್ನಿಯು, ಧರ್ಮಜ್ಞನಾದ ಆ ರಾಜನು ಒಂದುದಿನ ಮಂತ್ರಿಯನ್ನು ಕುರಿತು ಹೇಳುತ್ತಾನೆ.

ಆನಂದಃ ಕತಿಧಾ ಲೋಕೇ ತನ್ಮಮಾಚಕ್ಷ್ವ ಸತ್ತಮ ।
ಸ ಹೋವಾಚ ಮಹಾರಾಜ ಸುಖಶ್ಚೈವ ಚತುರ್ವಿಧಃ ॥ ೪ ॥

ಬ್ರಹ್ಮಚರ್ಯಾಶ್ರಮೋ ಯೋ ವೈ ಬ್ರಹ್ಮಾನಂದೋ ಮಹೋತ್ತಮಃ ।
ಗಾರ್ಹಸ್ಥ್ಯೇ ವಿಷಯಾನಂದೋ ಮಧ್ಯಮಃ ಕಥಿತೋ ಬುಧೈಃ ॥ ೫ ॥

ವಾನಪ್ರಸ್ಥೇ ಮಹಾರಾಜ ಸ ಧರ್ಮಾನಂದಕೋಽಧಮಃ ।
ಕರ್ಮಕಾಂಡೇನ ಚಾನಂದಃ ಸತ್ಯಧರ್ಮಃ ಸ ವೈ ಸ್ಮೃತಃ ॥ ೬ ॥

ಸಂನ್ಯಸ್ತೇ ತು ಶಿವಾನಂದಸ್ಸ ಹಿ ಸರ್ವೋತ್ತಮೋತ್ತಮಃ ।
ವಿಷಯಾನಂದಕೋ ರಾಜನ್ ಸ್ತ್ರೀಪ್ರಧಾನಃ ಪ್ರಕೀರ್ತಿತಃ ॥ ೭ ॥

ಸ್ತ್ರಿಯಂ ವಿನಾ ಸುಖಂ ನಾಸ್ತಿ ಗೃಹಸ್ಥಾಶ್ರಮಕೇ ನೃಪ ।
ಇತಿ ಶ್ರುತ್ವಾ ಸ ಭೂಪಾಲೋ ದೇಶಾಂತರಮುಪಾಯಯೌ ॥ ೮ ॥

---

೪. "ಅಯ್ಯಾ ಶ್ರೇಷ್ಠನೇ! ಲೋಕದಲ್ಲಿ ಆನಂದವು ಎಷ್ಟು ವಿಧವಾಗಿದೆ ಎಂಬುದನ್ನು ನನಗೆ ಹೇಳು" ಎಂದು ಕೇಳಿದನು. ಆಗ ಮಂತ್ರಿಯು ರಾಜನನ್ನು ಕುರಿತು "ಮಹಾರಾಜನೇ! ಸುಖವೆಂಬುದು ನಾಲ್ಕು ಪ್ರಕಾರವಾಗಿದೆ".

೫. "ಬ್ರಹ್ಮಚರ್ಯದಲ್ಲಿ ಅನುಭವಿಸುವ ಬ್ರಹ್ಮಾನಂದವು ಸರ್ವೋತ್ತಮವಾದುದು, ಗೃಹಸ್ಥಾಶ್ರಮಿಯಾಗಿ ವಿಷಯಸುಖಗಳಿಂದ ಅನುಭವಿಸುವ ಆನಂದವು ಮಧ್ಯಮವು".

೬. "ವಾನಪ್ರಸ್ಥಾಶ್ರಮದಲ್ಲಿ ಉಂಟಾಗುವ ಧರ್ಮಾನಂದವು ಅಧಮವು ಆ ಆನಂದವನ್ನು ಕರ್ಮಕಾಂಡ ಪ್ರೋಕ್ತವಾದ ಸತ್ಯ ಧರ್ಮ ಸ್ವರೂಪವಾದ ಆನಂದವೆಂದು ಹೇಳಿದೆ".

೭. "ಸಂನ್ಯಾಸವನ್ನು ಸ್ವೀಕರಿಸಿದಾಗ ಲಭಿಸುವ ಶಿವಾನಂದವು ಸರ್ವಶ್ರೇಷ್ಠವಾದುದು. ಅಯ್ಯಾ ರಾಜನೇ! ವಿಷಯ ಸುಖಾನಂದಕ್ಕೆ ಸ್ತ್ರೀಯು ಇರಬೇಕಾದುದು ಆವಶ್ಯಕ. ಆದುದರಿಂದ ಗೃಹಸ್ಥಾಶ್ರಮಿಗೆ ಸ್ತ್ರೀಯಿದ್ದಲ್ಲದೆ ಸುಖ ಲಭಿಸಲಾರದು ಎಂದು ಹೇಳಿದೆ" ಎಂದನು.

೮. ರಾಜನು ಈ ಮಾತನ್ನು ಕೇಳಿ ತನಗೆ ಅನುರೂಪೆಯೂ ಧರ್ಮಾಸಕ್ತೆಯೂ ಆದ ಪತ್ನಿಯನ್ನು ಹುಡುಕುವುದಕ್ಕಾಗಿ ದೇಶಾಂತರಕ್ಕೆ ಪ್ರಯಾಣಮಾಡಿದನು.

**ಪತ್ನೀಮನ್ವೇಷಯಾಮಾಸ ಸ್ವಯೋಗ್ಯಾಂ ಧರ್ಮತತ್ಪರಾಂ ।**
**ಪ್ರಾಪ್ತವಾನ್ನ ತು ವಾಮಾಂಗೀಂ ಮನೋವೃತ್ತ್ಯನುಸಾರಿಣೀಂ ॥ ೯ ॥**

**ಸ ಭೂಪೋ ಮಂತ್ರಿಣಂ ಪ್ರಾಹ ನಾರೀಮನ್ವೇಷಯಾದ್ಯ ಭೋಃ ।**
**ನೋಚೇತ್ಪ್ರಾಣಾನಹಂ ತ್ಯಕ್ಷ್ಯೇ ಸತ್ಯಂ ವಾಕ್ಯಂ ಬ್ರವೀಮ್ಯಹಂ ॥ ೧೦ ॥**

**ಇತಿ ಶ್ರುತ್ವಾ ಯಯೌ ಮಂತ್ರೀ ದೇಶಾದ್ದೇಶಾಂತರಂ ಪ್ರತಿ ।**
**ಸಿಂಧುದೇಶೇ ಚ ಸಂಪ್ರಾಪ್ಯ ಸಮುದ್ರಂ ಪ್ರತಿ ಸೋಽಗಮತ್ ॥ ೧೧ ॥**

**ತುಷ್ಟಾವ ಮನಸಾ ಸಿಂಧುಂ ಸರ್ವತೀರ್ಥಪತಿಂ ಶುಭಂ ।**
**॥ ಬುದ್ಧಿಪ್ರಕಾಶ ಉವಾಚ ॥**
**ಸಿಂಧುದೇವ ನಮಸ್ತುಭ್ಯಂ ಸರ್ವರತ್ನಾಲಯ ಪ್ರಭೋ ॥ ೧೨ ॥**

**ಅಹಂ ತೇ ಶರಣಂ ಪ್ರಾಪ್ತಃ ಶರಣಾಗತವತ್ಸಲ ।**
**ತ್ವಾಂ ನಮಾಮಿ ಜಲಾಧೀಶಂ ಗಂಗಾದಿಸರಿತಾಂ ಪತಿಂ ॥ ೧೩ ॥**

---

೯. ಎಲ್ಲೆಲ್ಲಿ ಹುಡುಕಿದರೂ ತನ್ನ ಮನವೊಪ್ಪುವ ನಡವಳಿಕೆಯುಳ್ಳ ಸುಂದರಿ ಸ್ತ್ರೀಯು ಸಿಕ್ಕಲಿಲ್ಲ. ಆಗ ರಾಜನು ಮಂತ್ರಿಯನ್ನು ಕುರಿತು " ಎಲೈ ಅಮಾತ್ಯನೇ !

೧೦ ನನಗೆ ಅನುರೂಪೆಯಾದ ಸ್ತ್ರೀರತ್ನವನ್ನು ಎಲ್ಲಿಯಾದರೂ ಹುಡುಕಿ ಕೂಡಲೇ ಕರೆದುತರಬೇಕು. ಇಲ್ಲವಾದರೆ ನಾನು ಪ್ರಾಣತ್ಯಾಗಮಾಡುತ್ತೇನೆ ಈ ಮಾತು ಸತ್ಯ " ಎಂದು ಹೇಳಿದನು.

೧೧ ಮಂತ್ರಿಯು ಈ ಮಾತನ್ನು ಕೇಳಿ ಆ ಕ್ಷಣವೇ ಕನ್ಯಾನ್ವೇಷಣೆಗಾಗಿ ಹೊರಟು, ದೇಶದೇಶಗಳಲ್ಲೆಲ್ಲಾ ಹುಡುಕಿಕೊಂಡು ಸುತ್ತುತ್ತಾ ಕೊನೆಗೆ ಸಿಂಧುದೇಶ ವನ್ನು ತಲುಪಿ ಅಲ್ಲಿನ ಸಮುದ್ರತೀರಕ್ಕೆ ಹೋದನು. ಅಲ್ಲಿ ನಿಂತು ಸಮಸ್ತತೀರ್ಥ ಗಳಿಗೂ, ಸ್ವಾಮಿಯೂ ಶುಭಕರನೂ, ಆದ ಸಮುದ್ರರಾಜನನ್ನು ಮನಸ್ಸಿನಲ್ಲಿಯೇ ಧ್ಯಾನಿಸಿ ಹೀಗೆ ಸ್ತುತಿಸಿದನು.

೧೨-೧೩. " ಸಮಸ್ತ ರತ್ನಗಳಿಗೂ ಆವಾಸನೂ, ಪ್ರಭುವೂ, ಆದ ಸಮುದ್ರ ದೇವನೇ ! ನಿನ್ನನ್ನು ನಮಿಸುವೆನು. ಮರೆಹೊಕ್ಕವರನ್ನು ಕಾಪಾಡುವ ಮಹಾನು ಭಾವನೇ ! ನಾನು ನಿನ್ನ ಮರೆಹೊಕ್ಕಿದ್ದೇನೆ. ಗಂಗಾದಿ ಪುಣ್ಯನದಿಗಳಿಗೆ ಪತಿಯೂ ಜಲಾಧಿಪತಿಯೂ ಆದ ನಿನಗೆ ನಮಸ್ಕರಿಸುತ್ತೇನೆ ".

ಸ್ತ್ರೀರತ್ನಂ ದೇಹಿ ರಾಜ್ಞೋಽರ್ಥೇ ನೋ ಚೇತ್ಪ್ರಾಣಾಂಸ್ತ್ಯಜಾಮ್ಯಹಂ ।
ಇತಿ ಶ್ರುತ್ವಾ ಪ್ರಸನ್ನಾತ್ಮಾ ಸಾಗರಃ ಸರಿತಾಂ ಪತಿ॥ ॥ ೧೪ ॥

ಜಲೇ ವೃಕ್ಷಂ ಸುವರ್ಣಾಂಗಂ ಪತ್ರವಿದ್ರುಮಕಂ ಮಹತ್ ।
ಮುಕ್ತಾಫಲಾನ್ವಿತಂ ದಿವ್ಯಂ ಮಂತ್ರಿಣೇ ಸಮದರ್ಶಯತ್ ॥ ೧೫ ॥

ತಸ್ಯೋಪರಿ ಸ್ಥಿತಾ ಬಾಲಾ ಸುಕುಮಾರೀ ಮನೋರಮಾ ।
ತತ್ರೈವ ಸಾ ಲಯಂ ಜಾತಾ ವೃಕ್ಷೇಣ ಸಹ ಭೂಪತೇ ॥ ೧೬ ॥

ಇತಿ ದೃಷ್ಟ್ವಾ ಮಹಾಶ್ಚರ್ಯಂ ನೃಪಾಂತಿಕಮುಪಾಯಯೌ ।
ವರ್ಣಯಿತ್ವಾ ತು ತತ್ಸರ್ವಂ ರಾಜ್ಞಾ ಸಾರ್ಧಂ ಸಮಾಪ್ತವಾನ್ ॥ ೧೭ ॥

---

೧೪. "ಸರ್ವರತ್ನಾಕರನಾದ ಸಮುದ್ರನೇ ! ನೀನು ಕೃಪೆಯಿಟ್ಟು ನಮ್ಮ ರಾಜನಿಗೆ ಅನುರೂಪೆಯಾದ ಸ್ತ್ರೀರತ್ನವನ್ನು ಕರುಣಿಸು, ಇಲ್ಲವಾದರೆ ನಾನು ಇಲ್ಲೇ ಪ್ರಾಣಬಿಡುವೆನು" ಎಂದು ಹೇಳಿದನು.

೧೫. ನದಿಗಳೊಡೆಯನಾದ ಸಮುದ್ರರಾಜನು ಮಂತ್ರಿಯ ಈ ಮಾತನ್ನು ಕೇಳಿ ಪ್ರಸನ್ನಹೃದಯನಾಗಿ ಸಮುದ್ರದ ನೀರಿನ ಮಧ್ಯೆ, ಚಿನ್ನದ ಕೊಂಬೆಗಳೂ, ಹವಳದ ಎಲೆಗಳೂ, ಮುತ್ತುಗಳೆಂಬ ಹಣ್ಣುಗಳೂ, ಉಳ್ಳ ದಿವ್ಯವಾದ ವೃಕ್ಷವೊಂದು ಮಂತ್ರಿಗೆ ಗೋಚರವಾಗುವಂತೆ ಮಾಡಿದನು.

೧೬. ಆ ವೃಕ್ಷದಮೇಲೆ ಮನೋಹರವಾದ ರೂಪುಳ್ಳವಳೂ, ಸುಕುಮಾರಿಯೂ ಆದ ಹುಡುಗಿಯೊಬ್ಬಳು ಇದ್ದಳು. ಅವಳು ಆ ವೃಕ್ಷದೊಡನೆ ಅಲ್ಲಿಯೇ ಅದೃಶ್ಯಳಾದಳು.

೧೭. ಅತ್ಯಾಶ್ಚರ್ಯಕರವಾದ ಈ ದೃಶ್ಯವನ್ನು ನೋಡಿ, ವಿಸ್ಮಿತನಾಗಿ ಆ ಮಂತ್ರಿಯು ಅಲ್ಲಿಂದ ಹೊರಟು ರಾಜನ ಬಳಿಗೆ ಬಂದನು. ಸಮುದ್ರದಲ್ಲಿ ತಾನು ಕಂಡುದನ್ನೆಲ್ಲಾ ವಿವರವಾಗಿ ಪ್ರಭುಸಮ್ಮುಖದಲ್ಲಿ ತಿಳಿಸಿ ರಾಜನನ್ನೊಡಗೊಂಡು ಸಿಂಧುದೇಶದ ಸಮುದ್ರತೀರದ ಆ ಪ್ರದೇಶಕ್ಕೆ ಬಂದನು.

ತಥಾವಿಧಂ ನೃಪೋ ದೃಷ್ಟ್ವಾ ಸಾಗರಾಂತಮುಪಾಯಯೌ ।
ಬಾಲಯಾ ಸಹ ಪಾತಾಲಂ ಪ್ರಾಪ್ತವಾನ್ ಭೂಪತಿಃ ಸ್ವಯಂ ॥ ೧೮ ॥

ತಾಂ ನಾರೀಂ ಪ್ರಾಹ ನಮ್ರಾತ್ಮಾ ತ್ವದರ್ಥೇಽಹಂ ಸಮಾಗತಃ ।
ಗಾಂಧರ್ವೇಣ ವಿವಾಹೇನ ಮಾಂ ಪ್ರಾಪಯ ವರಾನನೇ ॥ ೧೯ ॥

ವಿಹಸ್ಯ ಸಾಽಽಹ ತಂ ಭೂಪಂ ಕೃಷ್ಣಪಕ್ಷೇ ಚತುರ್ದಶೀ ।
ತದ್ದಿನೇಽಹಂ ಸಮಾಗತ್ಯ ತ್ವಾಂ ಭಜಾಮಿ ನೃಪೋತ್ತಮ ॥ ೨೦ ॥

ಇತಿ ಶ್ರುತ್ವಾ ಸ ನೃಪತಿಸ್ತದ್ದಿನೇ ಸ್ಮರವಿಹ್ವಲಃ ।
ಖಡ್ಗಹಸ್ತೋ ಯಯೌ ತತ್ರ ಯತ್ರ ದೇವೀಗೃಹೋತ್ತಮಂ ॥ ೨೧ ॥

ಏತಸ್ಮಿನ್ನಂತರೇ ತತ್ರ ರಾಕ್ಷಸೋ ಬಕವಾಹನಃ ।
ತಾಂ ಬಾಲಾಂ ಸ ಚ ಪಸ್ಪರ್ಶ ನೃಪಃ ಕ್ರೋಧಾತುರೋಽಭವತ್ ॥ ೨೨ ॥

---

೧೮. ಅಲ್ಲಿ ಮಂತ್ರಿಯು ಹೇಳಿದ ರೀತಿಯಲ್ಲಿಯೇ ಇದ್ದುದನ್ನು ನೋಡಿ ರಾಜನು ಕೂಡಲೆ ಸಮುದ್ರದೊಳಕ್ಕೆ ಪ್ರವೇಶಿಸಿದನು.

೧೯. ಹೀಗೆ ಪ್ರವೇಶಿಸಿದ ರಾಜನು ಆ ಬಾಲೆಯನ್ನು ಹಿಂಬಾಲಿಸಿ ಹೋಗುತ್ತಾ ಪಾತಾಳವನ್ನು ಸೇರಿದನು. ಹೋಗುವಾಗ ನಮ್ರತೆಯಿಂದ ಕೂಡಿದವನಾಗಿ "ಎಲೌ ಸುಂದರೀ! ನಾನು ನಿನ್ನನ್ನು ಪಡೆಯುವುದಕ್ಕಾಗಿ ಬಂದಿದ್ದೇನೆ. ಗಾಂಧರ್ವವಿವಾಹ ವಿಧಿಯಿಂದ ನನ್ನೊಡನೆ ಸೇರು" ಎಂದು ಕೇಳಿಕೊಂಡನು.

೨೦. ಈ ಮಾತನ್ನು ಕೇಳಿ ಆ ಬಾಲೆಯು ನಕ್ಕು "ಅಯ್ಯಾ ರಾಜಶ್ರೇಷ್ಠನೇ! ಈ ಕೃಷ್ಣಪಕ್ಷದ ಚತುರ್ದಶಿಯದಿನ ನಾನು ನಿನ್ನಲ್ಲಿಗೆ ಬಂದು ನಿನ್ನನ್ನು ಸೇವಿಸುತ್ತೇನೆ" ಎಂದು ಹೇಳಿದಳು.

೨೧. ಬಾಲೆಯ ಈ ಮಾತನ್ನು ಕೇಳಿ ಆ ರಾಜನು ಆ ಕೃಷ್ಣಚತುರ್ದಶಿಯ ವರೆಗೂ ನಿರೀಕ್ಷಿಸಿದನು. ಆ ಚತುರ್ದಶಿಯದಿನ ಮನ್ಮಥಾವಸ್ಥೆಯಿಂದ ವಿಹ್ವಲನಾಗಿ ಕೈಯಲ್ಲಿ ಖಡ್ಗವನ್ನು ಹಿಡಿದು ಆ ದೇವಿಯ ನಿವಾಸದ ಬಳಿಗೆ ಸಾಗಿದನು.

೨೨. ಇಷ್ಟರಲ್ಲಿ ಬಕವಾಹನನಾದ ರಾಕ್ಷಸನೊಬ್ಬನು ಅಲ್ಲಿಗೆ ಬಂದು ಆ ಬಾಲೆಯನ್ನು ಹಿಡಿದುಕೊಂಡನು. ಅಷ್ಟರೊಳಗೆ ಅಲ್ಲಿಗೆ ಬಂದಿದ್ದ ರಾಜನು ಇದನ್ನು ಕಂಡು ಕೋಪಾವಿಷ್ಟನಾದನು,

ಕಾಮಾಂಧೋ ರಾಕ್ಷಸಂ ಹತ್ವಾ ಸ್ವಪತ್ನೀಂ ಪ್ರಾಹ ನಿರ್ಭಯಾಂ ।
ಕೋಽಯಂ ತೇಽತ್ರ ಸಮಾಯಾತಃ ಕಾರಣಂ ವದ ಭಾಮಿನಿ ॥ ೨೩ ॥

ಸಾಹ ಭೋಃ ಶೃಣು ಭೂಪಾಲ ವಿದ್ಯಾಧರಸುತಾ ಹ್ಯಹಂ ।
ಪಿತೃಪ್ರಿಯಾ ಮದವತೀ ಕಾಮಾರ್ತಾ ವನಮಾಗತಾ ॥ ೨೪ ॥

ನಾಗತಾ ಭೋಜನೇ ಕಾಲೇ ಪಿತೃಮಾತ್ರೋಶ್ಚ ಮಂದಿರೇ ।
ಜ್ಞಾತ್ವಾ ಧ್ಯಾನೇನ ಮತ್ಪಿತ್ರಾ ಶಾಪಿತಾ ತಚ್ಛೃಣುಷ್ವ ಭೋಃ ॥ ೨೫ ॥

ಅದ್ಯ ಕೃಷ್ಣಚತುರ್ದಶ್ಯಾಂ ತ್ವಾಂ ಭಜಿಷ್ಯತಿ ರಾಕ್ಷಸಃ ।
ಕೃಷ್ಣಪಕ್ಷಚತುರ್ದಶ್ಯಾಂ ಭುಂಕ್ಷ್ವ ತ್ವಮಪರಾಧಕಂ ॥ ೨೬ ॥

ತದಾಹಂ ರೋದನಂ ಕೃತ್ವಾ ಬ್ರವೀಮಿ ಪಿತರಂ ಪ್ರತಿ ।
ಕದಾ ಮುಕ್ತಿರ್ಭವೇದ್ದೇವ ತತ್ತ್ವಂ ಕಥಯ ಸುವ್ರತ ॥ ೨೭ ॥

---

೨೩. ಕೋಪದಿಂದಲೂ ಕಾಮಬಾಧೆಯಿಂದಲೂ ಆವೃತನಾಗಿ ಮುಂದು ಗಾಣದ ರಾಜನು, ಆ ರಾಕ್ಷಸನನ್ನು ಕೊಂದುಹಾಕಿದನು, ಆ ಬಾಲೆಗೆ ಭೀತಿಯು ನಿವಾರಣೆಯಾದಮೇಲೆ ಆಕೆಯನ್ನು ಕುರಿತು, “ಎಲೌ ಸುಂದರೀ ! ಈಗ ನಿನ್ನ ಬಳಿಗೆ ಬಂದಿದ್ದವನು ಯಾರು ? ಏತಕ್ಕೆ ಬಂದಿದ್ದನು ಹೇಳು” ಎಂದು ಕೇಳಿದನು.

೨೪. ಆಗ ಅವಳು ರಾಜನನ್ನು ಕುರಿತು “ಎಲೈ ಭೂಪಾಲನೇ ! ಕೇಳು, ನಾನು ವಿದ್ಯಾಧರರಾಜನ ಮಗಳು, ನನ್ನ ತಂದೆಗೆ ಮುದ್ದಿನ ಮಗಳಾದ ನನ್ನ ಹೆಸರು ಮದವತಿ. ಒಂದು ದಿನ ನಾನು ಕಾಮಪೀಡಿತೆಯಾಗಿ ವನಕ್ಕೆ ಹೋದೆನು.

೨೫ ಹಾಗೆ ವನವಿಹಾರಕ್ಕೆ ಹೋದ ನಾನು ಊಟದವೇಳೆಗೆ ತಾಯಿತಂದೆಗಳ ಬಿಡಾರಕ್ಕೆ ಬರಲಿಲ್ಲ. ಹೀಗೆ ನಾನು ಬಾರದಿರುವುದರ ಕಾರಣವನ್ನು ನನ್ನ ತಂದೆಯು ಧ್ಯಾನಯೋಗದಿಂದ ತಿಳಿದುಕೊಂಡನು.

೨೬. ಅಯ್ಯಾ ರಾಜೋತ್ತಮ ! ಕೇಳು ಅನಂತರ ಆತನು “ಈ ಕೃಷ್ಣಚತುರ್ದಶಿಯ ದಿವಸ ಒಬ್ಬ ರಾಕ್ಷಸನು ನಿನ್ನನ್ನು ಆಕ್ರಮಿಸುವನು. ನಿನ್ನ ಅಪರಾಧದ ಫಲವನ್ನು ನೀನು ಆದಿನ ಅನುಭವಿಸು” ಎಂಬದಾಗಿ ಶಪಿಸಿದನು.

೨೭. ಆ ಮಾತನ್ನು ಕೇಳಿ ಆಗ ನಾನು ಅಳುತ್ತಾ ತಂದೆಯನ್ನು ಕುರಿತು “ಸ್ವಾಮಿ ನಿಯಮಿಷ್ಠನಾದ ತಂದೆಯೇ ! ಈ ಶಾಪದಿಂದ ನನಗೆ ಎಂದಿಗೆ ಬಿಡುಗಡೆ ? ನಿಜವಾಗಿ ಹೇಳು” ಎಂದು ಕೇಳಿಕೊಂಡೆನು.

**ಸ ಹೋವಾಚ ಕುಮಾರಿ ತ್ವಂ ವೀರಭುಕ್ತಾ ಭವಿಷ್ಯಸಿ ।**
**ತದಾ ಶಾಪಸ್ಯ ಮುಕ್ತಿರ್ವೈ ಸ ಸ್ಯಾತ್ತ್ವವಿನೋಚಿತಾ ॥ ೨೮ ॥**

**ತ್ವದಾಜ್ಞಯಾಹಂ ಯಾಸ್ಯಾಮಿ ಭೋ ರಾಜನ್ ಪಿತೃಮಂದಿರೇ ।**
**ಇತಿ ಶ್ರುತ್ವಾ ನೃಪಃ ಪ್ರಾಹ ಮಮ ಗೇಹಂ ಸಮಾವ್ರಜ ॥ ೨೯ ॥**

**ತ್ವಯಾ ಸಾರ್ಧಂ ಗಮಿಷ್ಯಾಮಿ ಗೃಹಂ ವಿದ್ಯಾಧರಸ್ಯ ತತ್ ।**
**ತಥೇತ್ಯುಕ್ತ್ವಾ ತು ಸಾ ದೇವೀ ನೃಪಗೇಹಂ ಸಮಾಯಯೌ ॥ ೩೦ ॥**

**ತದಾ ತು ನಗರೇ ತಸ್ಮಿನ್ ನರೈರ್ಜಾತಂ ಮಹೋತ್ಸವಂ ।**
**ಮಂತ್ರೀ ದೃಷ್ಟ್ವಾ ತು ತಂ ಭೂಪಂ ದಿವ್ಯಪತ್ನೀಸಮನ್ವಿತಂ ॥ ೩೧ ॥**

**ಪಂಚತ್ವಮಗಮತ್ತೂರ್ಣಂ ಕುತೋ ಹೇತೋರ್ಹಿ ತದ್ವದ ।**
**॥ ರಾಜೋವಾಚ ॥**
**ಮಂತ್ರೀ ಬುದ್ಧಿಪ್ರಕಾಶಸ್ತು ದೃಷ್ಟ್ವಾ ದೇವೀಂ ಸಮಾಗತಾಂ ॥ ೩೨ ॥**

---

೨೮. ಆಗ ಆತನು "ಮಗಳೇ! ಯಾವಾಗ ನೀನು ವೀರನಿಂದ ಉಪಭೋಗಿಸಲ್ಪಡುವೆಯೋ ಆಗ ನಿನಗೆ ಶಾಪದಿಂದ ಬಿಡುಗಡೆಯಾಗುವುದು, ಅವನೇ ನಿನ್ನನ್ನು ಬಿಡಿಸುವನು ಎಂದು ಹೇಳಿದ್ದನು."

೨೯. "ಎಲೈ ರಾಜನೇ! ನಿನ್ನ ಅನುಜ್ಞೆಯಾದರೆ ಇನ್ನು ನಾನು ನನ್ನ ತಂದೆಯ ಮನೆಗೆ ಹೋಗುವೆನು" ಎಂದಳು. ಆ ಮಾತನ್ನು ಕೇಳಿ ರಾಜನು "ಈಗ ನೀನು ನನ್ನ ಮನೆಗೆ ಬಾ, ನಿನ್ನ ಜತೆಯಲ್ಲಿ ನಾನೂ ಆ ವಿದ್ಯಾಧರರಾಜನ ಮನೆಗೆ ಬರುವೆನು" ಎಂದನು

೩೦-೩೧. ಆಗ ಆ ಬಾಲೆಯು "ಹಾಗೆಯೇ ಆಗಲಿ" ಎಂದು ಒಪ್ಪಿ ರಾಜಧಾನಿಯಲ್ಲಿದ್ದ ಆತನ ಅರಮನೆಗೆ ಬಂದಳು. ರಾಜನು ಪತ್ನೀಸಮೇತನಾಗಿ ಬಂದುದನ್ನು ಕಂಡು, ಆ ಪಟ್ಟಣದ ಜನರಿಗೆಲ್ಲಾ ಮಹಾನಂದವುಂಟಾಯಿತು. ದಿವ್ಯಸುಂದರಿಯಾದ ಪತ್ನಿಯೊಡಗೂಡಿ ಬಂದ ರಾಜನನ್ನು ನೋಡಿ ಮಂತ್ರಿಯು ಜಾಗ್ರತೆ ಪ್ರಾಣತ್ಯಾಗ ಮಾಡಿದನು. ಎಲೈ ವಿಕ್ರಮರಾಜನೇ! ಇದಕ್ಕೆ ಕಾರಣವೇನು? ಹೇಳು" ಎಂದು ಕೇಳಿದನು.

೩೨-೩೩. ಆ ವಿಕ್ರಮರಾಜನು ಅದಕ್ಕೆ ಉತ್ತರವಾಗಿ "ಬುದ್ಧಿ ಪ್ರಕಾಶ ಮಂತ್ರಿಯು ರಾಜನೊಡನೆ ಬಂದ ರಾಣಿಯನ್ನು ನೋಡಿ ತನ್ನ ಮನದಲ್ಲಿ ಬಹುದೂರ

ನೃಪಂ ಸ ಹೃದಿ ಸಂಧ್ಯಾತ್ವಾ ರಾಜ್ಯಭಂಗಭಯಾತುರಃ ।
ತ್ಯಕ್ತ್ವಾ ಪ್ರಾಣಾನ್ ಯಯೌ ಸ್ವರ್ಗಂ ಶ್ರುಣುಯಾತ್ಕಾರಣಂ ಶುಭಂ ॥

ವಿಷಯೀ ಯೋ ಹಿ ಭೂಪಾಲಸ್ತಸ್ಯ ರಾಜ್ಯವಿನಾಶನಂ ।
ಸ್ತ್ರೀಮುದಂ ಪ್ರಾಪ್ಯ ರಾಜ್ಯಸ್ಯ ಸದಾ ಹಾನಿಮವಾಪ್ನುಯಾತ್ ॥ ೩೪ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಏಕಾದಶೋಽಧ್ಯಾಯಃ



---

ಆಲೋಚಿಸಿ ಇನ್ನು ರಾಜ್ಯಾಡಳಿತವು ಸುಗಮವಾಗದೆ ಭಂಗವುಂಟಾಗುವುದೆಂಬ ಭೀತಿಯುಕ್ತನಾಗಿ ತಾನೇ ಪ್ರಾಣತ್ಯಾಗಮಾಡಿ ಸ್ವರ್ಗವನ್ನು ಸೇರಿದನು. ಅವನ ಪ್ರಾಣತ್ಯಾಗಕ್ಕೆ ಇದೇ ಶುಭಕಾರಣವು, ತಿಳಿಯಿತೆ"

೩೪. "ಯಾವ ರಾಜನು ವಿಷಯಸುಖಾಸಕ್ತನಾಗುವನೋ ಅವನ ರಾಜ್ಯಕ್ಕೆ ನಾಶವುಂಟಾಗುವುದು. ರಾಜನು ಸ್ತ್ರೀಮುದವುಳ್ಳವನಾದರೆ ರಾಜ್ಯಕ್ಕೆ ಯಾವಾಗಲೂ ಹಾನಿ ತಪ್ಪಿದ್ದೇ ಅಲ್ಲ ಎಂಬ ಭೀತಿಯೇ ಅವನ ಪ್ರಾಣತ್ಯಾಗಕ್ಕೆ ಕಾರಣ" ಎಂದು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವ ದ್ವಿತೀಯ ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯದಲ್ಲಿ ಹನ್ನೊಂದನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ದ್ವಾದಶೋಽಧ್ಯಾಯಃ

---

॥ ಸೂತ ಉವಾಚ ॥

ವಿಹಸ್ಯ ಸ ತು ವೈತಾಲೋ ರಾಜಾನಮಿದಮಬ್ರವೀತ್ ।
ರಾಜಂಶ್ಚೂಡಾಪುರೇ ರಮ್ಯೇ ಭೂಪಶ್ಚೂಡಾಮಣಿಃ ಸ್ಮೃತಃ ॥ ೧ ॥

ದೇವಸ್ವಾಮೀ ಗುರುಸ್ತಸ್ಯ ವೇದವೇದಾಂಗಪಾರಗಃ ।
ತಸ್ಯ ಪತ್ನೀ ವಿಶಾಲಾಕ್ಷೀ ಪತಿಧರ್ಮಪರಾಯಣಾ ॥ ೨ ॥

ಶಿವಮಾರಾಧಯಾಮಾಸ ಪುತ್ರಾರ್ಥೇ ವರವರ್ಣಿನೀ ।
ರುದ್ರಸ್ಯ ವರದಾನೇನ ಕಾಮದೇವಸಮಃ ಸುತಃ ॥ ೩ ॥

## ಹನ್ನೆರಡನೆಯ ಅಧ್ಯಾಯ

೧. ಸೂತಮುನಿವರ್ಯನು ಶೌನಕನನ್ನು ಕುರಿತು ಹೇಳುತ್ತಾನೆ—ಆಗ ಆ ಬೇತಾಳವು ನಕ್ಕು ರಾಜನನ್ನು ಕುರಿತು “ಓ ಪ್ರಭುವೇ ! ಚೂಡಾಪುರವೆಂಬುದೊಂದು ಸುಂದರವಾದಪಟ್ಟಣ. ಅಲ್ಲಿಗೆ ಚೂಡಾಮಣಿಯೆಂಬವನು ರಾಜನಾಗಿದ್ದನು.

೨. ವೇದವೇದಾಂಗಪಾರಂಗತನಾದ ದೇವಸ್ವಾಮಿಯೆಂಬುವನು ಅವನಿಗೆ ಗುರುವಾಗಿದ್ದನು. ಪತಿಯ ಧರ್ಮಾಚರಣೆಯಲ್ಲಿ ನಿರತೆಯಾದ ವಿಶಾಲಾಕ್ಷಿ ಎಂಬವಳು ಆತನ ಪತ್ನಿಯಾಗಿದ್ದಳು.

೩. ಸುಂದರಿಯಾದ ಆಕೆಯು ಪುತ್ರನನ್ನು ಪಡೆಯಬೇಕೆಂಬ ಉದ್ದೇಶದಿಂದ ಶಿವನನ್ನು ಆರಾಧಿಸಿದಳು. ಪರಮೇಶ್ವರನು ಅನುಗ್ರಹಮಾಡಿದುದರಿಂದ ಆಕೆಗೆ ಮನ್ಮಥನಂತೆ ಸುಂದರನಾದ ಒಬ್ಬ ಮಗನು ಜನಿಸಿದನು.

ಹರಿಸ್ವಾಮೀತಿ ವಿಖ್ಯಾತೋ ಜಾತೋ ದೇವಾಂಶವಾನ್ ಬಲೀ ।
ಸರ್ವಸಂಪತ್ಸಮಾಯುಕ್ತೋ ದೇವತುಲ್ಯಸುಖೀ ಕ್ಷಿತೌ ॥ ೪ ॥

ರೂಪಲಾವಣ್ಯಿಕಾ ನಾಮ್ನಾ ತತ್ಪತ್ನೀ ಹಿ ಸುರಾಂಗನಾ ।
ಜಾತಾ ದೇವಲಶಾಪೇನ ತಸ್ಯ ನಂದನತೋ ನೃಪ ॥ ೫ ॥

ಏಕದಾ ಪತಿನಾ ಸಾರ್ಧಂ ವಸಂತೇ ಕುಸುಮಾಕರೇ ।
ಪರ್ಯಂಕೇ ಸುಷ್ವಾಪ ಸಂಪ್ರೀತ್ಯಾ ಶಯ್ಯಾಮಧ್ಯಾಸ್ಯ ಸುಂದರೀ ॥ ೬ ॥

ಸುಕಲೋ ನಾಮ ಗಂಧರ್ವಸ್ತಸ್ಯಾ ರೂಪೇಣ ಮೋಹಿತಃ ।
ತಾಂ ಜಹಾರ ವಿಮಾನೇ ಸ್ವೇ ಸಂಸ್ಥಾಪ್ಯ ಸ್ವಪುರಂ ಯಯೌ ॥ ೭ ॥

ಪ್ರಬುದ್ಧಃ ಸ ತು ತಾಂ ನಾರೀಂ ಮೃಗಯಾಮಾಸ ವಿಹ್ವಲಃ ।
ನ ಲಬ್ಧೋ ವ್ಯಾಕುಲೋ ಭೂತ್ವಾ ದೇಶಂ ತ್ಯಕ್ತ್ವಾ ವನಂ ಗತಃ ॥ ೮ ॥

---

೪. ದೇವಾಂಶಸಂಭೂತನೂ, ಬಲಶಾಲಿಯೂ ಆದ ಅವನು, ಹರಿಸ್ವಾಮಿಯೆಂಬ ಹೆಸರುಳ್ಳವನಾಗಿ, ಭೂಮಂಡಲದಲ್ಲಿ ಸಮಸ್ತ ಸಂಪತ್ತಿನಿಂದ ಕೂಡಿದವನೆಂದೂ, ದೇವತೆಗಳಿಗೆ ಸಮನಾಗಿ ಸುಖಾನುಭವಮಾಡುವನೆಂದೂ ಪ್ರಖ್ಯಾತನಾದನು.

೫. ಅಯ್ಯಾ ರಾಜನೇ ! ದೇವಲನೆಂಬವನ ಶಾಪತಟ್ಟಿ, ಇಂದ್ರಲೋಕದಿಂದ ಭ್ರಷ್ಟಳಾದ ದೇವತಾಸ್ತ್ರೀಯು ಈ ಲೋಕದಲ್ಲಿ ಜನಿಸಿ, ರೂಪಲಾವಣ್ಯಿಕೆಯೆಂಬ ಹೆಸರಿನಿಂದ ಆ ಹರಿಸ್ವಾಮಿಯ ಪತ್ನಿಯಾದಳು.

೬. ಕುಸುಮಸಮೃದ್ಧವಾದ ವಸಂತಮಾನದಲ್ಲಿ ಒಂದಾನೊಂದುದಿನ ಸುಂದರಿಯಾದ ಆಕೆಯು ಉಪ್ಪರಿಗೆಯಮೇಲೆ ಪತಿಯೊಡನೆ ಹಾಸಿಗೆಯಲ್ಲಿ ಮಲಗಿದ್ದಳು.

೭. ಅವಳ ಸೌಂದರ್ಯವನ್ನು ನೋಡಿ, ಸುಕಲನೆಂಬ ಗಂಧರ್ವನು ಮೋಹಿಸಿ, ಆಕೆಯನ್ನು ಅಪಹರಿಸಿ ತನ್ನ ವಿಮಾನದಲ್ಲಿರಿಸಿಕೊಂಡು ತನ್ನ ಲೋಕಕ್ಕೆ ಹೊರಟು ಹೋದನು.

೮. ಇತ್ತ ಹರಿಸ್ವಾಮಿಯು ನಿದ್ದೆಯಿಂದ ಎಚ್ಚೆತ್ತು, ತನ್ನ ಪ್ರಿಯೆಯನ್ನು ಕಾಣದೆ ಧೈರ್ಯಗುಂದಿ, ಎಷ್ಟೋ ವಿಧವಾಗಿ ಹುಡುಕಿದನು. ಆಕೆಯು ಸಿಕ್ಕದೆ ಹೋದುದರಿಂದ ಶೋಕಪೀಡಿತನಾಗಿ ಆ ದೇಶವನ್ನು ಬಿಟ್ಟು ಕಾಡಿಗೆ ಹೋದನು.

**ಸಂನ್ಯಸ್ಯ ವಿಷಯಾನ್ ಸರ್ವಾನ್ ಹರಿಧ್ಯಾನಪರಾಯಣಃ ।**
**ಕದಾಚಿತ್ಪ್ರಾಪ ಸ ಸ್ನೇಹೀ ವಿಪ್ರಗೇಹಮುಪಾಗತಃ ॥ ೯ ॥**

**ಪ್ರಪಚ್ಯ ಪಾಯಸಮಪಿ ವಟವೃಕ್ಷಮುಪಾಶ್ರಿತಃ ।**
**ವೃಕ್ಷೋಪರಿ ನಿಧಾಯಾಶು ನದೀಸ್ನಾನಮಥಾಕರೋತ್ ॥ ೧೦ ॥**

**ಭೋಜನಂ ಚ ತತೋ ರಾಜನ್ ಸರ್ಪೇಣ ಗರಲೀಕೃತಂ ।**
**ತತೋ ಯತಿಃ ಸಮಾಯಾತೋ ಭುಕ್ತ್ವಾ ಮುದಮುಪಾಯಯೌ ॥ ೧೧ ॥**

**ವಿಷೇಣ ಪೀಡಿತತನುಂ ದೃಷ್ಟ್ವಾ ಬ್ರಾಹ್ಮಣಮಬ್ರವೀತ್ ।**
**ತ್ವಯಾ ಪ್ರದತ್ತಂ ಮೂರ್ಖೇಣ ಪಾಯಸಂ ವಿಷಮಿಶ್ರಿತಂ ॥ ೧೨ ॥**

**ಮರಣಂ ಯಾಮಿ ಭೋ ದುಷ್ಟ ಬ್ರಹ್ಮಹತ್ಯಾಮವಾಪ್ಸ್ಯಸಿ ।**
**ಇತ್ಯುಕ್ತ್ವಾ ಮರಣಂ ಪ್ರಾಪ್ಯ ಶಿವಲೋಕಮುಪಾಯಯೌ ॥ ೧೩ ॥**

---

೯. ಬಳಿಕ ಹರಿಸ್ವಾಮಿಯು ವಿಷಯಾಪೇಕ್ಷೆಯನ್ನು ಸಂಪೂರ್ಣವಾಗಿ ವರ್ಜ್ಯಮಾಡಿ ವಿರಕ್ತಯತಿಯಾಗಿ ವಿಷ್ಣುಧ್ಯಾನದಲ್ಲಿ ಆಸಕ್ತನಾಗಿರುತ್ತಾ ಒಂದುದಿನ ತನ್ನ ಹಳೆಯ ಸ್ನೇಹಿತನಾದ ಒಬ್ಬ ವಿಪ್ರನ ಬಳಿಗೆ ಹೋದನು.

೧೦. ಅವನು ನದೀತೀರದ ಒಂದು ಆಲದಮರದ ಬುಡದಲ್ಲಿ ಪಾಕಾರ್ಥವಾಗಿ ಒಲೆಯನ್ನು ಹೂಡಿ, ಪಾಯಸವನ್ನು ಮಾಡಿ ಆ ಪಾಯಸದ ಪಾತ್ರೆಯನ್ನು ಆ ಮರದಮೇಲೆ ಇರಿಸಿ ನದಿಗೆ ಇಳಿದು ಹೋದನು. ಅಲ್ಲಿ ಹೋಗಿ ಪ್ರಕೃತಕಾರ್ಯವನ್ನು ಮಾಡಿಕೊಂಡು ಬರುವುದರೊಳಗೆ ಮರದಲ್ಲಿದ್ದ ಒಂದು ಸರ್ಪವು ಆ ಪಾಯಸವನ್ನು ವಿಷಮಿಶ್ರವಾದುದನ್ನಾಗಿ ಮಾಡಿತು.

೧೧-೧೨. ಆಮೇಲೆ ಯತಿಯು ಬಂದು ಸಿದ್ಧಪಡಿಸಿಟ್ಟಿದ್ದ ಆ ಪಾಯಸವನ್ನು ಭುಂಜಿಸಿ, ವಿಷಪೀಡಿತನಾದನು. ವಿಷಜ್ವಾಲೆಯಿಂದ ಆ ಸ್ಥಿತಿಗೆ ಬಂದ ತನ್ನ ಶರೀರವನ್ನು ನೋಡಿಕೊಂಡು ಆ ಬ್ರಾಹ್ಮಣನನ್ನು ಕುರಿತು "ಮೂರ್ಖ! ವಿಷಮಿಶ್ರಮಾಡಿ ನನಗೆ ಪಾಯಸವನ್ನು ಕೊಟ್ಟಿದ್ದೀಯಾ! ಎಲಾ ಕೇಡಿಗ! ನಾನು ಸತ್ತು ಹೋಗುತ್ತೇನೆ. ನಿನಗೆ ಬ್ರಹ್ಮಹತ್ಯಾದೋಷ ತಟ್ಟುವುದು."

೧೩-೧೪. ಹೀಗೆಂದು ಹೇಳಿ ಆ ಯತಿಯು ಪ್ರಾಣಬಿಟ್ಟನು. ಯತಿಧರ್ಮದಿಂದಿದ್ದ ಅವನಿಗೆ ದೇವಲೋಕ ಪ್ರಾಪ್ತಿಯಾಯಿತು. ಅಲ್ಲಿ ಇದ್ದ ರೂಪಲಾವಣ್ಯಶಾ

ರೂಪತೇಜೋಯುತಾಂ ದೇವೀಂ ಗೃಹೀತ್ವಾ ಸುಖಮಾಪ್ತವಾನ್ ।
ಇತ್ಯುಕ್ತ್ವಾ ಸ ತು ವೈತಾಲೋ ರಾಜಾನಮಿದಮಬ್ರವೀತ್ ॥ ೧೪ ॥

॥ ರಾಜೋವಾಚ ॥

ಕಸ್ಮೈ ಪ್ರಾಪ್ತಾ ಬ್ರಹ್ಮಹತ್ಯಾ ತೇಷಾಂ ಮಧ್ಯೇ ವದಸ್ವ ಮೇ ।
ಸ್ವಾಭಾವಿಕವಿಷೋ ನಾಗೋ ಹ್ಯಜ್ಞಾನೇನ ವಿಷಂ ಕೃತಂ ॥ ೧೫ ॥

ಅತೋ ದೋಷೀ ಹಿ ಭುಜಗೋ ಬ್ರಹ್ಮಹತ್ಯಾಂ ನ ಚಾಪ್ತವಾನ್ ।
ಬುಭುಕ್ಷಿತೇ ದದೌ ಭಿಕ್ಷಾಂ ಸ ದ್ವಿಜೋ ದೈವಮೋಹಿತಃ । ॥ ೧೬ ॥

ಬ್ರಹ್ಮಹತ್ಯಾಮತೋ ನಾಯಾತ್ಕುಲಧರ್ಮಪರಾಯಣಃ ।
ಆತ್ಮನಾ ಚ ಕೃತಂ ಪಾಪಂ ಭೋಕ್ತವ್ಯಂ ಸರ್ವದಾ ಜನೈಃ ॥ ೧೭ ॥

---

ದೇವಿಯನ್ನು ಹೊಂದಿ ಸುಖಿಯಾದನು'' ಎಂದು ಕಥೆಯನ್ನು ಮುಗಿಸಿ ಬೇತಾಳವು ರಾಜನನ್ನು ಕುರಿತು "ಅಯ್ಯಾ ವಿಕ್ರಮರಾಜನೇ ! ಈ ಸಂದರ್ಭದಲ್ಲಿ ಯಾರಿಗೆ ಬ್ರಹ್ಮಹತ್ಯಾದೋಷ ತಟ್ಟುವುದು ? ಎಂಬುದನ್ನು ನನಗೆ ಹೇಳು" ಎಂದು ಪ್ರಶ್ನಿಸಿತು.

೧೫. ಆ ಮಾತನ್ನು ಕೇಳಿ ರಾಜನು—ಸರ್ಪವು ಸ್ವಭಾವವಾಗಿ ವಿಷಜಂತು. ಅದು ಅಜ್ಞಾನವಶದಿಂದ ಆಹಾರವನ್ನು ವಿಷಮಿಶ್ರಮಾಡಿತು. ಸರ್ಪವು ತಪ್ಪುಕೆಲಸ ಮಾಡಿದಾಗ್ಯೂ ಅಜ್ಞಾನದಿಂದ ಮಾಡಿದಕಾರಣ ಅದಕ್ಕೆ ಬ್ರಹ್ಮಹತ್ಯಾದೋಷ ತಟ್ಟುವುದಿಲ್ಲ.

೧೬. ಆ ವಿಪ್ರನು ದೈವಮೋಹಿತನಾಗಿ ಆ ಆಹಾರವು ವಿಷಮಿಶ್ರವೆಂದು ತಿಳಿಯದೆ ಯತಿಗೆ ಪಾಯಸವನ್ನು ಭಿಕ್ಷಾಸಮರ್ಪಣೆ ಮಾಡಿದನು. ತನ್ನ ಕುಲಧರ್ಮವನ್ನು ತಪ್ಪದೆ ನಡೆಯಿಸುವುದರಲ್ಲಿ ಆಸಕ್ತನಾಗಿದ್ದಕಾರಣ ಆ ಪಾಯಸವು ವಿಷಮಿಶ್ರವಾಗಿದೆಯೆಂಬ ಅರಿವು ಇಲ್ಲದೆ ಹಸಿದ ಯತಿಗೆ ಭಿಕ್ಷೆ ಕೊಟ್ಟಕಾರಣ ಅವನಿಗೂ ಬ್ರಹ್ಮಹತ್ಯಾದೋಷ ತಟ್ಟುವುದಿಲ್ಲ.

೧೭-೧೯. ಲೋಕದಲ್ಲಿ ಜನಗಳು ಹಿಂದೆ ಮಾಡಿದ್ದರ ಫಲವನ್ನು ಎಂದಾದರೂ ತಪ್ಪದೆ ಅನುಭವಿಸಬೇಕು. ಅತಿಥಿಗೆ ಅವಮಾನಮಾಡುವುದೂ ಒಂದು ಬಗೆಯ ಬ್ರಹ್ಮಹತ್ಯೆ. ಶರೀರತ್ಯಾಗವೂ ಒಂದು ಬ್ರಹ್ಮಹತ್ಯವೇ ! ಈ ಸಂದರ್ಭದಲ್ಲಿ ಬ್ರಾಹ್ಮಣನು ಅತಿಥಿಗೆ ಅವಮಾನಮಾಡದೆ ಸತ್ಕಾರ ಮಾಡಬೇಕೆಂಬದಾಗಿಯೇ ಹೀಗೆ

**ಆತ್ಮತ್ಯಾಗೋ ಬ್ರಹ್ಮಹತ್ಯಾ ಚಾತಿಥೇಶ್ಚಾವಮಾನನಂ ।**
**ಬ್ರಹ್ಮಹತ್ಯಾ ತದಾ ಜ್ಞೇಯಾ ವಿಷದತ್ತೇನ ಸಾ ತಥಾ ॥ ೧೮ ॥**

**ಆತ್ಮತ್ಯಾಗಃ ಸ್ಮೃತೋ ದೈವಾತ್ ತಸ್ಮಾತ್ಸೋಽಪಿ ನ ಪಾಪವಾನ್ ।**
**ಯೈರ್ನರೈಃ ಕಥಿತಾ ವಾರ್ತಾ ಬ್ರಹ್ಮಹತ್ಯಾ ತ್ವಯಾ ಕೃತಾ ॥ ೧೯ ॥**

**ತೇಷಾಂ ಬ್ರಾಹ್ಮಣಹತ್ಯಾ ಸಾ ನ್ಯಾಯಭ್ರಷ್ಟವತಾಂ ನೃಣಾಂ ॥ ೨೦ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ ಖಂಡೇ ಕಲಿಯುಗೀಯೇತಿ ಹಾಸಸಮುಚ್ಚಯೇ ದ್ವಾದಶೋಽಧ್ಯಾಯಃ.**



---

ಮಾಡಿರುವುದರಿಂದ ಆವನು ಬ್ರಹ್ಮಹತ್ಯಾದೋಷ ಭಾಗಿಯಲ್ಲ. ಯತಿಯ ದೇಹ ತ್ಯಾಗಕ್ಕೆ ಅವನ ಅದೃಷ್ಟವೇ ಕಾರಣ. ಆದುದರಿಂದ ಹಾಗೂ ಆ ವಿಪ್ರನು ಪಾಪಭಾಗಿ ಯಾಗುವುದಿಲ್ಲ.

೨೦. ಅವನು ಬ್ರಹ್ಮಹತ್ಯೆ ಮಾಡಿದನೆಂದು ವಿವೇಕವಿಲ್ಲದೆ ಯಾರು ಹೇಳು ತ್ತಾರೋ ಅವರೇ ಬ್ರಹ್ಮಹತ್ಯಾ ದೋಷಭಾಗಿಗಳು" ಎಂಬದಾಗಿ ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯ ಮಹಾಪುರಾಣದ ಪ್ರತಿಸರ್ಗಪರ್ವದ ದ್ವಿತೀಯ ಖಂಡವಲ್ಲಿ ಕಲಿಯುಗದ ಇತಿಹಾಸಸಮುಚ್ಚಯವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ

## ತ್ರಯೋದಶೋಽಧ್ಯಾಯಃ

॥ ಸೂತ ಉವಾಚ ॥

ಕೃತಕೃತ್ಯಃ ಪ್ರಸನ್ನಾತ್ಮಾ ವೈತಾಲೋ ನೃಪಮಬ್ರವೀತ್ ।
ನಗರೇ ಚಂದ್ರಹೃದಯೇ ರಣಧೀರೋ ನೃಪೋಽಭವತ್ ॥ ೧ ॥

ತತ್ರ ವೈಶ್ಯೋಽವಸದ್ಧರ್ಮೀ ನಾಮ್ನಾ ಧರ್ಮಧ್ವಜೋ ಧನೀ ।
ತಸ್ಯ ಪುತ್ರೀ ಸಮಾಯಾತಾ ಸುಂದರೀ ಸುಖಭಾವಿನೀ ॥ ೨ ॥

ಏಕದಾ ನಗರೇ ತಸ್ಮಿನ್ ಯಾತುಭಕ್ತೋ ನರೋಽಭವತ್ ।
ದ್ಯೂತವಿದ್ಯಾಪರೋ ನಿತ್ಯಂ ಮದ್ಯಮಾಂಸಪರಾಯಣಃ ॥ ೩ ॥

---

### ಹದಿಮೂರನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಆಗ ಕೃತಕೃತ್ಯನೆನಿಸಿದ ಬೇತಾಳವು ಪ್ರಸನ್ನವಾದ ಮನಸ್ಸುಳ್ಳದ್ದಾಗಿ ರಾಜನನ್ನು ಕುರಿತು ಇಂತೆಂದಿತು. ಚಂದ್ರಹೃದಯವೆಂಬ ಪಟ್ಟಣದಲ್ಲಿ ರಣಧೀರನೆಂಬ ರಾಜನಿದ್ದನು.

೨. ಆ ಊರಿನಲ್ಲಿ ಧರ್ಮಿಷ್ಠನಾದ ಧರ್ಮಧ್ವಜನೆಂಬ ವೈಶ್ಯನಿದ್ದನು. ಅವನಿಗೆ ಸುಖಭಾವಿನಿಯೆಂಬ ಹೆಸರುಳ್ಳ ಸುಂದರಿಯಾದ ಮಗಳಿದ್ದಳು. ಅವಳು ಒಂದುದಿನ ನಗರದೊಳಗೆ ಸಂಚಾರ ಹೊರಟಳು.

೩. ಆ ಪಟ್ಟಣದಲ್ಲಿ ವಾಸಿಸುತ್ತಿದ್ದ ಯಾತುಭಕ್ತನೆಂಬ ಒಬ್ಬ ಮನುಷ್ಯನು ಯಾವಾಗಲೂ ಜೂಜಾಡುವುದು, ಮದ್ಯಪಾನ ಇವುಗಳಲ್ಲಿ ನಿರತನಾಗಿದ್ದನು.

**ವಾಶರೋ ನಾಮ ತತ್ರಾಸೀದ್ರಾಕ್ಷಸಃ ಪುರುಷಾದನಃ ।**
**ತಸ್ಮೈ ಮದ್ಯಂ ಚ ಮಾಂಸಂ ಚ ಪ್ರತ್ಯಹಂ ಸ ಹಿ ದತ್ತವಾನ್ ॥ ೪ ॥**

**ಪ್ರಸನ್ನೋ ರಾಕ್ಷಸೋ ಭೂತ್ವಾ ಯಾತುಭಕ್ತಂ ತಮಬ್ರವೀತ್ ।**
**ವರಂ ವರಯ ಯದ್ಯೋಗ್ಯಂ ಮತ್ತಃ ಸರ್ವಮವಾಪ್ಸ್ಯಸಿ ॥ ೫ ॥**

**ಸ ಹೋವಾಚ ವರೋ ಮಹ್ಯಂ ದೇಯಸ್ತೇ ಪುರುಷಾದಕ ।**
**ಗುಪ್ತಗರ್ತಂ ಚ ಭೂಮಧ್ಯೇ ಕುರು ಚೌರನಿರೂಪಣಂ ॥ ೬ ॥**

**ಇತಿ ಶ್ರುತ್ವಾಕರೋದ್ಗರ್ತಂ ನರಬುದ್ಧಿವಿಮೋಹನಂ ।**
**ಸ್ವಯಂ ತತ್ರ ಸ್ಥಿತೋ ದೇವಃ ಸ್ವಭಕ್ತೇನ ಸಮನ್ವಿತಃ ॥ ೭ ॥**

**ತೇನ ರಾತ್ರೌ ತು ಚೌರ್ಯೇಣ ನೃಪದಾಸೀ ವರಾಂಗನಾ ।**
**ಹೃತಾ ಸಂಸ್ಥಾಪಿತಾ ಗರ್ತೇ ಬಹುದ್ರವ್ಯಂ ತಥಾ ಹೃತಂ ॥ ೮ ॥**

---

೪. ಅದೇ ಊರಿನಲ್ಲಿ ನರಭಕ್ಷಕನಾದ ವಾಶರನೆಂಬ ಒಬ್ಬ ರಾಕ್ಷಸನಿದ್ದನು. ಈ ರಾಕ್ಷಸನಿಗೆ ಯಾತುಭಕ್ತನು ನಿತ್ಯವೂ ಮದ್ಯಮಾಂಸಾದಿಗಳನ್ನು ತಂದು ಕೊಡುತ್ತಿದ್ದನು.

೫. ಇದರಿಂದ ಸಂತುಷ್ಟನಾದ ಆ ರಾಕ್ಷಸನು ಯಾತುಭಕ್ತನನ್ನು ಕುರಿತು, "ಅಯ್ಯಾ! ನಿನಗೆ ಇಷ್ಟವಾದ ವರವನ್ನು ಕೇಳು, ಬೇಕಾದುದೆಲ್ಲವನ್ನೂ ಕೊಡುವೆನು" ಎಂದು ಹೇಳಿದನು.

೬. ಇದನ್ನು ಕೇಳಿ ಯಾತುಭಕ್ತನು "ಅಯ್ಯಾ ನರಭಕ್ಷಕನೇ! ಕಳ್ಳರು ಗೋಪ್ಯವಾಗಿ ಅಡಗಬಹುದಾದಂಥ ಗುಹೆಯೊಂದನ್ನು ಭೂಮಿಯೊಳಗೆ ನಿರ್ಮಿಸಿ ಕೊಡು" ಎಂದು ಹೇಳಿದನು.

೭. ಇದನ್ನು ಕೇಳಿ ಆ ರಾಕ್ಷಸನು, ಬುದ್ಧಿಶಾಲಿಮನುಷ್ಯನೂ ಮೋಸ ಹೋಗುವಂತಹ ಒಂದು ದೊಡ್ಡ ಸುರಂಗವನ್ನು ನಿರ್ಮಿಸಿದನು. ಆ ಸ್ಥಳದಲ್ಲಿ ತನ್ನ ಭಕ್ತರೊಡನೆ ದೇವರು ಇದ್ದನು.

೮. ಅನಂತರ ಯಾತುಭಕ್ತನು ರಾಜನ ದಾಸಿಯೂ, ಸುಂದರಿಯೂ ಆದ ನಾಲ್ಕನೆಯ ಹೆಂಡತಿಯನ್ನೂ ಆ ರಾತ್ರಿ ಅಪಹರಿಸಿ ತಂದ ಬಹು ದ್ರವ್ಯವನ್ನೂ ಆ ಸುರಂಗದಲ್ಲಿ ತಂದಿರಿಸಿದನು.

**ಸಪ್ತಪತ್ನ್ಯೋಽಭವಂಸ್ತಸ್ಯ ಚತುರ್ವರ್ಣಸ್ಯ ಯೋಷಿತಃ ।**
**ತಾಸಾಂ ಮಧ್ಯೇ ಭೂಪದಾಸೀ ತಸ್ಯ ಚೌರಸ್ಯ ವಲ್ಲಭಾ ॥ ೯ ॥**

**ನೃಪದುರ್ಗಸಮೋ ಗೇಹೋ ರಚಿತಸ್ತೇನ ರಕ್ಷಸಾ ।**
**ಭೂತಲೇ ಗುಪ್ತರೂಪಶ್ಚ ನರಬುದ್ಧಿವಿಮೋಹನಂ ॥ ೧೦ ॥**

**ಚೋರಿತಂ ಬಹುಧಾ ದ್ರವ್ಯಂ ಗರ್ತೇ ಸಂಸ್ಥಾಪಿತಂ ಬಲಾತ್ ।**
**ತದಾ ತೇ ವ್ಯಾಕುಲಾ ರಾಜನ್ನನಾ ರಾಜಾನಮಬ್ರುವನ್ ॥ ೧೧ ॥**

**ತ್ಯಜಾಮ ನಗರೀಂ ಭೂಪ ಚೌರವಿಘ್ನಕರೀಂ ತವ ।**
**ಇತಿ ಶ್ರುತ್ವಾ ಸ ಭೂಪಾಲೋ ರಕ್ಷಿಣಃ ಶಸ್ತ್ರಸಂಯುತಾನ್ ॥ ೧೨ ॥**

**ಸ್ಥಾಪಿತಾನ್ನಗರೇ ತಸ್ಮಿಂಶ್ಚೌರಹಿಂಸಾಪರಾಯಣಾನ್ ।**
**ಆಜ್ಞಾಪ್ಯ ಸ ಯಯೌ ಗೇಹಂ ತೈಸ್ತು ಶ್ರುತ್ವಾ ತಥಾ ಕೃತಂ ॥ ೧೩ ॥**

---

೯. ಆ ರಾಜನಿಗೆ ನಾಲ್ಕು ವರ್ಣಗಳವರೂ ಸೇರಿ ಏಳು ಮಂದಿ ಹೆಂಡಿರಿದ್ದರು. ಅವರೊಳಗೆ ರಾಜನ ದಾಸಿಯೂ ಶೂದ್ರಳೂ ಆದ ನಾಲ್ಕನೆಯ ಹೆಂಡತಿಯು ಕಳ್ಳತನವನ್ನೇ ಕಸಬಾಗಿ ಉಳ್ಳ ಯಾತುಭಕ್ತನಿಗೆ ಪ್ರೀತಿಪಾತ್ರಳಾಗಿದ್ದಳು.

೧೦-೧೧. ಆ ರಾಕ್ಷಸನು ಆ ಸುರಂಗದ ಹಳ್ಳದಲ್ಲಿ ರಾಜನ ಅರಮನೆಗೆ ಸಮಾನವಾದ ಭದ್ರವಾದ ಮನೆಯನ್ನು ನಿರ್ಮಿಸಿದನು, ಅದು ಗುಪ್ತವೂ ಮನುಷ್ಯರ ಬುದ್ಧಿಯನ್ನು ಮೋಸಗೊಳಿಸತಕ್ಕದ್ದೂ ಆಗಿತ್ತು. ಚೌರ್ಯದಿಂದಲೂ ಬಲಾತ್ಕಾರದಿಂದಲೂ ಗಳಿಸಿದ ಧನಕನಕಾದಿಗಳನ್ನು ಆ ಅರಮನೆಯಲ್ಲಿ ಶೇಖರಿಸಿದ್ದನು. ಆಗ ಆ ಊರಿನ ಜನಗಳು ಚೋರರದೆಸೆಯಿಂದ ವ್ಯಾಕುಲವುಳ್ಳವರಾಗಿ ರಾಜನ ಬಳಿಗೆ ಬಂದರು.

೧೨. "ಅಯ್ಯಾ ಪ್ರಭುವೇ ! ಕಳ್ಳರ ಕಾಟದಿಂದ ನಮ್ಮ ನೆಮ್ಮದಿಗೆ ವಿಘ್ನವುಂಟಾಗಿರುವ ಈ ಪಟ್ಟಣವನ್ನು ಬಿಟ್ಟು ಹೋಗಬೇಕಾಗಿದೆ. ನಮಗೆ ಕಳ್ಳರಕಾಟ ಸಹಿಸಲು ಅಸಾಧ್ಯವಾಗಿದೆ" ಎಂದು ಹೇಳಿಕೊಂಡರು.

೧೩. ಅದನ್ನು ಕೇಳಿ ರಾಜನು ಕಳ್ಳರನ್ನು ಅಡಗಿಸುವುದರಲ್ಲಿ ಆಸಕ್ತರೂ ಶಸ್ತ್ರಧಾರಿಗಳೂ ಆದ ಅನೇಕ ಕಾವಲುಗಾರರನ್ನು, ಕಳ್ಳರ ಕಾಟವನ್ನು ತಪ್ಪಿಸುವುದಕ್ಕಾಗಿ ಊರಿನ ಸುತ್ತಲೂ ಕಾವಲಿರುವಂತೆ ನೇಮಿಸಿ ಅರಮನೆಗೆ ಹೋದನು.

**ರಾಕ್ಷಸ್ಯಾ ಮಾಯಯಾ ಸರ್ವೇ ಮೋಹಿತಾ ರಕ್ಷಿಣಸ್ತದಾ ।**
**ಚೌರೇಣ ಬಹುಧಾ ದ್ರವ್ಯಂ ಹೃತಂ ಚ ಧನಿನಾಂ ಬಲಾತ್ ॥ ೧೪ ॥**

**ಪುನಸ್ತೇ ಪ್ರಯಯುರ್ಭೂಪಂ ರಣಧೀರಂ ಸನ್ಯೈರಯನ್ ।**
**ಶ್ರುತ್ವಾ ತು ವಿಸ್ಮಿತೋ ರಾಜಾ ಸ್ವಯಂ ನಗರಮಾಗತಃ ॥ ೧೫ ॥**

**ಅರ್ಧರಾತ್ರೇ ತಮೋಭೂತೇ ಸ ಚೌರೋ ನೃಪಮಾಗತಂ ।**
**ಜ್ಞಾತ್ವಾಬ್ರವೀಚ್ಚ ರಾಜಾನಂ ಕೋ ಭವಾನತ್ರ ಚಾಪ್ತವಾನ್ ॥ ೧೬ ॥**

**ನೃಪೋಽಬ್ರವೀದಹಂ ಚೌರಶ್ಚೋದಿತಾರ್ಥಃ ಸಮಾಗತಃ ।**
**ಯಾಸ್ಯಾಮಿ ಧನಿನಾಂ ಗೇಹೇ ಭವಾನ್ಮೇ ವಚನಂ ಕುರು ॥ ೧೭ ॥**

---

೧೪. ರಾಜನ ಅಪ್ಪಣೆಯಪ್ರಕಾರ ಅವರೆಲ್ಲರೂ ಎಚ್ಚರಿಕೆಯಿಂದ ಕಾವಲು ಕಾಯುತ್ತಿದ್ದರು. ಆ ಪ್ರಕಾರ ಇರುವಲ್ಲಿ ರಾಕ್ಷಸನ ಮಾಯೆಯಿಂದ ಅವರೆಲ್ಲರೂ ಮೂರ್ಛಿತರಾಗಿ ಮಲಗಿದರು. ಆಗ ಕಳ್ಳರು ಸುರಂಗದಿಂದ ಹೊರಗೆ ಬಂದು ಧನಿಕರ ಧನವನ್ನೆಲ್ಲಾ ಬಲಾತ್ಕಾರವಾಗಿ ಸೂರೆಗೊಂಡರು.

೧೫. ಮತ್ತೆ ಹೀಗಾದುದನ್ನು ನೋಡಿ ಪ್ರಜೆಗಳು ರಾಜನಬಳಿಗೆ ಬಂದು ನಡೆದ ಸಂಗತಿಯನ್ನೆಲ್ಲಾ ವಿಜ್ಞಾಪಿಸಿದರು. ಇದನ್ನು ಕೇಳಿ ವಿಸ್ಮಿತನಾದ ರಾಜನು ನಗರವನ್ನು ಕಾಯುವುದಕ್ಕೆ ತಾನೇ ಬಂದು ನಿಂತನು.

೧೬. ಅರ್ಧರಾತ್ರಿಯಲ್ಲಿ ಅಂಧಕಾರ ಕವಿದಿದ್ದಾಗ್ಗೂ, ಕಾವಲುಗಾರನಾಗಿ ಬಂದಿರುವವನು ರಾಜನೆಂದೇ ತಿಳಿದು, ಕಳ್ಳನು ಅವನನ್ನು ಕುರಿತು, ನೀನು ಯಾರು? ಏತಕ್ಕೆ ಬಂದೆ ? " ಎಂದು ಕೇಳಿದನು.

೧೭-೧೮. ಅದಕ್ಕೆ ರಾಜನು "ನಾನೊಬ್ಬ ಕಳ್ಳ, ದ್ರವ್ಯಸಂಪಾದನೆಗಾಗಿ ಬಂದಿದ್ದೇನೆ. ಹಣಗಾರರ ಮನೆಗೆ ನುಗ್ಗುತ್ತೇನೆ. ನೀನೂ ನನ್ನ ಮಾತನ್ನು ಕೇಳಿ ನನ್ನ ಜತೆಯಲ್ಲಿ ಬಂದು ಬೇಕಾದಷ್ಟು ದ್ರವ್ಯವನ್ನು ಅಪಹರಿಸಿ ಸುಖವಾಗಿರು " ಎಂದು ಹೇಳಿದನು. ಆ ವಾಸ್ತವವಾದ ಕಳ್ಳನು " ಹಾಗೆಯೇ ಆಗಲಿ " ಎಂದು ಒಪ್ಪಿ ಬಹು ದ್ರವ್ಯವನ್ನು ಅಪಹರಿಸಿದನು.

ಮಯಾ ಸಾರ್ಧಂ ಚ ಬಹುಧಾ ದ್ರವ್ಯಂ ಹರ ಸುಖೀ ಭವ ।
ತಥಾ ಮತ್ವಾ ತು ಬಹುಧಾ ಚೌರೇಣ ಧನಮಾಹೃತಂ ॥ ೧೮ ॥

ಗರ್ತಮಧ್ಯೇ ಗತೋ ರಾತ್ರೌ ಸ್ಥಾಪಯಿತ್ವಾ ನೃಪಂ ಬಹಿಃ ।
ಏತಸ್ಮಿನ್ನೇವ ತತ್ಪತ್ನೀ ನೃಪದಾಸೀ ವರಾಂಗನಾ ॥ ೧೯ ॥

ಭೂಪತಿಂ ಪ್ರಾಹ ಭೋ ರಾಜನ್ ಗಚ್ಛ ಶೀಘ್ರಂ ಸ್ವಕಂ ಗೃಹಂ ।
ಚೌರೋಽಸೌ ಹಿ ತ್ವದರ್ಥೇ ಚ ಮೃತ್ಯುಂ ಕುರ್ವನ್ ಗೃಹಂ ಗತಃ ॥ ೨೦ ॥

ಇತ್ಯುಕ್ತ್ವಾ ಸಾ ತು ಭೂಪಾಯ ಮಾರ್ಗಭೇದಮದರ್ಶಯತ್ ।
ನೃಪೋಽಪಿ ಸ್ವಗೃಹಂ ಪ್ರಾಪ್ಯ ಪ್ರಭಾತೇ ವಿಮಲೇ ರವೌ ॥ ೨೧ ॥

ಆಯಯೌ ಸೇನಯಾ ಸಾರ್ಧಂ ಯತ್ರ ಚೌರಃ ಸ್ವಯಂ ಸ್ಥಿತಃ ।
ಚೌರೋಽಪಿ ಭಯಮಾಸಾದ್ಯ ಪಾಶರಂ ನಾಮ ರಾಕ್ಷಸಂ ॥ ೨೨ ॥

---

೧೯. ಆ ದ್ರವ್ಯವನ್ನು ಭೂಮಿಯೊಳಗೆ ಮಾಡಿರುವ ಗುಪ್ತವಾದ ಅರಮನೆಯಲ್ಲಿ ಬಚ್ಚಿಡುವುದಕ್ಕಾಗಿ ತಾನು ಸುರಂಗದೊಳಕ್ಕೆ ನುಗ್ಗುವವನಾಗಿ ಕಳ್ಳನ ವೇಷವನ್ನು ಧರಿಸಿದ ರಾಜನನ್ನು ಸುರಂಗದ ಈಚೆಯೇ ನಿಂತಿರುವಂತೆ ಹೇಳಿ ನಿಲ್ಲಿಸಿ ತಾನು ಒಳಗೆ ಹೋದನು.

೨೦. ಇದಕ್ಕೆ ಮೊದಲು ಭೂಪದಾಸಿಯೂ ಸುಂದರಿಯೂ ಆಗಿದ್ದು ಈಚೆಗೆ ಕಳ್ಳನ ಪ್ರಿಯೆಯಾಗಿದ್ದ ಆಕೆಯು ಈಚೆಯಲ್ಲಿ ಕಳ್ಳನ ವೇಷದಲ್ಲಿದ್ದ ರಾಜನನ್ನು ಕುರಿತು "ಎಲೈ ರಾಜನೇ ! ನೀನು ಶೀಘ್ರವಾಗಿ ನಿನ್ನ ಅರಮನೆಯನ್ನು ಸೇರಿಕೊ ! ನಿನಗೆ ಪ್ರಾಣಾಪಾಯವುಂಟುಮಾಡುವುದಕ್ಕಾಗಿಯೇ ಈ ಕಳ್ಳನು ಸುರಂಗವನ್ನು ಹೊಕ್ಕಿರುವನು."

೨೧. ಎಂಬುದಾಗಿ ಹೇಳಿ ರಾಜನಿಗೆ ಹಿಂದಿರುಗಿ ಹೋಗುವ ದಾರಿಯನ್ನು ತೋರಿಸಿದಳು. ರಾಜನು ಆಕೆಯ ಮಾತಿನಂತೆ ಜಾಗ್ರತೆ ತನ್ನ ಅರಮನೆಯನ್ನು ಸೇರಿಕೊಂಡನು.

೨೨. ಬೆಳಗ್ಗೆ ಸೂರ್ಯೋದಯವಾಗುತ್ತಲೆ ರಾಜನು, ಸೇನೆಯೊಡನೆ ಕಳ್ಳನು ಹೊಕ್ಕಿದ ಸ್ಥಳಕ್ಕೆ ಬಂದನು. ಆಗ ಕಳ್ಳನು ಭೀತಿಗೊಂಡು ದಿಕ್ಕುತೋರದೆ ತನಗೆ ವರಪ್ರದಾನಮಾಡಿದ ಪಾಶರನೆಂಬ ದೈತ್ಯನನ್ನು ಪ್ರಾರ್ಥಿಸಿದನು.

**ಸಂಪೂಜ್ಯ ವರ್ಣಯಾಮಾಸ ಯಥಾ ಜಾತಂ ತಥಾವಿಧಿ ।**
**ವಿಹಸ್ಯಾಹ ಚ ರಕ್ಷಸ್ತ್ವಂ ತ್ವಯಾ ಮೇ ಭೋಜನಂ ಕೃತಂ ॥ ೨೩ ॥**

**ಅದ್ಯ ಭಕ್ಷ್ಯಾಮ್ಯಹಂ ಸರ್ವಾನ್ ಮಾನುಷಾನ್ ದೈವಚೋದಿತಾನ್ ।**
**ಇತ್ಯುಕ್ತ್ವಾ ಸ ಯಯೌ ಘೋರೋ ರಾಕ್ಷಸೋ ನೃಪತಿಂ ಪ್ರತಿ ॥ ೨೪ ॥**

**ಚಖಾದ ಬಹುಲಾಂ ಸೇನಾಂ ತೇಽಪಿ ಯಾತಾ ದಿಶೋ ದಶ ।**
**ಆಕ್ರಾಂತಃ ಸ ಚ ಭೂಪಾಲೋ ರಕ್ಷಸಾ ವಿಕಲೀಕೃತಃ ॥ ೨೫ ॥**

**ತದಾ ಚೌರಃ ಸ್ವಯಂ ಪ್ರಾಪ್ಯ ಭೂಪತಿಂ ಪ್ರಾಹ ರೋಷತಃ ।**
**ಪಲಾಯನಂ ನ ಭೂಪಸ್ಯ ಯೋಗ್ಯಂ ಧರ್ಮಜನಸ್ಯ ವೈ ॥ ೨೬ ॥**

**ಇತಿ ಶ್ರುತ್ವಾ ನೃಪಶ್ಚೈವ ತೂರ್ಣಮಾಗತ್ಯ ತತ್ರ ಹ ।**
**ಧ್ಯಾತ್ವಾ ದೇವೀಂ ಮಹಾಕಾಲೀಂ ಲಬ್ಧ್ವಾ ಮಂತ್ರಂ ಮಹೋತ್ತಮಂ ॥**

---

೨೩. ಅವನು ಪ್ರತ್ಯಕ್ಷನಾದ ಕೂಡಲೆ ನಡೆದುದನ್ನೆಲ್ಲಾ ಆತನಿಗೆ ಸಂಪೂರ್ಣವಾಗಿ ತಿಳಿಸಿದನು, ಇದನ್ನು ಕೇಳಿ ರಾಕ್ಷಸನು ನಕ್ಕು ಇಂತೆಂದನು.

೨೪. "ನೀನು ನನಗೆ ಒಳ್ಳೆಯ ಸವಿಯೂಟವನ್ನು ಏರ್ಪಡಿಸಿದೆ, ದೈವ ಪ್ರೇರಣೆಯಿಂದ ತಾವಾಗಿಯೇ ಬಂದಿರುವ ಇವರೆಲ್ಲರನ್ನೂ ನಾನು ಈಕ್ಷಣ ಭಕ್ಷಿಸುವೆನು" ಎಂದು ಹೇಳಿ ರಾಕ್ಷಸನು ಭಯಂಕರವಾದ ರೂಪವನ್ನು ಧರಿಸಿ ರಾಜನಿಗೆ ಅಭಿಮುಖವಾಗಿ ನುಗ್ಗಿದನು.

೨೫. ಹೀಗೆ ನುಗ್ಗಿದ ಅವನು ರಾಜನ ಸೈನ್ಯದವರನೇಕರನ್ನು ಭಕ್ಷಿಸಿದನು. ಆಗ ಸೈನಿಕರು ದಿಕ್ಕುದಿಕ್ಕಿಗೆ ಚೆಲ್ಲಾಪಿಲ್ಲಿಯಾಗಿ ಓಡಿದರು. ರಾಜನೂ ರಾಕ್ಷಸಬಾಧೆಗೆ ಒಳಗಾಗಿ ಗಾಯಗೊಂಡು ಹಿಮ್ಮೆಟ್ಟುವುದರಲ್ಲಿದ್ದನು.

೨೬-೨೭. ಆಗ ಕಳ್ಳನು ರಾಜನಬಳಿಗೆ ತಾನೇ ಬಂದು ಕೋಪದಿಂದ ಅವನನ್ನು ಕುರಿತು "ಧರ್ಮಪರಾಯಣನಾದ ರಾಜನು ಹಿಮ್ಮೆಟ್ಟಬಾರದು" ಎಂದು ಹೇಳಿದನು. ಅದನ್ನು ಕೇಳಿ ರಾಜನು ಕೂಡಲೆ ಹಿಂದಿರುಗಿ ಬಂದು ಮಹಾಕಾಳಿಯನ್ನು ಧ್ಯಾನಿಸಿ ಉತ್ತಮವಾದ ಮಂತ್ರಶಕ್ತಿಯನ್ನು ಪಡೆದನು.

ರಕ್ಷಸಾ ಸಹ ತದ್ಗರ್ತಂ ಭಸ್ಮಸಾದಭವತ್ ಕ್ಷಣಾತ್ ।
ನಿಗಡೈಸ್ತಂ ಬಬಂಧಾಶು ಚೌರಂ ನಗರಲುಂಠಕಂ ॥ ೨೮ ॥

ತಥಾ ಸರ್ವಧನೈಸ್ಸಾರ್ಧಂ ಸ್ತ್ರೀಭಿಸ್ತಾಭಿಃ ಸಮಾಯಯೌ ।
ರಾಜ್ಯಸ್ಥಾನಂ ಸಮಾಸಾದ್ಯ ದುರ್ಗತಿಸ್ತಸ್ಯ ಚಾಭವತ್ ॥ ೨೯ ॥

ಪಟಹಾತಾಡಿತೇಸ್ಸೈವ ಶಬ್ದೇನ ಚ ಗೃಹೇಗೃಹೇ ।
ಜ್ಞಾಪಿತಂ ಕಾರಣಂ ಸರ್ವಂ ತಚ್ಚೌರಸ್ಯ ವಧಸ್ಯ ತೈಃ ॥ ೩೦ ॥

ತದ್ದಿನೇ ನಗರೇ ತಸ್ಮಿನ್ ಭ್ರಾಮಿತೋ ಗರ್ದಭೋಪರಿ ।
ಧರ್ಮಧ್ವಜಗೃಹದ್ವಾರೇ ಸ ಚೌರೋ ಹಿ ಸಮಾಗತಃ ॥ ೩೧ ॥

---

೨೮. ಆ ಮಂತ್ರಪ್ರಭಾವದಿಂದ ರಾಕ್ಷಸಸಹಿತವಾಗಿ ಆ ಸುರಂಗವು ಕ್ಷಣಮಾತ್ರದಲ್ಲಿ ಭಸ್ಮವಾಯಿತು, ಪಟ್ಟಣವನ್ನು ಸೂರೆಗೊಳ್ಳುತ್ತಿದ್ದ ಆ ಕಳ್ಳನನ್ನು ಸರಪಳಿಗಳಿಂದ ಜಾಗ್ರತೆಯಾಗಿ ಬಿಗಿದರು.

೨೯. ಅಲ್ಲಿ ಸೆರೆಹಾಕಿದ್ದ ಸ್ತ್ರೀಯರು ಧನ ಮುಂತಾದ ಎಲ್ಲವನ್ನೂ ವಶಪಡಿಸಿಕೊಂಡು ರಾಜನು ತನ್ನ ನಿವಾಸಕ್ಕೆ ಹಿಂದಿರುಗಿದನು. ದುರ್ದಶೆಯೊದಗಿದ ಆ ಕಳ್ಳನಿಗೆ ಮರಣದಂಡನೆ ವಿಧಿಸಲಾಯ್ತು.

೩೦. ರಾಜಭಟರು ಕಳ್ಳನನ್ನು ಶೂಲಕ್ಕೇರಿಸುವ ವಿಚಾರವನ್ನೂ ಅದರ ಕಾರಣವನ್ನೂ ತಮಟೆಯ ಶಬ್ದದ ಮೂಲಕ ಬೀದಿ ಬೀದಿಯಲ್ಲೂ ಸಾರಿ ಪ್ರಚಾರಪಡಿಸಿದರು.

೩೧. ಶೂಲಕ್ಕೇರಿಸುವ ದಿವಸ,-ಕಳ್ಳನನ್ನು ಕತ್ತೆಯಮೇಲೆ ಕೂರಿಸಿ, ಊರಲ್ಲೆಲ್ಲಾ ಮೆರವಣಿಗೆ ಮಾಡುತ್ತಿದ್ದರು. ಆ ಮೆರವಣಿಗೆಯು ಧರ್ಮಧ್ವಜನೆಂಬ ವೈಶ್ಯನ ಮನೆಯ ಬಳಿಗೆ ಬಂದಿತು.

**ತಸ್ಯ ರೂಪಂ ಸಮಾಲೋಕ್ಯ ಮುಮೋಹ ಸುಖಭಾವಿನೀ ।**
**ಪಿತರಂ ಪ್ರಾಹ ದುಃಖಾರ್ತಾ ಚೌರಂ ಮೋಚಯ ಸತ್ವರಂ　　॥ ೩೨ ॥**

**ಸ ಗತ್ವಾ ನೃಪತಿಂ ಪ್ರಾಹ ಪಂಚಲಕ್ಷಧನಂ ಮಮ ।**
**ಗೃಹಾಣ ಚೌರಮೋಕ್ಷಾರ್ಥೇ ಮ್ರಿಯತೇ ನ ಹಿ ಮೇ ಸುತಾ　　॥ ೩೩ ॥**

**ವಿಹಸ್ಯಾಹ ನೃಪಸ್ತಂ ವೈ ಚೌರೋಽಯಂ ಧನಲುಂಠಕಃ ।**
**ಕರ್ಹಿಚಿನ್ನ ಮಯಾ ತ್ಯಾಜ್ಯೋ ಭುವಿ ವೈ ಪುರುಷಾಧಮಃ　　॥ ೩೪ ॥**

**ಇತಿ ಶ್ರುತ್ವಾ ನಿರಾಶೋಽಭೂತ್ ಸ ಚೌರೋ ಮರಣಂ ಗತಃ ।**
**ಶೂಲ್ಯಾರೋಪಣಕಾಲೇ ತು ಪ್ರಾಕ್‌ಪ್ರಹಸ್ಯ ತತೋಽರುದತ್　　॥ ೩೫ ॥**

---

೩೨. ಆ ಧರ್ಮಧ್ವಜನ ಮಗಳಾದ ಸುಖಭಾವಿನಿಯು ಆ ಕಳ್ಳನ ರೂಪನ್ನು ನೋಡಿ ಮೋಹಗೊಂಡು ತನ್ನ ತಂದೆಯನ್ನು ಕುರಿತು, "ಅಪ್ಪಾ ಇವನನ್ನು ಬಂಧನದಿಂದ ಬಿಡಿಸು ಈ ಕಾರ್ಯವನ್ನು ಜಾಗ್ರತೆಯಾಗಿಮಾಡು" ಎಂದು ದೀನಳಾಗಿ ಕೇಳಿಕೊಂಡಳು.

೩೩. ಮಗಳ ಈ ಮಾತನ್ನು ಕೇಳಿದ ಧರ್ಮಧ್ವಜನು ರಾಜನ ಸಮೀಪಕ್ಕೆ ಹೋಗಿ "ಎಲೈ ಪ್ರಭುವೇ! ನನ್ನಲ್ಲಿರುವ ಐದುಲಕ್ಷ ದ್ರವ್ಯವನ್ನು ತೆಗೆದುಕೋ. ಈ ಕಳ್ಳನನ್ನು ಬಿಡುಗಡೆಮಾಡು, ಇದರಿಂದ ನನ್ನ ಮಗಳಿಗೆ ಪ್ರಾಣದಾನಮಾಡಿದಂತಾಗುವುದು" ಎಂದು ಬೇಡಿಕೊಂಡನು.

೩೪. ಆಗ ರಾಜನು ನಕ್ಕು ವೈಶ್ಯನನ್ನು ಕುರಿತು "ಇವನು ದ್ರವ್ಯವನ್ನು ದೋಚಿಕೊಂಡು ಹೋಗುವ ಕಳ್ಳ; ಇಂಥ ನರಾಧಮನನ್ನು ನಾನು ಎಂದಿಗೂ ಭೂಮಿಯಲ್ಲಿರಗೊಡುವುದಿಲ್ಲ" ಎಂದನು.

೩೫ ಆ ಮಾತನ್ನು ಕೇಳಿ ವೈಶ್ಯನು ನಿರಾಶನಾದನು. ಆನಂತರ ಕಳ್ಳನನ್ನು ಶೂಲಕ್ಕೆ ಏರಿಸಿದರು. ಶೂಲಕ್ಕೇರಿಸುವ ವೇಳೆಯಲ್ಲಿ ಆ ಕಳ್ಳನು ಮೊದಲು ನಕ್ಕು ಆ ಬಳಿಕ ಅತ್ತನು.

ಏತಸ್ಮಿನ್ನೇವ ತತ್ಪುತ್ರೀ ದೇವಮಾಯಾವಿಮೋಹಿತಾ ।
ಗೃಹೀತ್ವಾ ಚೌರದೇಹಂ ತು ವಹ್ನಿಕುಂಡೇ ತು ಸಾಗಮತ್ ॥ ೩೬ ॥

ತದಾ ಪ್ರಸನ್ನಾ ಸಾ ದುರ್ಗಾ ತಾವುಜ್ಜೀವ್ಯ ಪ್ರಸಾದತಃ ।
ತಸ್ಯೈ ದತ್ತಂ ವರಂ ದಿವ್ಯಂ ಭುಕ್ತಿಮುಕ್ತಿಫಲಪ್ರದಂ ॥ ೩೭ ॥

ಇತ್ಯುಕ್ತ್ವಾ ಸ ತು ಭೂಪಾಲಂ ಪುನಃ ಪ್ರಾಹ ವಿಹಸ್ಯ ತಂ ।
ಕಿಂಕಾರಣೇನ ಚೌರೋಽಸೌ ಪ್ರಾಕ್ಪ್ರಹಸ್ಯ ತತೋಽರುದತ್ ॥ ೩೮ ॥

॥ ರಾಜೋವಾಚ ॥

ಮದರ್ಥೇ ಸುಂದರೀ ನಾರೀ ಸ್ವಪ್ರಾಣಾನ್ ದಾತುಮುದ್ಯತಾ ।
ತಸ್ಯೈ ಕಿಂಚಿತ್ ಪ್ರದಾತವ್ಯಂ ಮಯಾ ತತ್ಸ್ನೇಹರೂಪಿಣಾ ॥ ೩೯ ॥

ಅತೋ ರೋದಿತವಾನ್ ಪಶ್ಚಾದ್ಧಸನೇ ಕಾರಣಂ ಶೃಣು ।
ಧನ್ಯೋಽಯಂ ಭಗವಾನ್ ಕೃಷ್ಣೋ ಯಸ್ಯ ಲೀಲೇಯಮೀದೃಶೀ ॥೪೦॥

---

೩೬. ದೈವಮಾಯೆಯಿಂದ ಇವನಲ್ಲೇ ಮೋಹಿತೆಯಾದ ವೈಶ್ಯಪುತ್ರಿ ಸುಖಭಾವಿನಿಯು, ಕಳ್ಳನ ಮೃತದೇಹದೊಡನೆ ಅಗ್ನಿಕುಂಡದಲ್ಲಿ ಸಹಗಮನಮಾಡಿದಳು.

೩೭. ಆಗ ದುರ್ಗೆಯು ಪ್ರಸನ್ನೆಯಾಗಿ ತನ್ನ ಅನುಗ್ರಹದಿಂದ ಅವರಿಬ್ಬರನ್ನೂ ಬದುಕಿಸಿ, ವೈಶ್ಯಪುತ್ರಿಯಾದ ಸುಖಭಾವಿನಿಗೆ ಭೋಗಮೋಕ್ಷಾದಿ ಫಲ ಕೊಟ್ಟಳು.

೩೮ ಹೀಗೆಂದು ಬೇತಾಳವು ಹೇಳಿ. ವಿಕ್ರಮರಾಜನನ್ನು ಕುರಿತು "ಕಳ್ಳನು ಮೊದಲು ನಕ್ಕದ್ದಕ್ಕೂ, ಅನಂತರ ಅತ್ತುದಕ್ಕೂ ಕಾರಣವೇನು ? ಹೇಳು" ಎಂದು ಕೇಳಿತು.

೩೯. ಅದಕ್ಕೆ ರಾಜನು "ಸುಂದರಿಯಾದ ಆ ವೈಶ್ಯಪುತ್ರಿಯು ನನಗಾಗಿ ತನ್ನ ಪ್ರಾಣಗಳನ್ನು ಕೊಡಲು ಸಿದ್ಧಳಾಗಿದ್ದಾಳೆ. ಅವಳ ಸ್ನೇಹಕ್ಕೆ ಪ್ರತಿಯಾಗಿ ನಾನೇನು ಕೊಟ್ಟೇನು" ಎಂಬ ಭಾವನೆಯಿಂದ ಅವನು ಕೊನೆಯಲ್ಲಿ ಅತ್ತನು.

೪೦ ಮೊದಲು ನಕ್ಕದ್ದಕ್ಕೆ ಕಾರಣವನ್ನು ಕೇಳು, ಷಡ್ಗುಣೈಶ್ವರ್ಯಸಂಪನ್ನನಾದ ಕೃಷ್ಣಪರಮಾತ್ಮನೇ ಧನ್ಯ, ಅವನ ಲೀಲೆಯೇ ಇಂಥದು.

**ಅಧರ್ಮಿಣೇ ಚ ನಾಕಸ್ಯ ಫಲಂ ದಾತುಂ ಸಮರ್ಹತಿ ।**
**ಧರ್ಮಿಣೋ ನರಕಸ್ಯೈವ ಫಲಂ ತಸ್ಮೈ ನಮೋನಮಃ** ॥ ೪೧ ॥

**ಅತಃ ಸ ಹಸಿತಃ ಪೂರ್ವಂ ಮೋಹಿತೋ ಹರಿಲೀಲಯಾ ।**
**ಇತಿ ಶ್ರುತ್ವಾಹ ವೈತಾಲೋ ಹರೇಃ ಶರಣಮುತ್ತಮಂ** ॥ ೪೨ ॥

**ವಾಕ್ಯಂ ತೇನ ಕೃತಂ ಶೂಲ್ಯಾಮತೋ ಜೀವಿತವಾಞ್ಛುಚಿಃ** ॥ ೪೩ ॥

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ ಖಂಡೇ ಕಲಿಯುಗೀಯೇತಿಹಾಸ ಸಮುಚ್ಚಯೇ ತ್ರಯೋದಶೋಽಧ್ಯಾಯಃ.**



---

೪೧-೪೨. ಪಾಪಿಗೆ ಸ್ವರ್ಗಪ್ರಾಪ್ತಿಯುಂಟುಮಾಡುವುದಕ್ಕೂ, ಧರ್ಮಿಷ್ಠನಿಗೆ ನರಕಪ್ರಾಪ್ತಿಯನ್ನುಂಟುಮಾಡುವುದಕ್ಕೂ ಅವನು ಸಮರ್ಥನು. ಅಂಥ ಕೃಷ್ಣ ಪರಮಾತ್ಮನಿಗೆ ನಮಸ್ಕಾರ, ಎಂದು ಕೃಷ್ಣನ ಲೀಲೆಗೆ ಮೋಹಿತನಾಗಿ ಆ ಕಳ್ಳನು ಮೊದಲು ನಕ್ಕನು " ಎಂಬದಾಗಿ ವಿಕ್ರಮನು ಹೇಳಿದನು, ಈ ಮಾತನ್ನು ಕೇಳಿ ಬೇತಾಳವು " ಕೃಷ್ಣಪರಮಾತ್ಮ (ವಿಷ್ಣು) ನನ್ನು ಶರಣು ಹೋಗುವುದೇ ಉತ್ತಮ.

೪೩. " ಆ ಕಳ್ಳನು ಶೂಲಕ್ಕೇರಿಸಲ್ಪಟ್ಟರೂ ಹರಿಯನ್ನು ಶರಣು ಹೊಕ್ಕಿದ್ದರಿಂದ ಬದುಕಿದ್ದಲ್ಲದೆ ಪರಿಶುದ್ಧನೆನಿಸಿಕೊಂಡನು " ಎಂಬದಾಗಿ ಹೇಳಿತು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಪ್ರತಿಸರ್ಗಪರ್ವದ ಎರಡನೆಯ ಖಂಡದಲ್ಲಿ ಕಲಿಯುಗದ ಇತಿಹಾಸಸಮುಚ್ಚಯವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ

## ಚತುರ್ದಶೋಽಧ್ಯಾಯಃ

---

॥ ಸೂತ ಉವಾಚ ॥

ಭೃಗುವರ್ಯ ಮಹಾಭಾಗ ವೈತಾಲೋ ನೃಪಮಬ್ರವೀತ್ ।
ರಾಜನ್ ಪುಷ್ಪಾವತೀ ರಮ್ಯಾ ನಗರೀ ತತ್ರ ಭೂಪತಿಃ ॥ ೧ ॥

ಸುವಿಚಾರ ಇತಿ ಖ್ಯಾತಃ ಪ್ರಜಾಪಾಲನತತ್ಪರಃ ।
ಚಂದ್ರಪ್ರಭಾ ತಸ್ಯ ಪತ್ನೀ ರೂಪಯೌವನಶಾಲಿನೀ ॥ ೨ ॥

ತಸ್ಯಾಂ ಜಾತಾ ಸುತಾ ದೇವೀ ನಾಮ್ನಾ ಚಂದ್ರಾವಲೀ ಮತಾ ।
ಕದಾಚಿತ್ ಸ್ವಾಲಿಭಿಃ ಸಾರ್ಧಂ ವಿಪಿನಂ ಕುಸುಮಾಕರಂ ॥ ೩ ॥

---

### ಹದಿನಾಲ್ಕನೆಯ ಅಧ್ಯಾಯ

೧ ಸೂತಮುನಿವರ್ಯನು ಹೇಳುತ್ತಾನೆ—ಅಯ್ಯಾ ಭೃಗುವಂಶೋತ್ಪನ್ನನಾದ ಶೌನಕನೇ ! ಕೇಳು. ಆಗ ಬೇತಾಳವು ವಿಕ್ರಮರಾಜನನ್ನು ಕುರಿತು " ಅಯ್ಯಾ ರಾಜನೇ! ಬಹುಕಾಲದ ಹಿಂದೆ ಪುಷ್ಪಾವತಿ ಎಂಬ ಒಂದು ಮನೋಹರವಾದ ಪಟ್ಟಣ ವಿದ್ದಿತು. ಅಲ್ಲಿ ಪ್ರಜಾಪಾಲನದಲ್ಲಿ ನಿರತನಾದ ಸುವಿಚಾರನೆಂಬ ಹೆಸರಿನ ರಾಜ ನಿದ್ದನು.

೨. ಅವನಿಗೆ ರೂಪವತಿಯೂ ಪ್ರಾಯಸಮರ್ಥೆಯೂ ಆದ ಚಂದ್ರಪ್ರಭೆ ಯೆಂಬ ಪತ್ನಿಯಿದ್ದಳು. ಅವಳಲ್ಲಿ ಚಂದ್ರಾವಳೀ ಎಂಬ ಹೆಸರಿನ ಒಬ್ಬಳು ಮಗಳು ಹುಟ್ಟಿದಳು.

೩-೪. ಒಂದುದಿನ ಅವಳು ಸಮೃದ್ಧಿಯಾಗಿ ಪುಷ್ಪಗಳುಳ್ಳ ವನಕ್ಕೆ ಕ್ರೀಡಾರ್ಥ ವಾಗಿ ತನ್ನ ಸಖಿಯರೊಡನೆ ಹೋದಳು. ಅಲ್ಲಿ ಸುದೇವನೆಂಬ ಒಬ್ಬ ವಿಪ್ರನನ್ನು

ಆಯಯುಯೌ ತತ್ರ ವೈ ವಿಪ್ರಂ ಸುದೇವಂ ಸಾ ದದರ್ಶ ಹ ।
ಮೋಹಿತಾ ಚಾಭವದ್ದೇವೀ ವಿಪ್ರೋಽಪಿ ಪತಿತಃ ಕ್ಷಿತೌ ॥ ೪ ॥

ಕಾಮಬಾಣವ್ಯಥಾಂ ಪ್ರಾಪ್ಯ ಗತಪ್ರಾಣ ಇವಾಭವತ್ ।
ತಸ್ಯಾಂ ಗತಾಯಾಂ ಸದನೇ ದ್ವೌ ವಿಪ್ರೌ ತತ್ರ ಚಾಗತೌ ॥ ೫ ॥

ಮೂಲದೇವಃ ಶಶೀ ನಾಮ್ನಾ ತತ್ರ ವಿದ್ಯಾವಿಶಾರದೌ ।
ತಥಾಗತಂ ದ್ವಿಜಂ ದೃಷ್ಟ್ವಾ ರೂಪಯೌವನಶಾಲಿನಂ ॥ ೬ ॥

ಪಪ್ರಚ್ಛ ಕಾರಣಂ ಸರ್ವಂ ಯೇನ ಮೋಹಂ ತ್ವಮಾಗತಃ ।
ಸ ಶ್ರುತ್ವಾ ರೋದನಂ ಕೃತ್ವಾ ಸರ್ವಂ ತಸ್ಮೈ ನ್ಯವೇದಯತ್ ॥ ೭ ॥

ಕೃಪಾಲುರ್ಮೂಲದೇವಸ್ತು ತಂ ಸ್ವಗೇಹಮುವಾಪ್ತವಾನ್ ।
ಗೃಹೇ ಜಪ್ತ್ವಾ ಮಹಾಮಂತ್ರಂ ಚಾಮುಂಡಾಬೀಜಸಂಯುತಂ ॥ ೮ ॥

---

ನೋಡಿ ಅವನಲ್ಲಿ ಮೋಹಗೊಂಡಳು. ಆ ಬ್ರಾಹ್ಮಣನೂ ಆ ಚಂದ್ರಾವಳಿಯನ್ನು ನೋಡಿ ಕೂಡಲೆ ಮನ್ಮಥಬಾಣಕ್ಕೆ ಗುರಿಯಾಗಿ ಮೂರ್ಛಿತನಾಗಿ ನೆಲದ ಮೇಲೆ ಬಿದ್ದನು.

೫. ಇತ್ತ ಚಂದ್ರಾವಳಿಯು ಸಖಿಯರೊಡನೆ ಮನೆಗೆ ಹಿಂದಿರುಗಿದಳು. ಅವಳು ಆ ವನದಿಂದ ಹೋದಮೇಲೆ ಮೂಲದೇವ, ಶಶಿ ಎಂಬ ಹೆಸರುಳ್ಳ ವಿದ್ವಾಂಸರಾದ ಇಬ್ಬರು ವಿಪ್ರರು ಆ ವನಕ್ಕೆ ಬಂದರು.

೬. ರೂಪಯೌವನಗಳಿಂದ ಕೂಡಿದವನಾಗಿ ಮೂರ್ಛಿತನಾಗಿರುವ ಆ ಬ್ರಾಹ್ಮಣನನ್ನು ನೋಡಿ, ಅವರು ಉಪಚರಿಸಿ ಅತನು ಚೇತರಿಸಿದ ಮೇಲೆ ಅವನ ಮೂರ್ಛೆಗೆ ಕಾರಣವನ್ನು ಪ್ರಶ್ನಿಸಿದರು.

೭, ಆಗ ಸುದೇವನು ರೋದನಮಾಡುತ್ತಾ, ಅಲ್ಲಿ ನಡೆದ ಸಂಗತಿಯನ್ನೆಲ್ಲಾ ಅವರಿಗೆ ವಿಶದವಾಗಿ ತಿಳಿಸಿದನು. ದಯಾಶಾಲಿಯಾದ ಮೂಲದೇವನು ಇದನ್ನು ಕೇಳಿ, ಆ ಸುದೇವನನ್ನು ತನ್ನ ಮನೆಗೆ ಕರೆದುಕೊಂಡು ಹೋದನು.

೮. ತನ್ನ ಮನೆಯಲ್ಲಿ ಚಾಮುಂಡಿಕೆಯ ಬೀಜಾಕ್ಷರಗಳಿಂದ ಯುಕ್ತವಾದ ಮಹಾಮಂತ್ರವನ್ನು ಜಪಿಸಿ, ಎರಡು ಯಂತ್ರಗಳನ್ನು ಸಿದ್ಧಮಾಡಿ, ಒಂದು ಯಂತ್ರವನ್ನು ಸುದೇವನಿಗೆ ಕೊಟ್ಟನು

ಕೃತವಾನ್ ಗುಟಿಕೇ ಚೋಭೇ ಸುದೇವಾಯ ಸಮಾರ್ಪಯತ್ ।
ಏಕಯಾ ಸುಂದರೀ ಕನ್ಯಾ ದ್ವಾದಶಾಬ್ದಮಯೀ ಶುಭಾ ॥ ೯ ॥

ದ್ವಿತೀಯಯಾ ಮಹಾವೃದ್ಧೋ ಮೂಲದೇವಸ್ತದಾಭವತ್ ।
ದ್ವೌ ಗತೌ ರಾಜಸದನೇ ನೃಪಮಾಶೀರ್ಭಿರರ್ಚ್ಯ ತಂ ॥ ೧೦ ॥

ಹೇತುಂ ನಿವೇದಯಾಮಾಸ ತಚ್ಛೃಣುಷ್ವ ಮಹಾಮತೇ ।
ನಗರೇ ತಾಂತ್ರಿಕೇ ರಾಜನ್ ಮದ್ಗೇಹಂ ಸುಂದರೋಪಮಂ ॥ ೧೧ ॥

ವಿಲಾಪಧ್ವಜ ನಾಮ್ನಾ ವೈ ರಾಜ್ಞಾ ಸಂಲುಂಠಿತಂ ಬಲಾತ್ ।
ಪಲಾಯಿತೌ ಸುತಃ ಪತ್ನೀ ತಾವನ್ವೇಷ್ಟುಂ ಸಮಾಯಯೌ ॥ ೧೨ ॥

ಇಯಂ ವಧೂರ್ಮಹಾರಾಜ ಮಮ ತತ್ಪುತ್ರಭಾವಿನೀ ।
ಯಾವದಹಂ ನ ಗಚ್ಛಾಮಿ ಸ್ವಗೇಹೇ ರಕ್ಷ ಧರ್ಮತಃ ॥ ೧೩ ॥

---

೯. ಅದರಿಂದ ಸುದೇವನು ಹನ್ನೆರಡುವರ್ಷ ವಯಸ್ಸಿನ ಸುಂದರಿಯಾದ ಹುಡುಗಿಯ ರೂಪವನ್ನು ಹೊಂದಿದನು. ಇನ್ನೊಂದು ಯಂತ್ರದಿಂದ ತಾನು ವೃದ್ಧ ಬ್ರಾಹ್ಮಣನ ರೂಪನ್ನು ಹೊಂದಿ, ಇಬ್ಬರೂ ರಾಜಸನ್ನಿಧಿಗೆ ಹೋಗಿ ರಾಜನಿಗೆ ಆಶೀರ್ವದಿಸಿದರು

೧೦-೧೨. ಮತ್ತು ತಾವು ಬಂದ ಕಾರಣವನ್ನು ಹೇಳಲು ಪ್ರಯತ್ನಿಸಿ "ಎಲೈ ಮಹಾ ಬುದ್ಧಿಶಾಲಿಯಾದ ರಾಜನೇ! ಕೇಳು ; ತಾಂತ್ರಿಕ ಎಂಬ ಪಟ್ಟಣದಲ್ಲಿ ನನಗೆ ಸೇರಿದುದಾಗಿ ಸುಂದರವಾದ ಮನೆಯೊಂದು ಇದ್ದಿತು. ವಿಲಾಪಧ್ವಜನೆಂಬ ರಾಜನು ಬಲಾತ್ಕಾರದಿಂದ ಅದನ್ನು ಲೂಟಿಮಾಡಿಸಿದನು. ಆ ಸಮಯದಲ್ಲಿ ನನ್ನ ಹೆಂಡತಿಯೂ ಮಗನೂ ತಲೆತಪ್ಪಿಸಿಕೊಂಡು ಓಡಿದರು. ಅವರನ್ನು ಹುಡುಕುತ್ತಾ ನಾನು ಅಲೆಯ ಬೇಕಾಗಿದೆ ಅಯ್ಯಾ ರಾಜನೇ! ಈ ಹುಡುಗಿಯು ಮುಂದೆ ನನ್ನ ಸೊಸೆಯಾಗ ತಕ್ಕವಳು."

೧೩-೧೪. "ನಾನು ಅವರುಗಳನ್ನು ಹುಡುಕಿಕೊಂಡು ಹಿಂದಿರುಗಿ ಬರುವವರೆಗೂ ನಿನ್ನ ಮನೆಯಲ್ಲಿ ಈ ಹುಡುಗಿಯನ್ನಿರಿಸಿಕೊಂಡು ಧರ್ಮದಿಂದ ರಕ್ಷಿಸು" ಎಂದು ಹೇಳಿದನು. ಆ ಬ್ರಾಹ್ಮಣನ ಮಾತನ್ನು ಕೇಳಿ ರಾಜನು ಕೂಡಲೆ ತನ್ನ ಮಗಳನ್ನು ಕರೆದು, ಈ ಬಾಲಿಕೆಯನ್ನು ಅವಳ ವಶಕ್ಕೆ ಒಪ್ಪಿಸಿದನು. ಅನಂತರ ಬ್ರಾಹ್ಮಣನು

**ಇತಿ ಶ್ರುತ್ವಾ ಸ ನೃಪತಿಶ್ಚಾಹೂಯ ಸ್ವಸುತಾಂ ತದಾ ।**
**ತಸ್ಮೈ ಸಮರ್ಪ್ಯ ತಾಂ ಪಶ್ಚಾತ್ಸ ದ್ವಿಜೋ ಗೇಹಮಾಯಯೌ ॥ ೧೪ ॥**

**ಸುದೇವಸ್ತು ನಿಶೀಥೇ ವೈ ರಮಣೀಂ ಪ್ರಾಹ ನಿರ್ಭಯಃ ।**
**ಕುತಸ್ತೇ ಮನ ಉದ್ವಿಗ್ನಂ ಸತ್ಯಂ ಕಥಯ ಮೇ ಸಖಿ ॥ ೧೫ ॥**

**ಸಾಹ ಮೇ ಹೃದಯೇ ನಿತ್ಯಂ ಸುದೇವೋ ಬ್ರಾಹ್ಮಣೋತ್ತಮಃ ।**
**ಉಷಿತಸ್ತದ್ವಿಯೋಗೇನ ವ್ಯಾಕುಲಾಹಂ ಸದಾ ಸಖೇ ॥ ೧೬ ॥**

**ಸುದೇವಶ್ಚಾಹ ಭೋಃ ಸುಭ್ರೂರ್ಯದಿ ತೇ ಬ್ರಾಹ್ಮಣೋತ್ತಮಂ ।**
**ಸಮರ್ಪಯಾಮಿ ತತ್ವಂ ಮೇ ಕಿಂ ದದಾಸಿ ವದಸ್ವ ಭೋಃ ॥ ೧೭ ॥**

---

ತನ್ನ ಮನೆಗೆ ಬಂದನು. ಹುಡುಗಿಯಾಗಿ ಮಾರ್ಪಟ್ಟಿದ್ದ ಸುದೇವನು ಆ ರಾತ್ರಿ ನಿರ್ಭಯದಿಂದ ಚಂದ್ರಾವಳಿಯನ್ನು ಕುರಿತು "ಎಲೌ ಗೆಳತೀ! ಏತಕ್ಕಾಗಿ ನಿನ್ನ ಮನಸ್ಸು ಇಷ್ಟು ಉದ್ವಿಗ್ನವಾಗಿದೆ? ಅದರ ನಿಜಾಂಶವನ್ನು ನಿಜವಾಗಿ ನನಗೆ ತಿಳಿಸು" ಎಂದು ಹೇಳಿದನು.

೧೫. ಅದಕ್ಕೆ ರಾಜಪುತ್ರಿಯು "ನನ್ನ ಮನಸ್ಸನ್ನು ಯಾವಾಗಲೂ ಸುದೇವನೆಂಬ ಬ್ರಾಹ್ಮಣಶ್ರೇಷ್ಠನು ಆಕರ್ಷಿಸಿದ್ದಾನೆ. ಅವನ ವಿಯೋಗದಿಂದ ನಾನು ಈರೀತಿ ವ್ಯಾಕುಲಪಡುತ್ತೇನೆ" ಎಂದು ಹೇಳಿದಳು.

೧೬. ಆಗ ಸುದೇವಾತ್ಮಕ ಬಾಲಿಕೆಯು "ಎಲೌ ಶೋಭನಾಂಗೀ! ನಿನಗೆ ವಿಪ್ರೋತ್ತಮನಾದ ಸುದೇವನನ್ನು ದೊರಕಿಸಿಕೊಟ್ಟರೆ ನನಗೆ ಏನನ್ನು ಕೊಡುವೆ?" ಎಂದು ಕೇಳಲಾಗಿ ಆಗ ರಾಜಪುತ್ರಿಯು "ಎಲೌ ದ್ವಿಜಕುಲೋತ್ಪನ್ನೆಯೇ! ಆತನನ್ನು ನನಗೆ ದೊರಕಿಸಿಕೊಟ್ಟರೆ ನಿನಗೆ ನಾನು ಯಾವಾಗಲೂ ದಾಸಿಯಾಗಿರುವೆನು" ಎಂದು ಉತ್ತರಕೊಟ್ಟಳು.

೧೭. ಈ ಮಾತನ್ನು ಕೇಳಿ ಸುದೇವಾತ್ಮಕ ಬಾಲಿಕೆಯು ತನ್ನ ಬಾಯಲ್ಲಿಟ್ಟುಕೊಂಡಿದ್ದ ಮಹಾಯಂತ್ರವನ್ನು ಈಚೆಗೆ ತೆಗೆಯಲು, ಒಡನೆ ಬಾಲಿಕೆಯ ರೂಪವು ಹೋಗಿ, ಸುದೇವನ ರೂಪವು ಪ್ರಾಪ್ತವಾಯಿತು. ಬಳಿಕ ರಾಜಪುತ್ರಿಯೊಡನೆ ಸಂತೋಷವಾಗಿ ಕ್ರೀಡಿಸಿ ಅನಂತರ ಯಂತ್ರವನ್ನು ಪಯೋಗಿಸಿ ಎಂದಿನಂತೆ ಬಾಲಿಕೆಯಾದನು.

ಸಾಹ ತೇ ಸರ್ವದಾ ದಾಸೀ ಭವಾಮಿ ದ್ವಿಜಭಾಮಿನಿ ।
ಇತಿ ಶ್ರುತ್ವಾ ಸುದೇವಸ್ತು ಮುಖಾನ್ನಿಷ್ಕೃಷ್ಯ ಯಂತ್ರಕಂ ॥ ೧೮ ॥

ಪೂರ್ವದೇಹತ್ವಮಾಪನ್ನಸ್ತಯಾ ಸಾರ್ಧಂ ತದಾರಮತ್ ।
ಚತುರ್ಮಾಸ್ಯೇ ಭವದ್ಗರ್ಭಸ್ತಸ್ಮಿನ್‌ಕಾಲೇ ತು ಭೋ ನೃಪ ॥ ೧೯ ॥

ಅಮಾತ್ಯತನಯೋ ವಿಪ್ರಸ್ತ್ರೀರೂಪಂ ಪ್ರತಿ ಮೋಹಿತಃ ।
ತದಾ ಮರಣಸಂಪನ್ನಂ ಜ್ಞಾತ್ವಾ ತಂ ಮದನಾಲಸಂ ॥ ೨೦ ॥

ಮಂತ್ರೀಸ್ನೇಹಾಚ್ಚ ಬಹುಧಾ ಸಂಚಿಂತ್ಯ ಹೃದಿ ಪಂಡಿತೈಃ ।
ತಸ್ಮೈ ಸಮರ್ಪಯಾಮಾಸ ತಾಂ ನಾರೀಂ ಮಂತ್ರಸಂಭವಾಂ ॥ ೨೧ ॥

ಸಾಹ ಭೋSಮಾತ್ಯತನಯ ತ್ರಿಮಾಸಂ ತೀರ್ಥಮಂಡಲೇ ।
ಸಂಸ್ನಾಹಿ ತರ್ಹಿ ಮೇ ಯೋಗ್ಯೋ ಭವಿಷ್ಯಸಿ ತಥಾ ಕುರು ॥ ೨೨ ॥

---

೧೮-೨೧. ನಿತ್ಯವೂ ಹೀಗೆ ನಡೆಯುತ್ತಿರಲು ರಾಜಪುತ್ರಿಯು ನಾಲ್ಕುತಿಂಗಳ ಗರ್ಭಿಣಿಯಾದಳು. ಅಯ್ಯಾ ರಾಜನೇ! ರಾಜಪುತ್ರಿಯ ವಶಕ್ಕೆ ಒಪ್ಪಿಸಿದ್ದ ಬ್ರಾಹ್ಮಣ ಬಾಲಿಕೆಯ ರೂಪವನ್ನು ಮಂತ್ರಿಯ ಮಗನಾದ ಮದನಾಲಸನು ಕಂಡು ಮೋಹಿಸಿ ಕಾಮಪೀಡಿತನಾದನು. ಅತಿಶಯ ಕಾಮಬಾಧೆಯಿಂದ ಮರಣೋನ್ಮುಖನಾಗಿರುವ ಮಂತ್ರಿಯು ಮಗನನ್ನು ನೋಡಿ, ಬಹು ವಾತ್ಸಲ್ಯದಿಂದ ಪಂಡಿತರುಗಳೊಡನೆ ಬಹುವಿಧವಾಗಿ ಆಲೋಚಿಸಿ ಮಂತ್ರಶಕ್ತಿಯಿಂದ ಉತ್ಪನ್ನಳಾಗಿರುವ ಆ ವಿಪ್ರ ಬಾಲಿಕೆಯನ್ನು ಅವನ ಮಗನಿಗೆ ದೊರಕಿಸಿಕೊಟ್ಟನು. ಆಗ ಆ ಬಾಲಿಕೆಯು ಮಂತ್ರಿ ಪುತ್ರನನ್ನು ಕುರಿತು "ಎಲೈ ಮಂತ್ರಿಕುಮಾರಾ! ನೀನು ಮೂರು ತಿಂಗಳುಕಾಲ ಸಮಸ್ತ ತೀರ್ಥಗಳಲ್ಲೂ ಸ್ನಾನಮಾಡಿದರೆ ಪವಿತ್ರನಾಗಿ ನನಗೆ ಅನುರೂಪನಾದ ವರನಾಗುವೆ. ಆರೀತಿ ಮಾಡು" ಎಂಬದಾಗಿ ಹೇಳಿದಳು.

೨೨. ಕಾಮಾತುರತೆಯಿಂದ ವಿನೀತನಾದ ಮಂತ್ರಿಯ ಮಗನು "ಹಾಗೆಯೇ ಆಗಲಿ" ಎಂದು ಒಪ್ಪಿ ತೀರ್ಥಕ್ಷೇತ್ರಗಳನ್ನು ಸಂಚರಿಸಲು ಹೊರಟುಹೋದನು. ಬ್ರಾಹ್ಮಣ ಬಾಲಿಕೆಯ ರೂಪವನ್ನು ಧರಿಸಿದ ಸುದೇವನು ಆ ಮಂತ್ರಿಪುತ್ರನ ಹಿರಿಯ ಧರ್ಮಪತ್ನಿಯೂ ಕಾಮಪರವಶೆಯೂ ಆದ ಭೂಪಕಾಂತಿಯನ್ನು ಕಾಮಪರವಶತೆಯಿಂದ ಭೋಗಿಸಿದನು. ಭೂಪಕಾಂತಿಯು ಈರೀತಿ ಸಾಹಚರ್ಯದಿಂದ ಎರಡುತಿಂಗಳ ಗರ್ಭವತಿಯಾದಳು.

**ತಥಾ ಮತ್ವಾ ಮಂತ್ರಿಸುತೋ ನಮ್ರಾತ್ಮಾ ಮದನಾಲಸಃ ।**
**ತೀರ್ಥಾಂತರಂ ಗತಃ ಸೋಽಪಿ ಸುದೇವಸ್ತಸ್ಯ ಯೋಷಿತಂ ॥ ೨೬ ॥**

**ಭೂಪಕಾಂತಿಂ ಕಾಮವಶಾಂ ಚಾಲಿಂಗ ಸಕಾಮುಕಃ ।**
**ಸಾ ತು ಗರ್ಭಂ ದಧಾರಾಶು ದ್ವಿಮಾಸಸ್ಯಾದ್ವಿಜೇನ ವೈ ॥ ೨೭ ॥**

**ಸುದೇವೋ ಮಾನುಷೋ ಭೂತ್ವಾ ಮೂಲದೇವಗೃಹಂ ಯಯೌ ।**
**ಸರ್ವಂ ನಿವೇದಯಾಮಾಸ ಯಥಾಜಾತಂ ನೃಪಾಲಯೇ ॥ ೨೮ ॥**

**ಮೂಲದೇವಃ ಪ್ರಸನ್ನಾತ್ಮಾ ಶಶಿನಂ ನಾಮ ಮಿತ್ರಕಂ ।**
**ವಿಂಶದ್ವರ್ಷತರಂ ಕೃತ್ವಾ ಸ್ವಯಂ ವೃದ್ಧಸ್ಯ ರೂಪವಾನ್ ॥ ೨೯ ॥**

**ರಾಜ್ಞೇ ನಿವೇದ್ಯ ತತ್ಸರ್ವಂ ವಧೂಂ ಮೇ ದೇಹಿ ಭೂಪತೇ ।**
**ತದಾ ತು ಸ ನೃಪೋ ಭೀತ್ವಾ ತಂ ಪ್ರಾಹ ಶ್ಲಕ್ಷ್ಣಯಾ ಗಿರಾ ॥ ೩೦ ॥**

---

೨೮. ಅನಂತರ ವಿಪ್ರಬಾಲಿಕೆಯು ತನ್ನ ನೈಜವಾದ ಸುದೇವರೂಪವನ್ನು ವಹಿಸಿ, ಮೂಲದೇವನ ಮನೆಗೆ ಬಂದು, ಅರಮನೆಯಲ್ಲಿ ನಡೆಸಿದುದೆಲ್ಲವನ್ನೂ ಅವನಿಗೆ ವಿವರವಾಗಿ ತಿಳಿಸಿದನು.

೨೯ ಮೂಲದೇವನು ಅದನ್ನು ಕೇಳಿ ಸಂತೋಷಗೊಂಡು, ತನ್ನ ಮಿತ್ರನಾದ ಶಶಿಯನ್ನು ಯಂತ್ರಸಹಾಯದಿಂದ ಇಪ್ಪತ್ತುವರ್ಷದ ಯುವಕನನ್ನಾಗಿ ಮಾಡಿ, ತಾನು ವೃದ್ಧಬ್ರಾಹ್ಮಣವೇಷವನ್ನು ಧರಿಸಿ ಅವನೊಡನೆ ರಾಜನ ಸಮೀಪಕ್ಕೆ ಹೋದನು.

೩೦-೩೮. ಬಳಿಕ ರಾಜನಿಗೆ ತನ್ನ ಮನೆಯವರನ್ನು ಹುಡುಕಾಡಿದ ವಿಷಯ ಗಳೆಲ್ಲವನ್ನೂ ತಿಳಿಸಿ “ ಎಲೈ ರಾಜನೇ ! ನಾನು ನಿನ್ನ ವಶದಲ್ಲಿ ಬಿಟ್ಟುಹೋಗಿದ್ದ ನನ್ನ ಪುತ್ರವಧು (ಬಾಲಿಕೆಯನ್ನು) ವನ್ನು ಕೊಡು ” ಎಂದು ಕೇಳಿದನು. ಆಗ ರಾಜನು ಭಯದಿಂದ ಮಾತಿನಲ್ಲಿ ತೊದಲುತ್ತಾ ಆ ಬ್ರಾಹ್ಮಣನನ್ನು ಕುರಿತು “ ಅಯ್ಯಾ ವಿಪ್ರನೇ ! ರಾಜಕರನೆಂಬ ನಮ್ಮ ಅಮಾತ್ಯನ ಪುತ್ರನಾದ ಮದನಾಲಸನು ಸುಂದರಿ ಯಾದ ನಿನ್ನ ವಧುವನ್ನು ನೋಡಿ ಕಾಮಾತುರನಾಗಿ ಮೋಹಗೊಂಡು ಆ ಬಾಧೆ ಯಿಂದ ಮರಣೋನ್ಮುಖನಾದನು. ”

ಮಂತ್ರೀ ರಾಜಕರೋ ನಾಮ ತತ್ಪುತ್ರೋ ಮದನಾಲಸಃ ।
ದೃಷ್ಟ್ವಾ ತವ ವಧೂಂ ರಮ್ಯಾಂ ಮುಮೋಹ ಮರಣೋನ್ಮುಖಃ ॥ ೨೮ ॥

ಸ್ವಪುತ್ರಸ್ಯ ವಿಯೋಗೇನ ಸ ಮಂತ್ರೀ ಚ ತಥೇದೃಶಃ ।
ತದಾಹಂ ಬ್ರಾಹ್ಮಣಾನ್ ವೃದ್ಧಾನ್ ಪೃಷ್ಟ್ವಾ ತಸ್ಮೈ ಚ ತಾಂ ದದೌ ॥೨೯॥

ಯಥಾ ಪ್ರಸನ್ನೋ ಹಿ ಭವಾನ್ ಕುರು ತ್ವಂ ಚ ತಥಾವಿಧಂ ।
ಮೂಲದೇವಸ್ತು ನೃಪತಿಂ ಪ್ರೋವಾಚ ವಿಷಮುದ್ವಮನ್ । ॥ ೩೦ ॥

ದೇಹಿ ಭೂಪ ಸುತಾಂ ಮಹ್ಯಂ ಮತ್ಪುತ್ರಸ್ಯ ಸುಖಾಯ ವೈ ।
ತಥೈವ ಮತ್ವಾ ಸ ನೃಪಃ ಸುತಾಂ ಚಂದ್ರಾವಲೀಂ ಶುಭಾಂ ॥ ೩೧ ॥

ದತ್ವಾ ಚ ವೇದವಿಧಿನಾ ಬಹುಧಾ ದ್ರವ್ಯಸಂಯುತಾಂ ।
ಸ್ವಯಂ ಚಕಾರ ರಾಜ್ಯಂ ವೈ ಬ್ರಹ್ಮದೋಷವಿವರ್ಜಿತಃ ॥ ೩೨ ॥

೨೯. "ತನ್ನ ಪುತ್ರನ ಆ ಆವಸ್ಥೆಯನ್ನು ನೋಡಿ ಕೊರಗುಹತ್ತಿ ಮಂತ್ರಿಯೂ ಮೃತ್ಯುಶಯ್ಯೆಯಲ್ಲಿದ್ದನು. ಆಗ ನಾನು ಜ್ಞಾನವೃದ್ಧರಾದ ಬ್ರಾಹ್ಮಣರನ್ನು ಕೇಳಿ, ನೀನಿರಿಸಿಹೋಗಿದ್ದ ಆ ಬಾಲಿಕೆಯನ್ನು ಮಂತ್ರಿಪುತ್ರನಿಗೆ ಕೊಟ್ಟೆನು"

೩೦-೩೧. "ನಾನು ಈರೀತಿ ಮಾಡಿದುದಕ್ಕೆ ನೀನು ಕುಪಿತನಾಗದೆ ಪ್ರಸನ್ನನಾಗು" ಎಂದು ಪ್ರಾರ್ಥಿಸಿದನು. ಆಗ ಮೂಲದೇವನು ಕೋಪಾವೇಶದಿಂದ ವಿಷಜ್ವಾಲೆಯನ್ನುಗುಳುವಂತೆ ಘುಡುಘುಡಿಸುತ್ತಾ ರಾಜನನ್ನು ಕುರಿತು "ನನ್ನ ಮಗನ ಸುಖಕ್ಕೋಸ್ಕರ ನಿಶ್ಚಯಿಸಿದ್ದ ಆ ಹುಡುಗಿಯನ್ನು ನೀನು ಮಂತ್ರಿಯ ಮಗನಿಗೆ ಕೊಟ್ಟುದರಿಂದ ಈಗ ನನ್ನ ಮಗನಿಗೆ ನಿನ್ನ ಮಗಳನ್ನೇ ಕೊಡು" ಎಂದು ಕೇಳಿದನು. ರಾಜನು "ಹಾಗೆಯೇ ಆಗಲಿ" ಎಂದು ತನ್ನ ಪುತ್ರಿಯೂ ಸುಂದರಿಯೂ ಆದ ಚಂದ್ರಾವಳಿಯನ್ನು ಧನಕನಕ ವಸ್ತ್ರಾದಿಗಳೊಡನೆ ವೇದೋಕ್ತವಿಧಾನದಿಂದ ಆ ಬ್ರಾಹ್ಮಣಪುತ್ರನಿಗೆ ಕೊಟ್ಟು ತಾನು ಬ್ರಹ್ಮದೋಷದಿಂದ ಮುಕ್ತನಾಗಿ ರಾಜ್ಯಭಾರ ಮಾಡಿಕೊಂಡಿದ್ದನು.

೩೨–೩೩. ಶಶಿಯು ರಾಜನ ಮಗಳನ್ನು ಕರೆದುಕೊಂಡು ತನ್ನ ಮನೆಗೆ ಬಂದನು. ಇದನ್ನು ನೋಡಿದ ಸುದೇವನು ದುಃಖಿತನಾಗಿ ಮೂಲದೇವನನ್ನು ಕುರಿತು "ಅಯ್ಯಾ ಮಹಾತ್ಮಾ! ಶ್ರೇಷ್ಠಳಾದ ಈ ರಾಜಪುತ್ರಿಯು ನನ್ನವಳು. ಮತ್ತು

**ಶಶೀ ತು ಭೂಪತೇಃ ಕನ್ಯಾಂ ಗೃಹೀತ್ವಾ ಸ್ವಗೃಹಂ ಯಯೌ ।**
**ಸುದೇವಸ್ತು ತದಾ ದುಃಖೀ ಮೂಲದೇವಮುವಾಚ ಹ** ॥ ೩೩ ॥

**ಮದೀಯೇಯಂ ನೃಪಸುತಾ ಭೋಗಪತ್ನೀ ಮಹೋತ್ತಮಾ ।**
**ತಚ್ಛ್ರುತ್ವಾ ಮೂಲದೇವಸ್ತು ವಿಸ್ಮಿತಃ ಸ ತಥಾಕರೋತ್** ॥ ೩೪ ॥

**ಇತ್ಯುಕ್ತ್ವಾ ನೃಪತಿಂ ಪ್ರಾಹ ವೈತಾಲೋ ರುದ್ರಕಿಂಕರಃ ।**
**ಕಸ್ಮೈ ಪ್ರಾಪ್ತಾ ನೃಪಸುತಾ ಧರ್ಮತಸ್ತದ್ವದಸ್ವ ಮೇ** ॥ ೩೫ ॥

॥ ರಾಜೋವಾಚ ॥

**ಪಿತೃಮಾತ್ರಾಜ್ಞಯಾ ಪುತ್ರೀ ದೇವಾನಾಂ ಸಮ್ಮುಖೇ ಸ್ಥಿತಾ ।**
**ಯಸ್ಮೈ ನಿವೇದಿತಾ ತಸ್ಮೈ ಸಾ ಯೋಗ್ಯಾ ಧರ್ಮತಃ ಸದಾ** ॥ ೩೬ ॥

**ಶಾಸ್ತ್ರೇಷು ಕಥಿತಂ ದೇವ ಸ್ತ್ರೀರತ್ನಂ ಸರ್ವದೈವ ಹಿ ।**
**ಯಥಾಕ್ಷೇತ್ರಂ ಭುವಿ ಖ್ಯಾತಂ ಬೀಜಮನ್ಯೇನ ರೋಪಿತಂ** ॥ ೩೭ ॥

---

ನನ್ನ ಭೋಗಕ್ಕೆ ಭಾಗಿಯಾದವಳು" ಎಂದು ಹೇಳಿಕೊಂಡನು. ಅದನ್ನು ಕೇಳಿ ಮೂಲದೇವನು ಆಶ್ಚರ್ಯಪಟ್ಟು ಅವನ ಅಭಿಪ್ರಾಯದಂತೆಯೇ ಒಪ್ಪಿದನು.

೩೪. ರುದ್ರಕಿಂಕರನಾದ ಬೇತಾಳವು ಹೀಗೆಂದು ಹೇಳಿ ವಿಕ್ರಮರಾಜನನ್ನು ಕುರಿತು "ರಾಜನ ಮಗಳನ್ನು ಧರ್ಮಪ್ರಕಾರ ಯಾರಿಗೆ ಕೊಟ್ಟಹಾಗಾಯಿತು ಎಂಬುದನ್ನು ಹೇಳು" ಎಂದು ಕೇಳಿತು.

೩೫. ಅದಕ್ಕೆ ರಾಜನು "ತಾಯಿ ತಂದೆಗಳ ಅನುಜ್ಞೆಹೊಂದಿ ದೇವರ ಸಮ್ಮುಖದಲ್ಲಿ ನಿಲ್ಲಿಸಲ್ಪಟ್ಟ ಮಗಳು ಯಾರಿಗೆ ದಾನಮಾಡಲ್ಪಡುವಳೋ ಅವನಿಗೇ ಅವಳು ಧರ್ಮಪ್ರಕಾರ ಸಲ್ಲತಕ್ಕವಳು"

೩೬-೩೭. "ಸ್ವಾಮೀ! ಇನ್ನೊಬ್ಬನು ಒಂದು ಬೀಜಬಿತ್ತನೆಯ ಕೆಲಸಮಾಡಿದ್ದಾಗ್ಯೂ ಕ್ಷೇತ್ರವು ಕೃಷಿಗಾರನಿಗೆ ಹೇಗೆ ಸಂಬಂಧಪಟ್ಟುದೆನಿಸಿ ಬಿತ್ತನೆ ಮಾಡಿದವನಿಗೆ ಹೇಗೆ ಸಂಬಂಧಪಡುವದಿಲ್ಲವೋ, ಹಾಗೆಯೇ ಈ ಸ್ತ್ರೀರತ್ನವಾದ ರಾಜಕುಮಾರಿಯು ಶಶಿಯನ್ನೇ ಹೊಂದಲು ಅರ್ಹಳು."

ತತ್ಕ್ಷೇತ್ರಂ ಕೃಷಿಕಾರಸ್ಯ ಬೀಜದತ್ತಸ್ಯ ನೈವ ಹ ।
ತಸ್ಮಾದ್ವೈ ರಾಜತನಯಾ ಶಶಿನಂ ವರಯಿಷ್ಯತಿ ॥ ೩೮ ॥

ಸುದೇಪಸ್ಯೈವ ತನಯೋ ಯೋಗ್ಯತ್ವಂ ಹಿ ಗಮಿಷ್ಯತಿ ।
ಇತಿ ತೇ ಕಥಿತಂ ದೇವ ಯಥಾಶಾಸ್ತ್ರೇಷು ಭಾಷಿತಂ ॥ ೩೯ ॥

ಕಿಂ ಕೃತಂ ಮಂತ್ರಿಪುತ್ರೇಣ ತಥೈವ ಕಥಯಸ್ವ ಮೇ ।
ಇತಿ ಶ್ರುತ್ವಾ ಸ ಹೋವಾಚ ಸ ಪುತ್ರೋ ಮದನಾಲಸಃ ॥ ೪೦ ॥

ವೃಂದಾವನಂ ಶುಭಂ ಪ್ರಾಪ್ಯ ರಾಧಾಕುಂಡೇ ಸಮಾಗತಃ ।
ಸ ಸ್ನಾತ್ವಾ ಬಹುಲಾಷ್ಟಮ್ಯಾಂ ತತ್ಪುಣ್ಯೇನ ನೃಪೋತ್ತಮ ॥ ೪೧ ॥

ಭಸ್ಮಸಾದಭವತ್ಪಾಪಂ ಯೇನ ಮೋಹತ್ವಮಾಗತಃ ।
ಸ್ಮೃತ್ವಾ ಸ ಹೃದಿ ಗೋವಿಂದಂ ತುಷ್ಟಾವ ಶ್ಲಕ್ಷ್ಣಯಾ ಗಿರಾ ॥ ೪೨ ॥

---

೩೮. "ರಾಜಕುಮಾರಿಯಲ್ಲಿ ಜನಿಸುವ ಮಗುವು ಸುದೇವನಿಗೆ ಸಂಬಂಧಪಟ್ಟದ್ದಾಗುವುದು. ಈ ವಿಚಾರದಲ್ಲಿ ಶಾಸ್ತ್ರದಲ್ಲಿ ಹೇಳಿರುವುದನ್ನೇ ನಿನಗೆ ಹೇಳಿದ್ದೇನೆ."

೩೯. "ಎಲೈ ದೇವಾಂಶಸಂಭೂತವಾದ ಬೇತಾಳವೇ ! ಮಂತ್ರಿ ಪುತ್ರನು ಮುಂದೆ ಏನುಮಾಡಿದನು ಎಂಬುದನ್ನು ನನಗೆ ತಿಳಿಸು" ಎಂದು ರಾಜನು ಕೇಳಿದನು,

೪೦. ಇದನ್ನು ಕೇಳಿ ಬೇತಾಳವು "ಅಯ್ಯಾ ಪ್ರಭುವೇ ! ಕೇಳು ; ಮಂತ್ರಿ ಪುತ್ರನು ಆಕೆಯ ಮೇಲಿನ ವ್ಯಾಮೋಹದಿಂದ ಅವಳು ಹೇಳಿದುದನ್ನು ಜಾಗ್ರತೆ ನೆರವೇರಿಸಿ, ಅವಳನ್ನು ಪಡೆಯಬೇಕೆಂಬ ಕಾಮಾತುರವುಳ್ಳವನಾಗಿ ಪುಣ್ಯಕರವಾದ ಬೃಂದಾವನ ಕ್ಷೇತ್ರಕ್ಕೆ ಪ್ರಯಾಣಮಾಡಿ ಅಲ್ಲಿದ್ದ ರಾಧಾಕುಂಡದ ಬಳಿಗೆ ಬಂದನು.

೪೧. ಹೀಗೆ ಬಂದ ಅವನು ಗೋಕುಲಾಷ್ಟಮಿ (ಕೃಷ್ಣಜನ್ಮಾಷ್ಟಮಿ) ಯ ದಿವಸ ಆ ಕುಂಡದಲ್ಲಿ ಸ್ನಾನಮಾಡಿದನು. ಯಾವ ಪಾಪಫಲದಿಂದ ಈರೀತಿ ಮೋಹ ಹೊಂದಿದ್ದನೋ ಆ ಪಾಪವು ಈ ಕುಂಡದಲ್ಲಿ ಸ್ನಾನಮಾಡಿದುದರಿಂದ ನಾಶವಾಯಿತು.

೪೨. ಅನಂತರ ಮಂತ್ರಿಪುತ್ರನು ಸ್ವಲ್ಪ ಹೊತ್ತು ಮನದಲ್ಲಿ ಧ್ಯಾನಿಸಿ ಹಿಂದೆ ನಡೆದುದೆಲ್ಲವನ್ನೂ ಸ್ಮರಿಸಿಕೊಂಡು, ಆ ಗೋವಿಂದ (ಕೃಷ್ಣಪರಮಾತ್ಮ) ನನ್ನು ಮನ ಕರಗಿಸುವ ಮಾತುಗಳಿಂದ ಸ್ತುತಿಸಿದನು.

॥ ಮದನಾಲಸ ಉವಾಚ ॥

ನಮಸ್ತೇ ದಯಾಸಿಂಧವೇ ಕೃಷ್ಣದೇವ ।
ತ್ವಯೇದಂ ತತಂ ವಿಶ್ವಮಂಭೋಧಿರೂಪಂ ॥
ತ್ವಯೈಕೇನ ಲೀಲಾರ್ಥತೋ ದೇವದೇವ
ಪ್ರಿಯಾರಾಧಯಾ ಸಾರ್ಧಮೇತದ್ಧಿ ಗುಪ್ತಂ ॥ ೪೩ ॥

ಜಗತ್ಯಂತಕಾಲೇ ತ್ವಯಾ ಕಾಲಮೂರ್ತ್ಯಾ ।
ಜಗತ್ಸಂಹೃತಂ ವೈ ನಮಸ್ತೇ ನಮಸ್ತೇ ॥
ಮದೀಯಾ ಚ ಬುದ್ಧಿರ್ಹೃಷೀಕೇಶ ಶುದ್ಧಾ ।
ಯಥಾಸ್ಯಾತ್ತಥೈವೇಶ ಶೀಘ್ರಂ ಕುರು ತ್ವಂ ॥ ೪೪ ॥

ಇತಿ ಸ್ತೋತ್ರಪ್ರಭಾವೇನ ದೇವದೇವೇನ ಮೋಚಿತಾ ।
ಕಾಮಪಾಶಾತ್ತಸ್ಯ ಬುದ್ಧಿಃ ಸ ಕ್ಷತ್ರೀ ಗೃಹಮಾಯಯೌ ॥ ೪೫ ॥

---

೪೩. ಮದನಾಲಸನು ಮಾಡಿದ ಸ್ತುತಿಪ್ರಕಾರವು ಇದು "ದಯಾಸಮುದ್ರನಾದ ಕೃಷ್ಣಪರಮಾತ್ಮನೇ ! ನಿನಗೆ ನಮಸ್ಕಾರ. ಸಂಸಾರವೆಂಬ ಸಾಗರವು ನಿನ್ನಿಂದಲೇ ವ್ಯಾಪ್ತವಾಗಿದೆ. ದೇವದೇವನೇ ! ನಿನ್ನ ಪ್ರೀತಿಯವಳಾದ ರಾಧೆಯ ಸಂಗಡ ನೀನು ವಿಲಾಸವನ್ನು ಅನುಭವಿಸುವುದಕ್ಕಾಗಿ ಗುಪ್ತವಾದ ಈ ಬೃಂದಾವನ ಕ್ಷೇತ್ರವು ನಿರ್ಮಿತವಾಯಿತು.

೪೪. ಜಗತ್ಪ್ರಳಯಕಾಲದಲ್ಲಿ ಕಾಲಸ್ವರೂಪನಾಗಿ ಪ್ರಪಂಚವನ್ನು ಲಯ ಮಾಡುವ ಮಹಾಮಹಿಮನೇ ! ನಿನಗೆ ನಮಸ್ಕಾರ. ಇಂದ್ರಿಯಗಳ ಒಡೆಯನಾದ ಪರಮಾತ್ಮನೇ ! ನನ್ನ ಬುದ್ಧಿಯು ಪರಿಶುದ್ಧವಾಗುವಂತೆ ನೀನು ಜಾಗ್ರತೆ ಅನುಗ್ರಹಿಸು" ಎಂದು ಪ್ರಾರ್ಥಿಸಿದನು.

೪೫. ಈ ಪ್ರಕಾರವಾದ ಸ್ತೋತ್ರದಿಂದ ದೇವದೇವನು ಸಂತುಷ್ಟನಾಗಿ ಮಂತ್ರಿಪುತ್ರನಾದ ಮದನಾಲಸನ ಬುದ್ಧಿಯನ್ನು ಕಾಮಪಾಶದಿಂದ ಬಿಡುಗಡೆ ಮಾಡಿಸಿದನು. ಅನಂತರ ಮದನಾಲಸನು ಹಿಂದಿರುಗಿ ಮನೆಗೆ ಬಂದನು.

ರಮಣೀಂ ಸ್ವಾಂ ಸಮಾಲಿಂಗ್ಯ ನನಂದ ಮುದಿತೋ ನೃಪ ।
ವಿಪ್ರದೋಷವಿನಾಶಾಯ ಹೃದಿ ಸಂಚಿಂತ್ಯ ಬುದ್ಧಿಮಾನ್ ॥ ೪೬ ॥

ಸುದೇವಂ ಸ ಸಮಾಹೂಯ ಸ್ವಾಂ ಸ್ವಸಾರಂ ದದೌ ಮುದಾ ।
ಸುದೇವಸ್ತಸ್ಯ ಭಗಿನೀಂ ಕ್ಷತ್ರಿಯಸ್ಯ ಮದಾತುರಾಂ ॥ ೪೭ ॥

ಧರ್ಮೇಣೋದ್ವಾಹ್ಯ ಸ್ವಂ ಗೇಹಂ ಪ್ರಾಪ್ತವಾನ್ ಕಾಮಕಿಂಕರಃ ।
ಇತಿ ತೇ ಕಥಿತಂ ಭೂಪ ಚರಿತ್ರಂ ತಸ್ಯ ಧೀಮತಃ ॥ ೪೮ ॥

ಮೂಲದೇವಸ್ಯ ವಿಪ್ರಸ್ಯ ತಥಾನ್ಯತ್ಕಥಯಾಮ್ಯಹಂ ॥ ೪೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಖಂಡೇ ಕಲಿಯುಗೀಯೇತಿಹಾಸ ಸಮುಚ್ಚಯೇ
ಚತುರ್ದಶೋಽಧ್ಯಾಯಃ.



---

೪೬. ರಾಜನೇ! ಕೇಳು ಆ ಮದನಾಲಸನು ಆ ಬಾಲಿಕೆಯ ಸಂಬಂಧವಾದ ವ್ಯಾಮೋಹವನ್ನೇ ಮರೆತು, ಮನಶ್ಶುದ್ಧಿಯುಳ್ಳವನಾಗಿ ತನ್ನ ನಿಜಪತ್ನಿಯೊಡಗೂಡಿ ಹರ್ಷಿತನಾದನು. ಬುದ್ಧಿಶಾಲಿಯಾದ ಆ ಮಂತ್ರಿಪುತ್ರನು ತಾನು ಹಿಂದೆ ನಡೆಯಿಸಿದ ಕೃತ್ಯವನ್ನು ಆಲೋಚಿಸಿ ವಿಪ್ರನ ವಿಷಯದಲ್ಲಿ ತಾನು ಆಚರಿಸಿದ ದೋಷದ ಪರಿಹಾರಕ್ಕಾಗಿ ಸುದೇವ ಬ್ರಾಹ್ಮಣನನ್ನು ಕರೆಯಿಸಿ ಅವನಿಗೆ ತನ್ನ ತಂಗಿಯನ್ನು ಸಂತೋಷದಿಂದ ಕೊಟ್ಟನು.

೪೭-೪೮. ಕ್ಷತ್ರಿಯ ರಮಣಿಯೂ ಮದದ ಆತುರಯುಕ್ತಳೂ ಆದ ಅವನ ತಂಗಿಯನ್ನು, ಸುದೇವನು ಧರ್ಮತಃ ವಿವಾಹವಾಗಿ, ಕಾಮವಶನಾಗಿ ತನ್ನ ಮನೆಗೆ ಬಂದನು. ಈರೀತಿ ಬುದ್ಧಿಶಾಲಿಯಾದ ಮೂಲದೇವನೆಂಬ ವಿಪ್ರನ ಕಥೆಯನ್ನು ನಿನಗೆ ಹೇಳಿದ್ದೇನೆ. ಇದೇ ತರಹದ ಇನ್ನೊಂದು ಕಥೆಯನ್ನು ಹೇಳುವೆನು” ಎಂದು ಬೇತಾಳವು ಹೇಳಿತು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ ಖಂಡದಲ್ಲಿ
ಕಲಿಯುಗದ ಇತಿಹಾಸ ಸಮುದಾಯವೆಂಬ
ಹದಿನಾಲ್ಕನೆಯ ಅಧ್ಯಾಯ ಮುಗಿದುದು.

॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ

## ಪಂಚದಶೋಽಧ್ಯಾಯಃ

॥ ಸೂತ ಉವಾಚ ॥

ಪ್ರಶಸ್ಯ ಭೂಪತಿಂ ಶುದ್ಧಂ ವೈತಾಲೋ ರುದ್ರಕಿಂಕರಃ ।
ಪುನರಾಖ್ಯಾನಕಂ ವಿಪ್ರ ವರ್ಣಯಾಮಾಸ ಸುಂದರಂ ॥ ೧ ॥

ಕಾನ್ಯಕುಬ್ಜೇ ಮಹಾರಾಜ ಬ್ರಾಹ್ಮಣೋ ದಾನಶೀಲಕಃ ।
ಬಭೂವ ಸತ್ಯಸಂಧಶ್ಚ ದೇವೀಪೂಜನತತ್ಪರಃ ॥ ೨ ॥

ಪ್ರತಿಗ್ರಹೇಣ ಯದ್ದ್ರವ್ಯಂ ತೇನ ದಾನಮಚೀಕರತ್ ।
ಕದಾಚಿತ್ತು ಶರತ್ಕಾಲೇ ನವದುರ್ಗಾವ್ರತಂ ಹ್ಯಭೂತ್ ॥ ೩ ॥

---

## ಹದಿನೈದನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಎಲೈ ಶೌನಕನೇ! ರುದ್ರಕಿಂಕರನಾದ ಬೇತಾಳವು ರಾಜನನ್ನು ಹೊಗಳಿ ಪರಿಶುದ್ಧಾತ್ಮನಾದ ಅವನಿಗೆ ಮತ್ತೊಂದು ಕಥೆಯನ್ನು ಹೇಳಲು ಆರಂಭಿಸಿತು.

೨. "ಎಲೈ ರಾಜನೇ! ಕನ್ಯಾಕುಬ್ಜದಲ್ಲಿ ದಾನಶೀಲನೂ, ಸತ್ಯಸಂಧನೂ, ದೇವೀಪೂಜಾತತ್ಪರನೂ ಆದ ಒಬ್ಬ ಬ್ರಾಹ್ಮಣನಿದ್ದನು. ಅವನು ತಾನು ಪ್ರತಿಗ್ರಹ ಮಾಡುವ ಮೂಲಕ ಪ್ರಾಪ್ತವಾದ ದ್ರವ್ಯದಿಂದಲೇ ದಾನಾದಿಗಳನ್ನು ಮಾಡುತ್ತಿದ್ದನು.

೩. ಒಂದುಸಲ ಶರದೃತುವಿನಲ್ಲಿ ನವದುರ್ಗಾವ್ರತ ಮಾಡಬೇಕಾಗಿ ಬಂದಿತು. ತತ್ಕಾಲದಲ್ಲಿ ಆ ಬ್ರಾಹ್ಮಣನಿಗೆ ಯಾವ ದಾನವೂ ದೊರೆಯಲಿಲ್ಲ. ಆದುದರಿಂದ ಅತಿ ಚಿಂತಾಕ್ರಾಂತನಾದನು.

ನ ಪ್ರಾಪ್ತಂ ದಾನತೋ ದ್ರವ್ಯಂ ತದಾ ಚಿಂತಾತುರೋಽಭವತ್ ।
ಕಿಂ ಕರ್ತವ್ಯಂ ಮಯಾ ಚಾದ್ಯ ಯೇನ ದ್ರವ್ಯಯುತೋ ಹ್ಯಹಂ ॥ ೪ ॥

ಕನ್ಯಾ ನಿಮಂತ್ರಿತಾಶ್ಚಾದ್ಯ ಕಥಂ ತಾ ಭೋಜಯಾಮ್ಯಹಂ ।
ಇತಿ ಶೋಕಸಮಾಯುಕ್ತಸ್ತದಾ ದೇವೀಪ್ರಸಾದತಃ ॥ ೫ ॥

ಮುದ್ರಾಃ ಪಂಚ ತದಾ ಪ್ರಾಪ್ತಾಸ್ತಾಭಿರ್ವ್ರತಮಚೀಕರತ್ ।
ನಿರಾಹಾರವ್ರತಂ ತೇನ ಕೃತಂ ತು ನವಮಾಹ್ನಿಕಮ್ ॥ ೬ ॥

ತೇನ ವ್ರತಪ್ರಭಾವೇನ ಮೃತೋ ದೇವತ್ವಮಾಗತಃ ।
ಜೀಮೂತಕೇತುರಿತಿ ಚ ಸೋಽಭೂದ್ವಿದ್ಯಾಧರಾಧಿಪಃ ॥ ೭ ॥

ಹಿಮಾಚಲಗಿರೌ ರಮ್ಯೇ ಪುರೇ ವಿದ್ಯಾಧರೇ ಶುಭೇ ।
ಉವಾಸ ಕತಿಚಿದ್ವರ್ಷಾನ್ ದಿವ್ಯಭೋಗಪ್ರಭೋಗವಾನ್ ॥ ೮ ॥

ತತ್ರ ಕಲ್ಪದ್ರುಮಂ ನಿತ್ಯಂ ಪೂಜಯಾಮಾಸ ಭಕ್ತಿತಃ ।
ತೇನ ವೃಕ್ಷಪ್ರಭಾವೇನ ಜಾತಃ ಪುತ್ರೋ ಮಹೋತ್ತಮಃ ॥ ೯ ॥

---

೪-೫. "ಈಗ ನಾನು ಯಾವ ರೀತಿಯಿಂದ ದ್ರವ್ಯವನ್ನು ಸಂಪಾದಿಸಲಿ, ಕುಮಾರೀಪೂಜಾಂಗವಾಗಿ ಕನ್ಯೆಯರಿಗೆ ಹೇಗೆ ಭೋಜನಮಾಡಿಸಲಿ" ಎಂದು ದುಃಖಿತನಾಗಿದ್ದನು. ಆಗ ಅವನಿಗೆ ದೇವಿಯು ಅನುಗ್ರಹದಿಂದ ಐದು ಸ್ವರ್ಣಮುದ್ರೆ (ವರಹ) ಗಳು ದೊರೆತುವು. ಅದರಿಂದ ವ್ರತವನ್ನು ಸಾಂಗವಾಗಿ ಮುಗಿಸಿದನು. ಆ ವ್ರತಾಚರಣೆಯಕಾಲದಲ್ಲಿ ಒಂಬತ್ತು ದಿನಗಳೂ ನಿರಾಹಾರಮಾಡಿದನು. ಈ ವ್ರತಪ್ರಭಾವದಿಂದ ದೇಹತ್ಯಾಗಾನಂತರ ಅವನಿಗೆ ದೇವತ್ವ ಪ್ರಾಪ್ತಿಯಾಯಿತು.

೬-೮. ಈ ವ್ರತಮಹಿಮೆಯಿಂದ ಆತನು ಜೀಮೂತಕೇತುವೆಂಬ ಹೆಸರಿನ ವಿದ್ಯಾಧರ ರಾಜಪದವಿಯನ್ನು ಪಡೆದನು. ಅವನು ಹಿಮಾಲಯಪರ್ವತದ ಪ್ರಾಂತದಲ್ಲಿದ್ದ ಸುಂದರವಾದ ವಿದ್ಯಾಧರನಗರದಲ್ಲಿ ಕೆಲವು ವರ್ಷಗಳಕಾಲ ದೇವಲೋಕದ ಸುಖಗಳನ್ನು ಅನುಭವಿಸುತ್ತಾ ಇದ್ದನು. ಮತ್ತು ನಿತ್ಯವೂ ಭಕ್ತಿಯಿಂದ ಕಲ್ಪವೃಕ್ಷವನ್ನು ಪೂಜಿಸುತ್ತಿದ್ದನು.

೯. ಆ ಕಲ್ಪವೃಕ್ಷದ ಪೂಜಾಪ್ರಭಾವದಿಂದ ಶ್ರೇಷ್ಠನೂ ಸರ್ವಕಲಾಪ್ರವೀಣನೂ ಆದ ಜೀಮೂತವಾಹನನೆಂಬ ಮಗನು ಜನಿಸಿದನು.

ಕಲಾಸರ್ವೇಷು ನಿಪುಣೋ ನಾಮ್ನಾ ಜೀಮೂತವಾಹನಃ ।
ಸ ವೈ ಪೂರ್ವಭವೇ ರಾಜನ್ ಮಧ್ಯದೇಶೇ ಮಹೋತ್ತಮೇ ॥ ೧೦ ॥

ಕ್ಷತ್ರಿಯಃ ಶೂರಸೇನಾಖ್ಯೋ ಬಭೂವ ವಸುಧಾಧಿಪಃ ।
ಏಕದಾ ಮೃಗಯಾಕೇಲಿಲೋಲುಪಃ ಸ ಮಹೀಪತಿಃ ॥ ೧೧ ॥

ಸ್ರಾಪ್ತವಾನುತ್ಪಲಾರಣ್ಯಂ ಯತ್ರ ವಾಲ್ಮೀಕಿಸಂಸ್ಥಿತಿಃ ।
ಚೈತ್ರಶುಕ್ಲನವಮ್ಯಾಂ ತು ನ ಕೃತಂ ಜೀವಘಾತನಂ ॥ ೧೨ ॥

ಉತ್ಸವಂ ರಾಮದಿವಸೇ ಚಕಾರ ವಿಧಿವನ್ನೃಪಃ ।
ವಾಲ್ಮೀಕೇತ್ತ್ವ ಕುಟೀಮಧ್ಯೇ ರಾತ್ರೌ ಜಾಗರಣಂ ಕೃತಂ ॥ ೧೩ ॥

ಶ್ರುತಾ ರಾಮಮಯೀ ಗಾಥಾ ತಸ್ಯ ಪುಣ್ಯಪ್ರಭಾವತಃ ।
ವಿಧ್ಯಾಧರತ್ವಮಾಪನ್ನೋ ಮುಮುದೇ ತತ್ರ ಶಕ್ರವತ್ ॥ ೧೪ ॥

---

೧೦-೧೧. (ಅವನ ಪೂರ್ವವೃತ್ತಾಂತವನ್ನು ಹೇಳುತ್ತಾರೆ) ಈ ಜೀಮೂತವಾಹನನು ಹಿಂದಿನ ಜನ್ಮದಲ್ಲಿ ಶ್ರೇಷ್ಠವಾದ ಮತ್ಸ್ಯದೇಶದಲ್ಲಿ ಶೂರಸೇನನೆಂಬ ರಾಜನಾಗಿದ್ದನು. ಒಂದುದಿನ ಆ ರಾಜನು ಮೃಗಯಾವಿಹಾರ ವಶದಿಂದ ಅಲೆದಾಡುತ್ತಾ ವಾಲ್ಮೀಕಿ ಮಹರ್ಷಿಗಳ ಆವಾಸವಾದ ಉತ್ಪಲಾರಣ್ಯಕ್ಕೆ ಬಂದನು.

೧೨. ಚೈತ್ರ ಶುದ್ಧ ನವಮಿ ಎಂದರೆ ಶ್ರೀರಾಮನವಮಿಯ ದಿವಸ ಬೇಟೆಯನ್ನು ನಿಲ್ಲಿಸಿ ಪ್ರಾಣಹಿಂಸೆಯೇನನ್ನೂ ಮಾಡದೆ, ಶಾಸ್ತ್ರೋಕ್ತರೀತಿ, ದೇವರ ಉತ್ಸವವನ್ನು ನಡೆಯಿಸಿದನು.

೧೩. ಮತ್ತು ರಾಮನ ವಿಚಾರವಾದ ಕಥೆಗಳನ್ನು ಕೇಳುತ್ತಾ ವಾಲ್ಮೀಕಿಗಳ ಪರ್ಣಶಾಲೆಯಲ್ಲಿಯೇ ರಾತ್ರಿಯೆಲ್ಲಾ ಜಾಗರಣೆಮಾಡಿದನು.

೧೪. ಆ ರಾಮಕಥಾಶ್ರವಣ ಪ್ರಭಾವದಿಂದ ವಿದ್ಯಾಧರತ್ವವನ್ನು ಹೊಂದಿ ಜೀಮೂತವಾಹನನಾಗಿ ಇಂದ್ರನಂತೆ ಸ್ವರ್ಗಸೌಖ್ಯವನ್ನು ಅನುಭವಿಸುತ್ತಿದ್ದನು.

ಕಲ್ಪವೃಕ್ಷಸ್ಯ ವೈ ಪೂಜಾ ಕೃತಾ ತೇನ ಮಹಾತ್ಮನಾ ।
ವರ್ಷಾಂತರೇ ದ್ರುಮಃ ಪ್ರಾಹ ವರಂ ವರಯ ಸತ್ತಮ ॥ ೧೫ ॥

ಸ ತಮಾಹ ಮಹಾವೃಕ್ಷ ಮದೀಯಂ ನಗರಂ ಶುಭಂ ।
ಧನಧಾನ್ಯಸಮಾಯುಕ್ತಂ ಯಥೈವ ಸ್ಯಾತ್ತಥಾ ಕುರು ॥ ೧೬ ॥

ಇತ್ಯುಕ್ತೇ ಸತಿ ವೃಕ್ಷೇಣ ನಗರಂ ಭೂಪತೇಃ ಸಮಂ ।
ಕೃತಂ ತದಾ ನ ಕೋಽಪ್ಯಾಸೀದ್ಯೋ ಮನ್ಯೇತಾಪ್ರ್ಥಿತಾಶ್ರಯಂ ॥ ೧೭ ॥

ಸರ್ವತೋ ರಾಜತುಲ್ಯಾಶ್ಚ ಕಲ್ಪವೃಕ್ಷಪ್ರಭಾವತಃ ।
ತದಾ ತೌ ತು ಪಿತಾಪುತ್ರೌ ತಪಸೋಽರ್ಥೇ ವನಂ ಗತೌ ॥ ೧೮ ॥

ಮಲಯಾದ್ರೌ ಮಹಾರಮ್ಯೇ ತೇಪತುರ್ಬಹುಲಂ ತಪಃ ।
ಏಕಸ್ಮಿನ್ ದಿವಸೇ ರಾಜನ್ ಮಲಯಧ್ವಜಭೂಪತೇಃ ॥ ೧೯ ॥

---

೧೫. ಇವನೂ ಸಹ ತನ್ನ ತಂದೆಯಂತೆ ಒಂದು ವರ್ಷಪರ್ಯಂತ ಕಲ್ಪವೃಕ್ಷದ ಪೂಜೆ ಮಾಡಿದನು. ವರ್ಷದ ಕೊನೆಯಲ್ಲಿ ಕಲ್ಪವೃಕ್ಷವು ಪ್ರಸನ್ನವಾಗಿ ಅವನನ್ನು ಕುರಿತು "ಅಯ್ಯಾ ಮಹಾಪುರುಷ ! ಬೇಕಾದ ವರವನ್ನು ಕೇಳು ; ಕೊಡುವೆನು" ಎಂದು ಹೇಳಿತು.

೧೬. ಆಗ ಅವನು ಕಲ್ಪವೃಕ್ಷವನ್ನು ಕುರಿತು "ನನ್ನ ಪಟ್ಟಣವು ಸರ್ವದಾ ಧನಧಾನ್ಯಸಮೃದ್ಧಿಯಿಂದ ಕೂಡಿರುವಂತೆ ಮಾಡು" ಎಂದು ಪ್ರಾರ್ಥಿಸಿದನು.

೧೭. ಹೀಗೆ ಕೇಳಿದೊಡನೆ ಕಲ್ಪವೃಕ್ಷವು ಅವನ ಅಪೇಕ್ಷೆಯಂತೆ ಆತನ ಪಟ್ಟಣವನ್ನು ಧನಧಾನ್ಯ ಸಮೃದ್ಧಿಯುಳ್ಳದನ್ನಾಗಿ ಮಾಡಿತು. ಆಗ ಆ ನಗರದಲ್ಲಿ ರಾಜನ ಆಶ್ರಯವನ್ನು ಬೇಡುವವರೇ ಇಲ್ಲದಂತಾಯಿತು.

೧೮. ಕಲ್ಪವೃಕ್ಷದ ವರಪ್ರಸಾದದಿಂದ ಎಲ್ಲ ಪ್ರಜೆಗಳೂ ರಾಜನ ಸಮಾನರಾಗಿ ಅನುಕೂಲಶಾಲಿಗಳಾದರು. ಆಗ ತಂದೆ ಮಕ್ಕಳಿಬ್ಬರೂ ಇದನ್ನು ನೋಡಿ ತಮಗೆ ಕೆಲಸ ಕಡಮೆಯಾದ್ದರಿಂದ ತಪಸ್ಸಿಗೋಸ್ಕರ ಕಾಡಿಗೆ ಹೋದರು.

೧೯. ಅವರು ರಮ್ಯವಾದ ಮಲಯಪರ್ವತವನ್ನು ಸೇರಿ, ಅಲ್ಲಿ ಬಹಳವಾಗಿ ತಪಸ್ಸುಮಾಡಿದರು. ಅಯ್ಯಾ ರಾಜನೇ! ಕೇಳು ; ಒಂದುದಿನ ಮಲಯಕೇತು ಮಹಾರಾಜನ ಮಗಳಾದ ಕಮಕ್ಷಿಲಾಯೆಂಬ ಕನ್ಯೆಯು ಸಮೀಪದ ಪುಣ್ಯಕ್ಷೇತ್ರದಲ್ಲಿದ್ದ ಶಿವದೇವಾಲಯಕ್ಕೆ ಹೋದಳು.

ಕಮಲಾಕ್ಷೀತಿ ವಿಖ್ಯಾತಾ ಕನ್ಯಾ ಚ ಶಿವಮಂದಿರೇ ।
ಸ್ವಸಖ್ಯಾ ಸಹಿತಾ ಪ್ರಾಪ್ತಾ ಶಿವಪೂಜನತತ್ಪರಾ ॥ ೨೦ ॥

ಜೀಮೂತವಾಹನಶ್ಚೈವ ಪೂಜಾರ್ಥೇ ಮಂದಿರಂ ಯಯೌ ।
ಬಾಲಾಂ ದದರ್ಶ ದಿವ್ಯಾಂಗೀಂ ಸರ್ವಭೂಷಾಸಮನ್ವಿತಾಂ ॥ ೨೧ ॥

ತಸ್ಯಾ ದರ್ಶನಮಾತ್ರೇಣ ಕಾಮಬಾಣೇನ ಪೀಡಿತಃ ।
ಮನಸಾ ಕಾಮದೇವಂ ತಂ ತುಷ್ಟಾವ ಶ್ಲಕ್ಷ್ಣಯಾ ಗಿರಾ ॥ ೨೨ ॥

॥ ಜೀಮೂತವಾಹನ ಉವಾಚ ॥

ಮದನಾಯ ನಮಸ್ತುಭ್ಯಂ ಕೃಷ್ಣಪುತ್ರಾಯ ತೇ ನಮಃ ।
ಶಂಬರಪ್ರಾಣಹರ್ತ್ರೇ ಚ ಚತುರ್ವ್ಯೂಹಾಯ ತೇ ನಮಃ ॥ ೨೩ ॥

ಪಂಚಬಾಣಾಯ ಕಾಮಾಯ ಪ್ರದ್ಯುಮ್ನಾಯ ನಮೋನಮಃ ।
ಮದ್ಯೋಗ್ಯಾಂ ಕುರು ಸುಶ್ರೋಣೀಂ ಕಾಮಿನೀಂ ಕಮಲಾನನಾಂ ॥ ೨೪ ॥

---

೨೦-೨೧. ಅಲ್ಲಿ ತನ್ನ ಸಖಿಯರೊಡನೆ ಕೂಡಿ ಪರಶಿವನನ್ನು ಆರಾಧಿಸುವುದರಲ್ಲಿ ಆಸಕ್ತೆಯಾಗಿದ್ದಳು. ಜೀಮೂತವಾಹನನೂ ಸಹ ದೇವರ ದರ್ಶನಕ್ಕಾಗಿ ಅದೇ ಶಿವಾಲಯಕ್ಕೆ ಹೋದನು. ಅಲ್ಲಿ ನಾನಾ ಆಭರಣಗಳನ್ನು ಧರಿಸಿ ಸರ್ವಾಂಗ ಸೌಂದರ್ಯದಿಂದ ಶೋಭಿಸುತ್ತಿರುವ ಕಮಲಾಕ್ಷಿಯನ್ನು ಕಂಡನು.

೨೨. ಅವಳನ್ನು ನೋಡಿದ ಮಾತ್ರದಿಂದಲೇ ಕಾಮವಶನಾಗಿ ಮೃದೋಕ್ತಿಗಳಿಂದ ಮನಸ್ಸಿನಲ್ಲಿಯೇ ಮನ್ಮಥನನ್ನು ಸ್ತುತಿಸತೊಡಗಿದನು.

೨೩-೨೪. "ಎಲೈ ಕೃಷ್ಣನ ಪುತ್ರನಾದ ಮನ್ಮಥನೇ ! ಶಂಬರಾಸುರ ಧ್ವಂಸಿಯೇ ! ನಿನಗೆ ನಮಸ್ಕಾರ. ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧ, ಎಂಬ ನಾಲ್ಕು ವ್ಯೂಹಮೂರ್ತಿಯಾದ ನಿನಗೆ ನಮಸ್ಕಾರ. ಹಿಂದೆ ಪಂಚಬಾಣನೂ ಕಾಮನೂ ಎನಿಸಿದ್ದು ಈಗ ಪ್ರದ್ಯುಮ್ನನೆಂದು ಹೇಳಿಸಿಕೊಳ್ಳುವ ನಿನಗೆ ನಮಸ್ಕಾರ, ಎಲೈ ಮದನನೇ ! ಸುಂದರಾಂಗಿಯೂ ಕಮಲಮುಖಿಯೂ ಆದ ಈ ಬಾಲಿಕೆಯು ನನಗೆ ಲಭಿಸುವಂತೆ ಮಾಡು" ಎಂದು ಪ್ರಾರ್ಥಿಸಿದನು.

ತದಾ ಪ್ರಸನ್ನೋ ಭಗವಾನ್ ಮಕರಧ್ವಜದೇವತಾ ।
ಮೋಹಯಿತ್ವಾ ಚ ಪಿತರಂ ತದ್ವಿವಾಹಮಕಾರಯತ್ ॥ ೨೫ ॥

ವಿಶ್ವಾವಸುರಿತಿ ಖ್ಯಾತಸ್ತಸ್ಯ ಭೂಪಸ್ಯ ವೈ ಸುತಃ ।
ಭಗಿನೀಪತಿನಾ ಸಾರ್ಧಂ ಸ ಯಯೌ ಗಂಧಮಾದನಂ ॥ ೨೬ ॥

ನರಂ ನಾರಾಯಣಂ ನತ್ವಾ ಗರುಡೋತ್ತುಂಗಮಾಯಯೌ ।
ತದಾ ನಾಗಸ್ಯ ವೈ ಮಾತಾ ಶಂಖಚೂಡಸ್ಯ ಭೋ ನೃಪ ॥ ೨೭ ॥

ರುರೋದ ಬಹುಧಾ ತತ್ರ ಯತ್ರ ಜೀಮೂತವಾಹನಃ ।
ದುಃಖಿತಃ ಸ ಜಗಾಮಾಶು ದಯಾಲುರ್ದೀನವತ್ಸಲಃ ॥ ೨೮ ॥

---

೨೫. ಹೀಗೆ ಜೀಮೂತವಾಹನನು ಮಾಡಿದ ಸ್ತುತಿಯಿಂದ ಪ್ರಸನ್ನನಾದ ಮಕರಧ್ವಜನು ಆ ಹುಡುಗಿಯ ತಂದೆಗೆ ಈ ವರನಲ್ಲಿ ಆದರವುಂಟಾಗುವಂತೆ ಮಾಡಿ ಆಕೆಯನ್ನು ಈ ಜೀಮೂತವಾಹನನಿಗೆ ವಿವಾಹ ಮಾಡಿಸಿದನು.

೨೬. ಅನಂತರ ಆ ಮಲಯಕೇತುವಿನ ಮಗನಾದ ವಿಶ್ವಾವಸುವೆಂಬವನು ಹೊಸದಾಗಿ ವಿವಾಹಿತನಾದ ತನ್ನ ಭಾವನೊಡನೆ ವಿಹಾರಾರ್ಥವಾಗಿ ಗಂಧಮಾದನ ಪರ್ವತಕ್ಕೆ ಹೋದನು.

೨೭. ಅಲ್ಲಿ ನರರೂಪಿಯಾದ ನಾರಾಯಣನಿಗೆ ನಮಸ್ಕರಿಸಿ, ಗರುಡನ ಆಹಾರಕ್ಕೆ ನಿಯಮಿತರಾದ ನಾಗರು ಬಂದು ಕುಳಿತುಕೊಳ್ಳುವ ವಧ್ಯಶಿಲೆಯ ಬಳಿಗೆ ಬಂದನು. ಆಗ ಶಂಖಚೂಡನೆಂಬ ನಾಗನ ಮಾತೆಯು ಬಹುವಾಗಿ ರೋದಿಸುತ್ತಾ ಆ ಸ್ಥಳಕ್ಕೆ ಬಂದಳು.

೨೮. ದಯಾಳುವೂ, ದೀನವತ್ಸಲನೂ ಆದ ಆ ಜೀಮೂತವಾಹನನು, ಆಕೆ ರೋದಿಸುವುದನ್ನು ನೋಡಿ ದುಃಖಗೊಂಡು ಜಾಗ್ರತೆ ಅಲ್ಲಿಗೆ ಬಂದನು. ಅನಂತರ ಆ ಮುದುಕಿಯನ್ನು ಸಂತೈಸಿ “ ಏಕಮ್ಮಾ ದುಃಖಿಸುತ್ತೀಯೆ ? ”

**ವೃದ್ಧಾಮಾಶ್ವಾಸ್ಯ ಪಪ್ರಚ್ಛ ಕೇನೇದಂ ದುಃಖಮಾಗತಂ ।**
**ಸಾಹ ಮೇ ತನಯೋ ದೇವ ಗರುಡಾಸ್ಯೇ ಗಮಿಷ್ಯತಿ ॥ ೨೯ ॥**

**ತದ್ವಿಯೋಗೇನ ದುಃಖಾರ್ತಾ ವಿಲಪಾಮಿ ಮಹಾಕುಲಾ ।**
**ಇತಿ ಜ್ಞಾತ್ವಾ ಸ ನೃಪತಿರ್ಗರುಡೋತ್ಸಂಗಮಾಯಯೌ ॥ ೩೦ ॥**

**ಗರುಡೋಽಪಿ ಗೃಹೀತ್ವಾ ತಂ ನಭೋಮಾರ್ಗಮುಪಾಗಮತ್ ।**
**ತಸ್ಯಾಂಗದೋಽಸೃಜಾ ಲಿಪ್ತೋ ನ್ಯಧಾಕ್ತತ್ರ ಭಾಮಿನೀ ॥ ೩೧ ॥**

**ಕಮಲಾಕ್ಷೀ ತು ವಿಯತಿ ಸ್ಥಿತಂ ಗರುಡಭಕ್ಷಿತಂ ।**
**ವಿಲೋಕ್ಯ ಚಾರುದದ್ಗಾಢಂ ಪತಿದುಃಖೇನ ದುಃಖಿತಾ ॥ ೩೨ ॥**

**ತದಾ ತು ಗರುಡಸ್ತ್ರಸ್ತಸ್ತತ್ರಾಗತ್ಯ ತ್ವರಾನ್ವಿತಃ ।**
**ಜೀಮೂತವಾಹನಂ ಪ್ರಾಹ ಕಸ್ಮಾತ್ತ್ವಂ ಮಮ ಭಕ್ಷಿತಃ ॥ ೩೩ ॥**

---

೨೯. ಯಾರಿಂದ ದುಃಖಸಂಭವಿಸಿತು ?" ಎಂದು ಕೇಳಲು ಅವಳು "ಸ್ವಾಮೀ ! ನನಗಿರುವ ಒಬ್ಬನೇ ಮಗನು ಗರುಡನ ಆಹಾರಕ್ಕಾಗಿ ಹೋಗುವನು. ಅವನ ವಿಯೋಗದುಃಖಪೀಡಿತೆಯಾದ ನಾನು ವ್ಯಾಕುಲೆಯಾಗಿ ಅಳುತ್ತಿದ್ದೇನೆ" ಎಂದು ಹೇಳಿದಳು.

೩೦. ಇದನ್ನು ತಿಳಿದು ಜೀಮೂತವಾಹನನು ಗರುಡನು ಆಹಾರ ಸ್ವೀಕರಿಸಲು ಕುಳಿತುಕೊಳ್ಳುವ ವಧ್ಯಶಿಲೆಯ ಬಳಿಗೆ ಬಂದು ಅದರ ಮೇಲೆ ತಾನೇ ಹತ್ತಿ ಕುಳಿತನು.

೩೧-೩೨. ಗರುಡನೂ ಕೂಡ ನಿಜಾಂಶ ತಿಳಿಯದೆ ಕುಳಿತಿರುವವನು ನಾಗನೆಂದೇ ಭಾವಿಸಿ ಅವನನ್ನು ಹಿಡಿದು ಕಚ್ಚಿ ತಿನ್ನುತ್ತಾ ಆಕಾಶದಲ್ಲಿ ಹಾರಿಹೋದನು. ಹೀಗೆ ತಿನ್ನುವಾಗ ಅವನು ಧರಿಸಿದ್ದ ಅಂಗದವು ರಕ್ತಮಯವಾಗಿ ಕೆಳಗೆ ಬಿದ್ದಿತು. ಜೀಮೂತಕೇತುವಿನ ಆಶ್ರಮದಲ್ಲಿಯೇ ಬಿದ್ದ ಇದನ್ನು ಕಮಲಾಕ್ಷಿಯು ನೋಡಿ, ತನ್ನ ಗಂಡನದೆಂದು ಗುರ್ತಿಸಿ, ಗಂಡನನ್ನು ಗರುಡನು ತಿನ್ನುತ್ತಿರಬೇಕೆಂದು ಭಾವಿಸಿ, ಪತಿವಿಯೋಗದುಃಖದಿಂದ ಗಟ್ಟಿಯಾಗಿ ಅತ್ತಳು.

೩೩. ಆ ರೋದನವನ್ನು ಕೇಳಿ, ಗರುಡನು ಜಾಗ್ರತೆಯಾಗಿ ಅಲ್ಲಿಗೆ ಬಂದು ಜೀಮೂತವಾಹನನನ್ನು ಕುರಿತು "ನನಗೆ ಆಹಾರಾರ್ಥವಾಗಿ ನೀನು ಬರಲು ಕಾರಣವೇನು ?" ಎಂದು ಕೇಳಿದನು.

ಸ ಹೋವಾಚ ಪ್ರಭೋ ಮೇದ್ಯ ವಚಃ ಶೃಣು ಮಹಾಮತೇ ।
ಶಂಖಚೂಡಸ್ಯ ಜನನೀ ಮಹದ್ದುಃಖೇನ ದುಃಖಿತಾ ॥ ೩೪ ॥

ತಸ್ಯಾಃ ಪುತ್ರಸ್ಯ ರಕ್ಷಾರ್ಥಂ ಸಂಪ್ರಾಪ್ತೋಽಹಂ ತವಾಂತಿಕಂ ।
ಇತ್ಯುಕ್ತೇ ಸತಿ ಭೂಪಾಲ ಶಂಖಚೂಡಶ್ಚ ಪನ್ನಗಃ ॥ ೩೫ ॥

ತದ್ವ್ಯಾಕುಲಸ್ಯೈವ ದುಃಖೇನ ದುಃಖಿತಃ ಶತ್ರುಮಾಪ್ತವಾನ್ ।
ಮಾಂ ಪ್ರಭಕ್ಷ ಕೃಪಾಸಿಂಧೋ ತ್ವದಾಹಾರಾರ್ಥಮಾಗತಂ ॥ ೩೬ ॥

ಸಂತ್ಯಜ್ಯ ಮಾನುಷಂ ದಿವ್ಯಂ ಕುರ್ವಾಹಾರಂ ಮಹಾಮತೇ ।
ತದಾ ಪ್ರಸನ್ನೋ ಗರುಡೋ ದದೌ ತಸ್ಮೈ ವರತ್ರಯಂ ॥ ೩೭ ॥

ಜೀಮೂತವಾಹನಾಯೈವ ವಿದ್ಯಾಧರಸುತಾಯ ಚ ।
ಶಂಖಚೂಡಕುಲಂ ನಾಹಂ ಭಕ್ಷ್ಯಾಮಿ ಚ ಕದಾಚನ ॥ ೩೮ ॥

---

೩೪. ಆಗ ಜೀಮೂತವಾಹನನು "ಅಯ್ಯಾ ಪ್ರಾಜ್ಞನೇ! ಕೇಳು; ಶಂಖಚೂಡ (ನಾಗ) ನ ತಾಯಿ, ತನ್ನ ಮಗನಿಗೆ ಮೃತ್ಯುವೊದಗಿತೆಂದು ಸಂಕಟಪಡುತ್ತಿದ್ದಳು."

೩೫. "ಅವಳ ಮಗನನ್ನು ರಕ್ಷಿಸಿ ಆಕೆಯ ದುಃಖವನ್ನು ನಿವಾರಿಸುವುದಕ್ಕಾಗಿ ನಾನು ನಿನ್ನ ಸಮೀಪಕ್ಕೆ ಆಹಾರವಾಗಿ ಬಂದೆನು" ಎಂದು ವಿದ್ಯಾಧರರಾಜನು ಹೇಳುತ್ತಿದ್ದನು.

೩೬. ಅಷ್ಟರಲ್ಲಿ ಶಂಖಚೂಡನಾಗನು ತನ್ನ ಶತ್ರುವಾದ ಗರುಡನ ಸಮೀಪಕ್ಕೆ ದುಃಖಿಸುತ್ತಾ ಬಂದು, "ಅಯ್ಯಾ ದಯಾನಿಧಿಯೇ! ಸರದಿಯಂತೆ ನಿನಗೆ ಆಹಾರವಾಗಿ ಬಂದಿರುವ ನನ್ನನ್ನು ಭಕ್ಷಿಸು."

೩೭-೩೮. "ದಿವ್ಯಮಾನುಷರೂಪಿಯಾದ ಜೀಮೂತವಾಹನನನ್ನು ಬಿಟ್ಟುಬಿಡು" ಎಂದು ಕೇಳಿಕೊಳ್ಳಲು, ಆಗ ಗರುಡನು ಪ್ರಸನ್ನನಾಗಿ ಶಂಖಚೂಡ, ಜೀಮೂತವಾಹನ ಕಮಲಾಕ್ಷಿ ಈ ಮೂವರಿಗೂ ವರಪ್ರದಾನ ಮಾಡುವನಾಗಿ "ಇನ್ನು ಮೇಲೆ ನಾನು ಶಂಖಚೂಡನ ಜಾತಿಯವರನ್ನು ಎಂದಿಗೂ ಭಕ್ಷಿಸುವುದಿಲ್ಲ" ಎಂಬದಾಗಿ ಶಂಖಚೂಡನಿಗೆ ತಿಳಿಸಿದನು.

ತ್ವಂ ತು ವಿದ್ಯಾಧರಪುರೇ ಪ್ರಾಪ್ಯ ರಾಜ್ಯಂ ಮಹೋತ್ತಮಂ ।
ಸುಭೋಜಯಿತ್ವಾ ಲಕ್ಷಾಬ್ದಂ ತತೋ ವೈಕುಂಠಮೇಷ್ಯಸಿ ॥ ೩೯ ॥

ಇತ್ಯುಕ್ತ್ವಾಂತರ್ದಧೌ ದೇವಃ ಸಪಿತ್ರಾ ರಾಜ್ಯಮಾಪ್ತವಾನ್ ।
ಸ್ವಪತ್ನ್ಯಾ ಸಹ ರಾಜ್ಯಾಂಗಂ ಭುಕ್ತ್ವಾ ವೈಕುಂಠಮಾಯಯೌ ॥ ೪೦ ॥

ಇತ್ಯುಕ್ತ್ವಾ ಸ ತು ವೈತಾಲೋ ನೃಪತಿಂ ಪ್ರಾಹ ಸಮ್ಯಧೀಃ ।
ತೇಷಾಂ ಮಧ್ಯೇ ಮಹಾರಾಜ ಕಸ್ಯ ಪ್ರಾಪ್ತಂ ಮಹಾಫಲಂ ॥ ೪೧ ॥

॥ ರಾಜೋವಾಚ ॥

ಶಂಖಚೂಡಸ್ಯ ಸಂಪ್ರಾಪ್ತಂ ಜೀವದಾನಮಹಾಫಲಂ ।
ನೃಪಸ್ಯೈವೋಪಕಾರಂ ಚ ಸ್ವಭಾವೋ ವಿಧಿನಾ ಕೃತಃ ॥ ೪೨ ॥

---

೩೯. "ಅಯ್ಯಾ ಜೀಮೂತವಾಹನ! ನೀನು ಪತ್ನೀಸಮೇತನಾಗಿ ವಿದ್ಯಾಧರ ರಾಜಧಾನಿಗೆ ಹೋಗಿ, ಒಂದುಲಕ್ಷ ವರ್ಷದವರೆಗೂ ರಾಜ್ಯವನ್ನು ಚೆನ್ನಾಗಿ ಪಾಲಿಸಿ ಅನಂತರ ವೈಕುಂಠವನ್ನು ಪಡೆ" ಎಂಬದಾಗಿ ಹೇಳಿ, ಕೂಡಲೆ ಗರುಡನು ಅದೃಶ್ಯನಾದನು.

೪೦. ಅನಂತರ ಜೀಮೂತವಾಹನನು ತನ್ನ ತಂದೆಯೊಡನೆ ರಾಜಧಾನಿಗೆ ಬಂದು ಪತ್ನೀಸಮೇತನಾಗಿ ರಾಜಭೋಗಗಳನ್ನನುಭವಿಸಿ ಕಾಲಾನಂತರ ವೈಕುಂಠವನ್ನು ಸೇರಿದನು.

೪೧. ಈರೀತಿ ಬೇತಾಳವು ರಾಜನಿಗೆ ಕಥೆಯನ್ನು ಹೇಳಿ ವಿನೀತನಾಗಿ "ಎಲೈ ರಾಜನೇ ! ಇವರುಗಳೊಳಗೆ ಯಾರಿಗೆ ಉತ್ಕೃಷ್ಟವಾದ ಫಲದೊರಕಿತು ?" ಎಂದು ಪ್ರಶ್ನಿಸಿದನು.

೪೨. ಅದಕ್ಕೆ "ರಾಜನು ತನ್ನ ಜೀವದಾನ ಮಾಡಿದ್ದರಿಂದ ಶಂಖಚೂಡನಿಗೆ ಮಹಾಫಲವು ಪ್ರಾಪ್ತಿಯಾಯಿತು. ಪರೋಪಕಾರ ಮಾಡುವುದು ರಾಜರಿಗೆ ಸ್ವಭಾವ. ಅವನಿಂದ ಈ ಉಪಕಾರವು ದೈವವಶಾತ್ ಆಯಿತು.

ಪತಿವ್ರತಾಪ್ರಭಾವೇನ ಜೀವದಾನೇನ ಭೂಪತೇಃ ।
ಸಂತುಷ್ಟೋ ಗರುಡೋ ಜಾತಸ್ತಸ್ಯ ಕಿಂ ತರ್ಹಿ ತತ್ಫಲಂ ॥ ೪೩ ॥

ನಿರ್ಭಯಃ ಶಂಖಚೂಡಸ್ತು ಸ್ವಶತ್ರುಂ ಪ್ರತಿ ಚಾಗಮತ್ ।
ಶರೀರಮರ್ಪಯಿತ್ವಾ ತಂ ತತಃ ಪ್ರಾಪ್ತಂ ಮಹಾಫಲಂ ॥ ೪೪ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಕಲಿಯುಗೀಯೇತಿಹಾಸ ಸಮುಚ್ಚಯೇ
ಖಂಡೇ ಪಂಚದಶೋಽಧ್ಯಾಯಃ.



---

೪೩. "ಕಮಲಾಕ್ಷಿಯ ಪಾತಿವ್ರತ್ಯಪ್ರಭಾವದಿಂದಲೂ ರಾಜನ ಜೀವದಾನದಿಂದಲೂ ಗರುಡನು ಸಂತುಷ್ಟನಾದನು. ಆದ್ದರಿಂದ ಈ ಮಹಾಫಲವು ಗರುಡನಿಗೆ ಹೇಗೆ ಸಂಬಂಧಿಸೀತು. ಗರುಡನಿಗೆ ಸಂಬಂಧಿಸಿದ್ದಲ್ಲ."

೪೪. "ಶಂಖಚೂಡನು ಹೆದರಿಕೊಳ್ಳದೆ ಶತ್ರುಸಮೀಪಕ್ಕೆ ಬಂದು ತನ್ನ ದೇಹವನ್ನು ಅರ್ಪಿಸಲು ಸಿದ್ಧನಾದನು. ಆದ್ದರಿಂದ ಆ ಮಹಾಫಲವು ಅವನಿಗೇ ಪ್ರಾಪ್ತವಾಯಿತು" ಎಂದು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ ಖಂಡದಲ್ಲಿ
ಕಲಿಯುಗದ ಇತಿಹಾಸ ಸಮುದಾಯವೆಂಬ ಹದಿನೈದನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ಷೋಡಶೋಽಧ್ಯಾಯಃ

---

॥ ಸೂತಉವಾಚ ॥

ಪುನಃ ಪ್ರಾಹ ಸ ವೈತಾಲೋ ಭೂಪತಿಂ ಜ್ಞಾನಕೋವಿದಂ ।
ಚಂದ್ರಶೇಖರಭೂಪಸ್ಯ ನಗರೀ ದಕ್ಷಿಣೇ ಸ್ಥಿತಾ ॥ ೧ ॥

ರತ್ನದತ್ತೋಽವಸದ್ವೈಶ್ಯೋ ಧರ್ಮಜ್ಞೋ ಧನಧಾನ್ಯವಾನ್ ।
ಕಾಮಾವರೂಥಿನೀ ತಸ್ಯ ಸುತಾ ಜಾತಾ ಮಹೋತ್ತಮಾ ॥ ೨ ॥

ತದ್ರೂಪಮುತ್ತಮಂ ದೃಷ್ಟ್ವಾ ಸ ವೈಶ್ಯೋ ಭೂಪತಿಂ ಪ್ರತಿ ।
ಉವಾಚ ಭೋ ಮಹಾರಾಜ ಸುತಾ ಮಮ ಸುರೇಪ್ಸಿತಾ ॥ ೩ ॥

---

## ಹದಿನಾರನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಅನಂತರ ಬೇತಾಳವು ಮಹಾ ಮೇಧಾವಿಯಾದ ರಾಜನನ್ನು ಕುರಿತು ಮತ್ತೊಂದು ಕಥೆಯನ್ನು ಹೇಳತೊಡಗಿತು. ದಕ್ಷಿಣದೇಶದಲ್ಲಿ ಚಂದ್ರಶೇಖರನೆಂಬ ರಾಜನು ರಾಜ್ಯವಾಳುತ್ತಿದ್ದನು.

೨. ಅವನ ರಾಜಧಾನಿಯಲ್ಲಿ ಧರ್ಮಿಷ್ಠನೂ ಧನಧಾನ್ಯ ಸಮೃದ್ಧಿಯುಳ್ಳವನೂ ಆದ ರತ್ನದತ್ತನೆಂಬ ವೈಶ್ಯನಿದ್ದನು. ಅವನಿಗೆ ಸರ್ವಶ್ರೇಷ್ಠಳೆನಿಸಿದ ಕಾಮಾವರೂಥಿನಿಯೆಂಬ ಮಗಳಿದ್ದಳು.

೩–೪. ತನ್ನ ಪುತ್ರಿಯು ಅತಿಶಯ ರೂಪವತಿಯಾಗಿದ್ದುದರಿಂದ ಆ ವೈಶ್ಯನು ರಾಜಸನ್ನಿಧಿಗೆ ಹೋಗಿ " ಪ್ರಭುವೇ ! ಸ್ಫುರದ್ರೂಪಿಣಿಯಾದ ನನ್ನ ಮಗಳು ದೇವತೆ

ತಾಂ ಗೃಹಾಣ ಕೃಪಾಸಿಂಧೋ ತ್ವದ್ಯೋಗ್ಯಾ ವಿಧಿನಿರ್ಮಿತಾ ।
ಇತಿ ಶ್ರುತ್ವಾ ತು ವಚನಂ ಭೂಪತಿಶ್ಚಂದ್ರಶೇಖರಃ ॥ ೪ ॥

ಮಂತ್ರಿಣಂ ವಿದುರಂ ಪ್ರಾಹ ತ್ವಂ ಚ ಗಚ್ಛ ಮಹಾಮತೇ ।
ಯಥಾಯೋಗ್ಯಂ ಹಿ ತದ್ರೂಪಂ ಮಾಂ ನಿವೇದಯ ಸತ್ವರಂ ॥ ೫ ॥

ಇತ್ಯುಕ್ತ್ವಾ ಸ ಯಯೌ ಗೇಹಂ ಭೂಪತಿಶ್ಚಂದ್ರಶೇಖರಃ ।
ಶ್ಯಾಮಲಾ ನಾಮ ತತ್ಪತ್ನೀ ಜ್ಞಾತ್ವಾ ರಾಜಾನಮಾಗತಂ ॥ ೬ ॥

ಧೂಪದೀಪಾದಿಭಿಃ ಪುಷ್ಪೈರ್ಯಥಾಯೋಗ್ಯೈಃ ಸಮಾರ್ಚಯತ್ ।
ಏತಸ್ಮಿನ್ನೇವ ಕಾಲೇ ತು ಗೌಶ್ಚ ಶಾರ್ದೂಲಪೀಡಿತಾ ॥ ೭ ॥

ಹಂಭಾಶಬ್ದೇನ ಮಹತಾ ವಿಲಲಾಪ ಭಯಾತುರಾ ।
ತಚ್ಛ್ರುತ್ವಾ ಸ ತು ಭೂಪಾಲಃ ಖಡ್ಗಹಸ್ತಃ ಸಮುಭ್ಯಗಾತ್ ॥ ೮ ॥

---

ಗಳೂ ಆಶಿಪಡುವಷ್ಟು ಸುಂದರಿಯಾಗಿದ್ದಾಳೆ. ಬ್ರಹ್ಮನಿರ್ಮಾಣೋದ್ದೇಶದಲ್ಲಿ ಆಕೆಯು ನಿನಗೇ ಸೇರಲು ಅರ್ಹಳು. ಆದುದರಿಂದ ಅವಳನ್ನು ನೀನು ಸ್ವೀಕರಿಸು" ಎಂದು ಹೇಳಿದನು.

೫. ಆಗ ಚಂದ್ರಶೇಖರರಾಜನು ಮಂತ್ರಿಯಾದ ವಿದುರನನ್ನು ಕುರಿತು "ಅಯ್ಯಾ ಪ್ರಾಜ್ಞನಾದ ಅಮಾತ್ಯನೇ ! ನೀನು ಜಾಗ್ರತೆಯಾಗಿ ಈ ವೈಶ್ಯನ ಮನೆಗೆ ಹೋಗಿ, ಆತನ ಪುತ್ರಿಯು ಹೇಗಿದ್ದಾಳೆ ಎಂಬ ವಿಚಾರ ತಿಳಿದು, ವಾಸ್ತವಸ್ಥಿತಿಯನ್ನು ಬಂದು ಹೇಳು" ಎಂಬದಾಗಿ ನೇಮಿಸಿದನು.

೬. ಚಂದ್ರಶೇಖರಭೂಪತಿಯು ಈರೀತಿ ಹೇಳಿ ಸಭೆಯಿಂದ ಎದ್ದು ಒಳಕ್ಕೆ ಹೋದನು. ರಾಜಪತ್ನಿಯಾದ ಶ್ಯಾಮಲೆಯೆಂಬಾಕೆಯು ರಾಜನು ತನ್ನ ಬಳಿಗೆ ಬರುತ್ತಿರುವುದನ್ನು ಕಂಡಳು.

೭. ಆಕೆಯು ರಾಜನನ್ನು ಮರ್ಯಾದೆಯಿಂದ ಸ್ವಾಗತಿಸಿ, ಅರ್ಘ್ಯಪಾದ್ಯಾದಿಗಳನ್ನು ಸಮರ್ಪಿಸಿ, ಯೋಗ್ಯರೀತಿಯಿಂದ ಪೂಜಿಸಿದಳು. ಇದೇ ಸಮಯಕ್ಕೆ ಸರಿಯಾಗಿ ಒಂದು ಹುಲಿಯು ದನದ ಕೊಟ್ಟಿಗೆಗೆ ನುಗ್ಗಿ ಹಸುವಿನ ಮೇಲೆ ಬಿದ್ದಿತು.

೮. ಆಗ ಆ ಹಸು, ದಿಗಿಲುಬಿದ್ದು ಗಾಬರಿಯಿಂದ ಅಂಬಾ ಎಂದು ಅರಚಿಕೊಂಡಿತು. ರಾಜನು ಅದರ ಆರ್ತಧ್ವನಿಯನ್ನು ಕೇಳಿ, ಕೂಡಲೆ ಕೈಯಲ್ಲಿ ಕತ್ತಿಯನ್ನು ಹಿಡಿದು, ಅಲ್ಲಿಗೆ ಹೋಗಿ ಆ ಹುಲಿಯನ್ನು ಇರಿದು ಕೊಂದುಹಾಕಿದನು.

**ಶೀಘ್ರಂ ಹತ್ವಾ ತು ಶಾರ್ದೂಲಂ ಮುಮೋದ ನೃಪತಿಸ್ತದಾ ।**
**ಮುಕುಲೋ ದಾನವೋ ನಾಮ ತದ್ದೇಹಾದ್ರೂಪಮಾಪ್ತವಾನ್ ॥ ೯ ॥**

**ಭೂಪತಿಂ ಪ್ರಾಹ ನಮ್ರಾತ್ಮಾ ಧರ್ಮಜ್ಞಂ ಚಂದ್ರಶೇಖರಂ ।**
**ತ್ವಯಾ ವಿಮೋಚಿತೋ ನಾಥ ಯಾಸ್ಯಾಮಿ ವರುಣಾಲಯಂ ॥ ೧೦ ॥**

**ಪ್ರಹ್ಲಾದಸ್ಯೈವ ಶಾಪೇನ ವ್ಯಾಘ್ರದೇಹತ್ವಮಾಗತಃ ।**
**ಪರಿಕ್ರಮ್ಯ ಯಯೌ ದೈತ್ಯಃ ಪ್ರಹ್ಲಾದಂ ಪ್ರತಿ ಸತ್ವರಃ ॥ ೧೧ ॥**

**ನೃಪತಿರ್ಗೃಹಮಾಗತ್ಯ ಸುಷ್ವಾಪ ಪರಯಾ ಮುದಾ ।**
**ಪ್ರಭಾತೇ ಬೋಧಿತೋ ರಾಜಾ ಸಭಾಯಾಂ ಸ್ವಯಮಾಗತಂ ॥ ೧೨ ॥**

**ನೃಪೋಕ್ತಃ ಸ ಯಯೌ ತತ್ರ ಯತ್ರ ಕಾಮಾವರೂಥಿನೀ ।**
**ದಿವ್ಯಮೂರ್ತಿಮಯೀಂ ದೃಷ್ಟ್ವಾ ಚಿಂತಯತ್ಸ ಸ್ವಮಾನಸೇ ॥ ೧೩ ॥**

---

೯. ಈರೀತಿ ತಾನು ಹೋದ ಕಾರ್ಯಸಾಧನೆಯಾದುದಕ್ಕೆ ಅವನು ಆನಂದ ಪಡುತ್ತಿರಲು ಆ ಹುಲಿಯ ಕಳೇಬರದಿಂದ ಮುಕುಲನೆಂಬ ದಾನವನು ಹೊರಟು ನಮ್ರತೆಯಿಂದ ಈಚೆಗೆ ಬಂದನು.

೧೦-೧೧. ಆ ದಾನವನು ಧರ್ಮಾತ್ಮನಾದ ಚಂದ್ರಶೇಖರ ರಾಜನನ್ನು ಕುರಿತು "ರಾಜೇಂದ್ರನೇ ! ನಾನು ಪ್ರಹ್ಲಾದನ ಶಾಪವಶದಿಂದ ವ್ಯಾಘ್ರರೂಪವನ್ನು ಹೊಂದಿದ್ದೆನು. ಈಗ ನಿನ್ನ ಕೃಪೆಯಿಂದ ಶಾಪವಿಮೋಚನೆಯಾಯಿತು. ಇನ್ನು ವರುಣಲೋಕಕ್ಕೆ ಹೋಗುವೆನು" ಎಂದು ಹೇಳಿ ಆ ದೈತ್ಯನು ಜಾಗ್ರತೆಯಾಗಿ ಪ್ರಹ್ಲಾದನ ಬಳಿಗೆ ಹೋದನು.

೧೨. ಅನಂತರ ರಾಜನು ಶಯ್ಯಾಗೃಹಕ್ಕೆ ಬಂದು ಸಂತೋಷದಿಂದ ಮಲಗಿಕೊಂಡನು. ಬೆಳಗ್ಗೆ ಎದ್ದು ನಿತ್ಯಕರ್ಮವನ್ನು ನೆರವೇರಿಸಿ ಒಡ್ಡೋಲಗಕ್ಕೆ ಬಂದನು.

೧೩. ಇತ್ತ ರಾಜನ ಅಪ್ಪಣೆಯಂತೆ ಮಂತ್ರಿಯು, ಕಾಮಾವರೂಥಿನಿಯ ನಿವಾಸಕ್ಕೆ ಹೋಗಿ, ಅಲ್ಲಿ ಆಕೆಯ ಸುಂದರರೂಪವನ್ನು ನೋಡಿ, ತನ್ನ ಮನದಲ್ಲಿ ಹೀಗೆ ಆಲೋಚಿಸಿದನು.

ಅಸ್ಯಾ ಮೂರ್ತಿಪ್ರಭಾವೇನ ರಾಜಾಸೌ ಮೋಹಮಾಪ್ಸ್ಯತಿ ।
ಇತಿ ಜ್ಞಾತ್ವಾ ನೃಪಂ ಪ್ರಾಹ ಸೈವ ತ್ವದ್ಯೋಗ್ಯಕಾ ನ ಹಿ ॥ ೧೪ ॥

ತಥಾ ಮತ್ವಾ ಸ ನೃಪತಿರ್ನ ವಿವಾಹಮಥಾಕರೋತ್ ।
ರತ್ನದತ್ತಸ್ತು ಭೂಪಸ್ಯ ಸೇನಾಯಾಃ ಪತಯೇ ದದೌ ॥ ೧೫ ॥

ಬಲಭದ್ರಸ್ಯ ಸಾ ಪತ್ನೀ ಬಭೂವ ವರವರ್ಣಿನೀ ।
ಏಕದಾ ನೃಪತಿಸ್ತಾಂ ವೈ ದೃಷ್ಟ್ವಾ ಕಾಮಾವರೂಥಿನೀಂ ॥ ೧೬ ॥

ಮೋಹಿತಃ ಕಾಮಬಾಣೇನ ಮೂರ್ಚ್ಛಿತಃ ಪತಿತೋ ಭುವಿ ।
ತದಾ ಸೇನಾಪತಿಸ್ತೂರ್ಣಂ ನೃಪಮುತ್ಥಾಪ್ಯ ಸತ್ವರಂ ॥ ೧೭ ॥

ಶಿಬಿಕಾಂ ಚೈವ ಸಂಸ್ಥಾಪ್ಯ ಸಭಾಯಾಂ ಚ ಸಮೈರಯತ್ ।
ತದಾ ಪ್ರಬುದ್ಧೋ ನೃಪತಿಃ ಪ್ರಾಹ ಸೇನಾಪತಿಂ ಮುದಾ ॥ ೧೮ ॥

---

೧೪ ಇವಳ ಸೌಂದರ್ಯಾತಿಶಯಕ್ಕೆ ರಾಜನು ಮರುಳಾಗುವುದೇ ನಿಜ, ಆದರಿಂದ ರಾಜ್ಯಭಾರ ಸಮರ್ಪಕವಾಗುವುದಿಲ್ಲ ಎಂದು ನಿಶ್ಚಯಿಸಿ ರಾಜನನ್ನು ಕುರಿತು "ಪ್ರಭೂ ! ಅವಳು ನಿನಗೆ ಯೋಗ್ಯಳಲ್ಲ" ಎಂದು ಹೇಳಿದನು.

೧೫ ಮಂತ್ರಿಯ ಮಾತೇ ನಿಜವೆಂದು ತಿಳಿದು ರಾಜನು ಅವಳನ್ನು ಮದುವೆ ಮಾಡಿಕೊಳ್ಳಲು ಒಪ್ಪಲಿಲ್ಲ. ಬಳಿಕ ಕನ್ಯಾಪಿತನಾದ ರತ್ನದತ್ತನು ಸೇನಾಪತಿಗೆ ಮಗಳನ್ನು ಕೊಡಲು ಆಲೋಚಿಸಿದನು.

೧೬ ಬಳಿಕ ರತ್ನದತ್ತನು ತನ್ನ ಮಗಳಾದ ಆ ಸುಂದರಿಯನ್ನು ರಾಜನ ಸೇನಾಪತಿಯಾದ ಬಲಭದ್ರನೆಂಬವನಿಗೆ ಕೊಟ್ಟು ವಿವಾಹಮಾಡಿದನು. ಒಂದಾನೊಂದು ದಿನ ಸುಂದರಿಯಾದ ಆ ಕಾಮಾವರೂಥಿನಿಯು ರಾಜನ ದೃಷ್ಟಿಗೆ ಬಿದ್ದಳು.

೧೭. ಅವಳನ್ನು ನೋಡಿ, ರಾಜನು ಮೋಹಗೊಂಡು ಕಾಮಾತುರತೆಯಿಂದ ಮೂರ್ಛೆ ಹೊಂದಿದನು. ಆಗ ಸೇನಾಪತಿಯಾದ ಬಲಭದ್ರನು ರಾಜನಿಗೆ ಜಾಗ್ರತೆ ಎಚ್ಚರವಾಗುವಂತೆ ಶೈತ್ಯೋಪಚಾರಮಾಡಿದನು.

೧೮-೧೯. ಬಳಿಕ ರಾಜನನ್ನು ಪಲ್ಲಕ್ಕಿಯಲ್ಲಿ ಕೂರಿಸಿ ಕಳುಹಿಸಿ, ತಾನು ರಾಜಸಭೆಗೆ ಬಂದನು. ಚೆನ್ನಾಗಿ ಎಚ್ಚರಗೊಂಡ ಮೇಲೆ ರಾಜನು ಸೇನಾಪತಿಯನ್ನು

ಕಸ್ಯೇಯಂ ಸುಂದರೀ ಭಾರ್ಯಾ ಕುತೋ ಜಾತಾ ಮಹೋತ್ತಮಾ ।
ಬಲಭದ್ರಸ್ತು ತಚ್ಛ್ರುತ್ವಾ ನೃಪತಿಂ ಪ್ರಾಹ ನಮ್ರಧೀಃ ॥ ೧೯ ॥

ಮಮೇಯಂ ಸುಂದರೀ ನಾರೀ ರತ್ನದತ್ತಸ್ಯ ಸಾ ಸುತಾ ।
ರಾಜ್ಯಭಂಗಭಯಾನ್ಮಂತ್ರೀ ನ ರೂಪಂ ತ್ವಯಿ ವರ್ಣಿವಾನ್ ॥ ೨೦ ॥

ಮಮ ದಾಸಸ್ಯ ಯಾ ಪತ್ನೀ ತ್ವದ್ಯೋಗ್ಯಾ ಭೂಪತೇ ಸದಾ ।
ತವೇಚ್ಛಾಂ ಪೂರಯಿಷ್ಯಾಮಿ ತಾಂ ಗೃಹಾಣ ಕೃಪಾನಿಧೇ ॥ ೨೧ ॥

ಇತ್ಯುಕ್ತಃ ಕ್ರೋಧತಾಮ್ರಾಕ್ಷೋ ಭೂಪತಿಸ್ತಮುವಾಚ ಹ ।
ತವೇಯಂ ಧರ್ಮತೋ ಭಾರ್ಯಾ ಪ್ರಾಪ್ತಾ ಸುಂದರರೂಪಿಣೀ ॥ ೨೨ ॥

ಗೃಹ್ಣಾಮಿ ಯದಿ ತಾಂ ದೇವೀಂ ನರಕೇ ಯಮಕಿಂಕರಾಃ ।
ಪಾತಯಿತ್ವಾ ಮಹಾದುಃಖಂ ಭಜಯಿಷ್ಯಂತಿ ತರ್ಹಿ ಭೋಃ ॥ ೨೩ ॥

---

ಕುರಿತು ಸಂತೋಷದಿಂದ "ಅಯ್ಯಾ! ಮಹಾಶ್ರೇಷ್ಠಳಾದ ಆಕೆಯ ತಾಯಿತಂದೆಗಳು ಯಾರು? ಆ ಸುಂದರಿಯು ಯಾರ ಪತ್ನಿ"? ಎಂಬುದಾಗಿ ಕೇಳಿದನು.

೨೦. ಬಲಭದ್ರನು ಈ ಮಾತನ್ನು ಕೇಳಿ ನಮ್ರನಾಗಿ, ರಾಜನನ್ನು ಕುರಿತು "ನನ್ನ ಹೆಂಡತಿಯಾದ ಆಕೆಯು ರತ್ನದತ್ತನ ಮಗಳು, ಸುಂದರಿಯಾದ ಇವಳನ್ನು ತಾವು ವರಿಸಿದರೆ ರಾಜಕಾರ್ಯಗಳಿಗೆ ವಿಘ್ನಬರುವುದೆಂದು ಭಾವಿಸಿ ಮಂತ್ರಿಯು ಆ ಭೀತಿಯಿಂದ ನಿಮ್ಮ ಸನ್ನಿಧಿಯಲ್ಲಿ ಇವಳ ರೂಪವನ್ನು ವರ್ಣಿಸಲಿಲ್ಲ."

೨೧. "ಓ ಪ್ರಭುವೇ! ನಾನು ತಮ್ಮ ಸೇವಕ; ಈ ಸೇವಕನ ಪತ್ನಿಯು ಯಾವಾಗ ಬೇಕಾದರೂ ತಮ್ಮವಳೇ ಆಗುವಳು. ತಮ್ಮ ಇಷ್ಟದಂತೆ ನಡೆಯಲು ನಾನು ಸಿದ್ಧನಾಗಿರುವೆನು; ಅಯ್ಯಾ ದಯಾಳುವೇ! ತಾವು ಇವಳನ್ನು ಪರಿಗ್ರಹಿಸಿ" ಎಂದು ಹೇಳಿದನು.

೨೨. ಈ ಮಾತನ್ನು ಕೇಳಿ ರಾಜನು ರೋಷದಿಂದ ಕೆಂಪೇರಿದ ಕಣ್ಣುಳ್ಳವನಾಗಿ, ಆ ಬಲಭದ್ರನನ್ನು ಕುರಿತು "ಸುಂದರಿಯಾದ ಇವಳು ಧರ್ಮಪ್ರಕಾರ ನಿನಗೆ ಪತ್ನಿಯಾಗಿದ್ದಾಳೆ."

೨೩–೨೪. "ಪೂಜ್ಯಳಾದ ಈಕೆಯನ್ನು ನಾನು ಪರಿಗ್ರಹಿಸಿದರೆ ಯಮಭಟರು ನನ್ನನ್ನು ನರಕಕ್ಕೆ ತಳ್ಳಿ ಮಹಾದುಃಖಕ್ಕೆ ಗುರಿಮಾಡುವುದಿಲ್ಲವೆ?" ಎಂದು

ಇತ್ಯುಕ್ತ್ವಾ ಭೂಪತಿಸ್ತೂರ್ಣಂ ವಿರಹಾಗ್ನಿಪ್ರಪೀಡಿತಃ ।
ಮರಣಂ ಪ್ರಾಪ್ತವಾನ್ರಾಜಾ ಗತೋ ಧರ್ಮಪುರಾಂತಿಕೇ ॥ ೨೪ ॥

ಇತ್ಯುಕ್ತ್ವಾ ಸ ತು ವೈತಾಲೋ ನೃಪಂ ಪ್ರಾಹ ಶೃಣುಷ್ವ ಭೋಃ ।
ಮೃತೇ ರಾಜನಿ ತತ್ಪತ್ನೀ ಸತೀ ಭೂತ್ವಾ ಪ್ರದೃಶ್ಯತೇ ॥ ೨೫ ॥

ಸೇನಾಪತಿಸ್ತು ತತ್ರೈವ ಭಸ್ಮಸಾದಭವತ್ಕ್ಷಣಾತ್ ।
ಕಾಮಾವರೂಥಿನೀ ದೇವೀ ಭಸ್ಮ ಕೃತ್ವಾ ಕಲೇವರಂ ॥ ೨೬ ॥

ಸ್ವರ್ಗಂ ಗತಾಸ್ತು ತೇ ಸರ್ವೇ ಕಸ್ಯ ಪುಣ್ಯಾಧಿಕಂ ಮತಂ ।
ಸ ಹೋವಾಚ ಚ ವೈತಾಲಂ ರಾಜಾ ಧರ್ಮಾಧಿಕೋ ಮತಃ ॥ ೨೭ ॥

ಮರಣಂ ಕಿಂಕರಸ್ಯೈವ ಯೋಗ್ಯಂ ಭೂಪತಿಹೇತವೇ ।
ಪತಿವ್ರತಾಯಾ ಮರಣಂ ಪತಿಸಂಗೇನ ಯೋಗ್ಯಕಂ ॥ ೨೮ ॥

---

ಹೇಳಿ, ರಾಜನು ಅತಿಯಾದ ವಿರಹಸಂತಾಪದಿಂದ ಕೆಲವು ದಿನಗಳಲ್ಲಿ ಮೃತಿಹೊಂದಿ ಯಮಲೋಕವನ್ನೈದಿದನು.

೨೫. ಬೇತಾಳವು ಈರೀತಿ ಹೇಳಿ ರಾಜನನ್ನು ಕುರಿತು "ಅಯ್ಯಾ ವಿಕ್ರಮನೇ! ಕೇಳು, ರಾಜನು ಹೀಗೆ ಮೃತನಾಗುತ್ತಲೆ ರಾಜಪತ್ನಿಯು ಸಹಗಮನ ಮಾಡಿ ತನ್ನ ಕರ್ತವ್ಯವನ್ನು ನೆರವೇರಿಸಿಕೊಂಡಳು.

೨೬-೨೭. ಸೇನಾಪತಿಯಾದ ಬಲಭದ್ರನೂ, ಕೂಡಲೆ ಅಗ್ನಿಪ್ರವೇಶ ಮಾಡಿದನು. ಆತನ ಪತ್ನಿಯಾದ ಕಾಮಾವರೂಥಿನಿಯೂ ಅಗ್ನಿಪ್ರವೇಶಮಾಡಿದಳು. ಈರೀತಿ ಎಲ್ಲರೂ ಸ್ವರ್ಗಸ್ಥರಾದರು. ಇವರಲ್ಲಿ ಯಾರ ಪುಣ್ಯ ಹೆಚ್ಚಿನದು? ಹೇಳು" ಎಂದು ಕೇಳಲು, ಅದಕ್ಕೆ ವಿಕ್ರಮರಾಜನು ಬೇತಾಳವನ್ನು ಕುರಿತು ಇಂತೆಂದನು.

೨೮. ಆ ರಾಜನ ಧರ್ಮವೇ ಅಧಿಕವಾದುದು. ರಾಜನಿಗಾಗಿ ತನ್ನ ಪ್ರಾಣವನ್ನು ಅರ್ಪಿಸುವುದು ಸೇವಕನಿಗೆ ಧರ್ಮವಾದುದು, ಹೆಂಡತಿಯು ತನ್ನ ಪಾತಿವ್ರತ್ಯಕ್ಕಾಗಿ ಪತಿಯೊಡನೆ ಸಹಗಮನಮಾಡಿ ಪ್ರಾಣವನ್ನು ಅರ್ಪಿಸುವುದು ಪತಿವ್ರತೆಗೆ ಯೋಗ್ಯವಾದ ಧರ್ಮ.

**ದತ್ತ್ವಾ ಯತ್ಕಿಂಕರೇಣೈವ ಸುಂದರೀ ನೃಪಹೇತವೇ ।**
**ಧರ್ಮಭೀತ್ಯಾ ನ ನೃಪತಿಸ್ತಾಮಗೃಹ್ಣಾತ್ಸ ಕಾಮುಕಃ ॥ ೨೯ ॥**

**ಜಿತ್ವಾ ಕಾಮಂ ತಥಾ ಪಾಲ್ಯಂ ಧರ್ಮಂ ತಸ್ಮಾನ್ನೃಪೇಽಧಿಕಮ್ ॥ ೩೦ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಷೋಡಶೋಽಧ್ಯಾಯ.**



೨೯. "ಸುಂದರಿಯಾದ ಪತ್ನಿಯನ್ನು ರಾಜನಿಗೆ ಅರ್ಪಿಸಲು ಸಮ್ಮತಿಸಿದುದು ಸೇವಕನ ಧರ್ಮ. ತಾನು ಕಾಮಾತುರನಾಗಿದ್ದರೂ ಧರ್ಮಭೀತಿಯಿಂದ ಆಕೆಯನ್ನು ಪರಿಗ್ರಹಿಸದೆ ಇದ್ದುದು ರಾಜಧರ್ಮ.

೩೦. ಆದುದರಿಂದ ಕಾಮವನ್ನು ಜಯಿಸಿ ಧರ್ಮವನ್ನು ಪಾಲಿಸಬೇಕಾದುದು ರಾಜನಲ್ಲಿ ಅಧಿಕವಾಗಿರಬೇಕಾದ ಗುಣ" ಎಂದು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ

## ಸಪ್ತದಶೋಽಧ್ಯಾಯಃ

॥ ಸೂತ ಉವಾಚ ॥

ಪುನಃ ಪ್ರೋವಾಚ ವೈತಾಲಸ್ತದಾ ಬ್ರಾಹ್ಮಣರೂಪವಾನ್ ।
ಶೃಣು ಭೂಪ ಮಹಾಭಾಗ ಕಥಾಂ ತವ ಮನೋರಮಾಂ ॥ ೧ ॥

ಉಜ್ಜಯಿನ್ಯಾಂ ಮಹಾಭಾಗ ಮಹಾಸೇನೋ ನೃಪೋಽಭವತ್ ।
ತಸ್ಯ ರಾಜ್ಯೇಽವಸದ್ವಿಪ್ರೋ ದೇವಶರ್ಮೇತಿ ವಿಶ್ರುತಃ ॥ ೨ ॥

ಗುಣಾಕರಸ್ತಸ್ಯ ಸುತೋ ಮದ್ಯಮಾಂಸಪರಾಯಣಃ ।
ದ್ಯೂತೇನ ಸಂಕ್ಷಯಂ ವಿತ್ತಂ ತಸ್ಯ ಪಾಪಸ್ಯ ಚಾಭವತ್ ॥ ೩ ॥

---

### ಹದಿನೇಳನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಬ್ರಾಹ್ಮಣರೂಪಿಯಾದ ಬೇತಾಳವು ಮತ್ತೆ ರಾಜನನ್ನು ಕುರಿತು "ಪೂಜ್ಯನಾದ ರಾಜನೇ! ಮನೋಹರವಾದ ಒಂದು ಕಥೆಯನ್ನು ಹೇಳುವೆನು ಕೇಳು",

೨. "ಉಜ್ಜಯಿನಿಯಲ್ಲಿ ಮಹಾಸೇನನೆಂಬ ರಾಜೋತ್ತಮನಿದ್ದನು. ಆ ನಗರದಲ್ಲಿ ದೇವಶರ್ಮನೆಂಬ ಬ್ರಾಹ್ಮಣನು ವಿಖ್ಯಾತನಾಗಿದ್ದನು. ಅವನಿಗೆ ಗುಣಾಕರನೆಂಬ ಒಬ್ಬ ಮಗನಿದ್ದನು."

೩. ಅವನು ಸರ್ವದಾ ಮಾಂಸಭಕ್ಷಣೆ, ಮದ್ಯಪಾನ ಇವುಗಳಲ್ಲಿ ನಿರತನಾಗಿದ್ದನು. ಪಾಪಾತ್ಮನಾದ ಅವನ ಜೂಜಾಟದಲ್ಲಿ ವಿತ್ತವೆಲ್ಲವೂ ಹಾಳಾಯಿತು. ಬಂಧುಗಳೆಲ್ಲರೂ ಅವನನ್ನು ವರ್ಜ್ಯಮಾಡಿದರು.

ಬಾಂಧವೈಃ ಸ ಪರಿತ್ಯಕ್ತೋ ಬಭ್ರಾಮ ವಸುಧಾತಲೇ ।
ಕದಾಚಿದ್ದೈವಯೋಗೇನ ಸಿದ್ಧಾಶ್ರಮಮುಪಾಗತಂ ॥ ೪ ॥

ಕಪರ್ದೀನಾಮ ತಂ ಯೋಗೀ ಕಪಾಲಾನ್ನೈರಪೂಜಯತ್ ।
ಜ್ಞಾತ್ವಾ ಪೈಶಾಚಮನ್ನಂ ಸ ಬುಭುಕ್ಷುರ್ನ ಗೃಹೀತವಾನ್ ॥ ೫ ॥

ತದಾತಿಥ್ಯಂ ತದರ್ಥಂ ಸ ಯಕ್ಷಿಣೀಂ ಸಮುಪಾಹ್ವಯತ್ ।
ತಯಾ ರಾತ್ರೌ ಮಹಾನಂದಂ ಪ್ರಾಪ್ತವಾನ್ಸ ದ್ವಿಜಃ ಶಯೀ ॥ ೬ ॥

ಪ್ರಾತಃಕಾಲೇ ತು ಸಂಪ್ರಾಪ್ತೇ ಕೈಲಾಸಂ ಯಕ್ಷಿಣೀ ಗತಾ ।
ಸ ದ್ವಿಜಸ್ತದ್ವಿಯೋಗೇನ ಯೋಗ್ಯಂತಿಕಮುಪಾಯಯೌ ॥ ೭ ॥

---

೪. ಆದುದರಿಂದ ಅವನು ನಿರ್ಗತಿಕನಾಗಿ ಎಲ್ಲೆಲ್ಲೋ ಅಲೆಯುವುದಕ್ಕೆ ಆರಂಭಿಸಿದನು. ಹೀಗೆ ಅಲೆಯುತ್ತಿರುವಾಗ ಒಂದಾನೊಂದುದಿನ ಅದೃಷ್ಟವಶದಿಂದ ತಪಸ್ವಿಸಿದ್ಧರೊಬ್ಬರ ಆಶ್ರಮಕ್ಕೆ ಬಂದನು.

೫. ಅಲ್ಲಿ ಇದ್ದ ಕಪರ್ದಿ ಎಂಬ ಯೋಗಿಯು ತಾನು ಕಪಾಲದಲ್ಲಿ ಭಿಕ್ಷೆಬೇಡಿ ತಂದ ಅನ್ನವನ್ನು ಕೊಟ್ಟು ಇವನನ್ನು ಸತ್ಕರಿಸಹೋದನು. ಆ ಗುಣಾಕರನು ತನಗೆ ತುಂಬಾ ಹೊಟ್ಟೆಹಸಿದಿದ್ದರೂ, ಕಪಾಲದಲ್ಲಿರುವುದು ಪಿಶಾಚಸಂಬಂಧಿಯಾದ ಅನ್ನ ವೆಂದು ತಿಳಿದು ಅದನ್ನು ಸ್ವೀಕರಿಸಲಿಲ್ಲ.

೬. ಆದುದರಿಂದ ಅವನಿಗೆ ಆತಿಥ್ಯ ನಡೆಯಿಸಿ ಸತ್ಕರಿಸುವುದಕ್ಕಾಗಿ, ಆ ಯೋಗಿಯು ಕೂಡಲೆ ಯಕ್ಷಿಣೀ ದೇವತೆಯನ್ನು ಬರಮಾಡಿ ಈತನನ್ನು ಉಪಚರಿಸಿದನು. ಆ ಬ್ರಾಹ್ಮಣನು ಆತಿಥ್ಯಹೊಂದಿ, ಆರಾತ್ರಿ ಆಕೆಯೊಡನೆ ಶಯನಮಾಡಿ ಮಹಾನಂದ ವನ್ನು ಹೊಂದಿದನು.

೭. ಬೆಳಗಾಗುತ್ತಲೆ ಆ ಯಕ್ಷಿಣೀದೇವತೆಯು ಕೈಲಾಸಕ್ಕೆ ಹೊರಟು ಹೋದಳು. ಆ ಗುಣಾಕರಬ್ರಾಹ್ಮಣನು ಆ (ಯಕ್ಷಿಣಿ) ಸ್ತ್ರೀಯ ಅಗಲಿಕೆಯಿಂದ ಸಂತಾಪ, ಹೊಂದಿ ಆ ಯೋಗಿಯ ಬಳಿಗೆ ಬಂದು ನಡೆದ ಸಂಗತಿಯನ್ನೆಲ್ಲಾ ಹೇಳಿ ಕೊಂಡನು.

ಕಪರ್ದೀ ಪ್ರದದೌ ತಸ್ಮೈ ವಿದ್ಯಾಂ ಯಕ್ಷಿಣಿಕರ್ಷಿಣೀಂ ।
ಚತ್ವಾರಿಂಶದ್ದಿನಾನ್ಯೇವ ನಿಶೀಥೇ ಜಲಮಧ್ಯಗಃ ॥ ೮ ॥

ಸ ಜಜಾಪ ಶುಭಂ ಮಂತ್ರಂ ನ ಪ್ರಾಪ್ತಾ ಕಾಮಚಾರಿಣೀ ।
ತದಾ ಯೋಗ್ಯಾಜ್ಞಯಾ ವಿಪ್ರಃ ಸ್ವಯಂ ತು ಮಮತಾಂ ತ್ಯಜನ್ ॥ ೯ ॥

ಪ್ರಾಪ್ತವಾನ್ಪಿತರೌ ನತ್ವಾ ಸ್ವಗೇಹೇ ನಿವಸನ್ನಿಶಿ ।
ಪ್ರಾತಃ ಸಂನ್ಯಾಸಿವದ್ಭೂತ್ವಾ ಕುಲ್ಯೈಶ್ಚ ರುದಿತೈರ್ದ್ವಿಜಃ ॥ ೧೦ ॥

ಪ್ರತಿಬೋಧಿವನಂ ಪ್ರಾಪ್ತಸ್ತಚ್ಛಿಷ್ಯತ್ವಮುಪಾಯಯೌ ।
ಪಂಚಾಗ್ನಿಮಧ್ಯೇ ಸ ಸ್ಥಿತ್ವಾ ತನ್ಮಂತ್ರಮಜಪಚ್ಛುಚಿಃ ॥ ೧೧ ॥

ನ ಪ್ರಾಪ್ತಾ ಯೋಗಿನೀ ದೇವೀ ತದಾ ಚಿಂತಾತುರೋಽಭವತ್ ।
ಇತ್ಯುಕ್ತ್ವಾ ಸ ತು ವೈತಾಲೋ ನೃಪತಿಂ ಜ್ಞಾನಕೋವಿದಂ ॥ ೧೨ ॥

---

೮. ಆಗ ಆ ಕಪರ್ದಿಯೋಗಿಯು 'ಯಕ್ಷಿಣೀಕರ್ಷಿಣೀ' ಎಂಬ ವಿದ್ಯೆಯನ್ನು ಅವನಿಗೆ ಹೇಳಿಕೊಟ್ಟನು ಅವನು ನಲವತ್ತುದಿನ ಪರ್ಯಂತ, ಅರ್ಧರಾತ್ರಿಯಲ್ಲಿ ನೀರಿನ ಮಧ್ಯೆ ನಿಂತು, ಆ ಯಕ್ಷಿಣೀಕರ್ಷಿಣೀ ಎಂಬ ಶುಭಮಂತ್ರವನ್ನು ಜಪಿಸಿದನು. ಆದರೂ ಆ ಕಾಮಚಾರಿಣಿಯು ಲಭಿಸಲಿಲ್ಲ.

೯. ಆಗ ಯೋಗಿಯ ಇಷ್ಟಪ್ರಕಾರ ಆ (ಗುಣಾಕರ) ವಿಪ್ರನು ತಾನು ಆ ಮಮತೆಯನ್ನು ತೊರೆದವನಾಗಿ, ತಾಯಿತಂದೆಗಳ ಬಳಿಗೆ ಬಂದು, ಅವರಿಗೆ ನಮಸ್ಕಾರ ಮಾಡಿ, ಆ ರಾತ್ರಿ ತನ್ನ ಮನೆಯಲ್ಲೇ ಇದ್ದನು.

೧೦ ಬೆಳಗಾಗುತ್ತಲೆ ತನ್ನ ಬಂಧುಗಳ್ಯಾರಿಗೂ ಇಷ್ಟವಿಲ್ಲದೆ ಇದ್ದರೂ ಬೌದ್ಧ ಸಂನ್ಯಾಸಿಯಂತೆ ವಸ್ತ್ರಗಳನ್ನು ಧರಿಸಿ ಪ್ರತಿಬೋಧಿಯುವನಕ್ಕೆ ಬಂದನು.

೧೧. ಅಲ್ಲಿ ಆ ಪ್ರತಿಬೋಧಿಯ (ಬುದ್ಧನ) ಶಿಷ್ಯತ್ವವನ್ನು ವಹಿಸಿದನು, ಅಲ್ಲಿಯೂ ಅವನು ತನ್ನ ಪ್ರಯತ್ನವನ್ನು ಬಿಡದೆ, ಶುಚಿರ್ಭೂತನಾಗಿ, ಪಂಚಾಗ್ನಿಯ ಮಧ್ಯೆ ನಿಂತು ಆ ಯಕ್ಷಿಣೀಕರ್ಷಿಣಿ ಮಂತ್ರವನ್ನು ಜಪಿಸಿದನು. ಆದರೂ ಆಕೆ ಲಭಿಸಲಿಲ್ಲ.

೧೨-೧೩. ಹೀಗಾದುದರಿಂದ ಅವನು ಚಿಂತಾಮಗ್ನನಾದನು." ಬೇತಾಳವು ಹೀಗೆಂದು ಹೇಳಿ ಪ್ರಾಜ್ಞನಾದ ರಾಜನನ್ನು ಕುರಿತು "ಅವನಿಗೆ ಪ್ರಿಯಳಾಗಿದ್ದರೂ ಯಕ್ಷಿಣೀದೇವಿಯು ಪುನಃ ಏಕೆ ಅವನಿಗೆ ವಶಳಾಗಲಿಲ್ಲ ?" ಎಂದು ಕೇಳಿದನು.

**ಪುನರಾಹ ಕಥಂ ದೇವೀ ನ ಪ್ರಾಪ್ತಾ ಯಕ್ಷಿಣೀ ಪ್ರಿಯಾ ।**
**ಶ್ರುತ್ವಾಹ ನೃಪತಿರ್ವಿಪ್ರ ವೈತಾಲಂ ರುದ್ರಕಿಂಕರಂ ॥ ೧೩ ॥**

**ತ್ರಿವಿಧಂ ಕರ್ಮ ಭೋ ವಿಪ್ರ ಸಿದ್ಧ್ಯರ್ಥೇ ಸಾಧಕಾಯ ವೈ ।**
**ಮನೋವಾಗ್ವಿಹಿತಂ ಕರ್ಮ ಪರಲೋಕೇ ಸುಖಪ್ರದಂ ॥ ೧೪ ॥**

**ಸುಂದರಾಂಗಕೃತಂ ಜ್ಞೇಯಂ ಪುನರ್ವಾಕ್ಕಾಯಸಂಭವಂ ।**
**ಕಿಂಚಿತ್ಸಿದ್ಧಿಪ್ರದಂ ಜ್ಞೇಯಮಿಹ ಜನ್ಮನಿ ವೀಕ್ಷಿತಂ ॥ ೧೫ ॥**

**ಪರತ್ರ ಚ ಭುವರ್ಲೋಕೇ ಪಿಂಡದೇಹಕೃತಂ ಸ್ಮೃತಂ ।**
**ಮನಃಕಾಯೇನ ಸಂಭೂತಂ ಪರಜನ್ಮನಿ ರಾಜ್ಯದಂ ॥ ೧೬ ॥**

**ಮನೋವಾಕ್ಕಾಯಸಂಭೂತಮಿಹ ಜನ್ಮನಿ ಸಿದ್ಧಿದಂ ।**
**ಪರತ್ರ ಪರಮಾಂ ಸಿದ್ಧಿಂ ತತ್ಕರ್ಮ ಪ್ರದದಾತಿ ಹಿ ॥ ೧೭ ॥**

---

ರಾಜನು ಈ ಮಾತನ್ನು ಕೇಳಿ ರುದ್ರಕಿಂಕರನಾದ ಬೇತಾಳನನ್ನು ಕುರಿತು ಇಂತೆಂದನು.

೧೪-೧೬. "ಎಲೈ ಬ್ರಾಹ್ಮಣನೇ! ಸಾಧಕನು ಸಿದ್ಧಿಹೊಂದುವುದಕ್ಕೆ ಮನಸ್ಸು, ವಾಕ್ಕು, ಕಾಯ ಈ ಮೂರರ ಐಕ್ಯದಿಂದ ಕರ್ಮಮಾಡಬೇಕೆಂದು ವಿಹಿತವಾಗಿದೆ. ಮನಸ್ಸು, ವಾಕ್ಕು ಇವೆರಡರಿಂದ ಮಾತ್ರ ಮಾಡಿದ ಕರ್ಮವು, ಪರಲೋಕದಲ್ಲಿ ಸುಖಹೊಂದಲು ಯೋಗ್ಯವಾಗಿರತಕ್ಕ, ಸುಂದರವಾದ ಶರೀರವನ್ನು ಕೊಡುತ್ತದೆ. ವಾಕ್ಕು, ಕಾಯ ಇವೆರಡರಿಂದ ಮಾತ್ರ ಮಾಡಿದ ಕರ್ಮವು, ಸ್ವಲ್ಪಮಟ್ಟಿಗೆ ಸಿದ್ಧಿ ಕೊಡತಕ್ಕದ್ದಾಗಿ, ಈ ಜನ್ಮದಲ್ಲೂ ಇನ್ನೊಂದು ಜನ್ಮದಲ್ಲೂ ಪಿಂಡದೇಹದಿಂದ ಅನುಭವಿಸಲ್ಪಡತಕ್ಕದ್ದೆಂದು ಹೇಳಿದೆ. ಮನಸ್ಸು, ಕಾಯ ಈ ಎರಡರ ಐಕ್ಯದಿಂದಲುಂಟಾಗುವ ಕರ್ಮವು ಇನ್ನೊಂದು ಜನ್ಮದಲ್ಲಿ ರಾಜ್ಯಪ್ರಾಪ್ತಿಯನ್ನುಂಟುಮಾಡುವುದು.

೧೭. "ಮನಸ್ಸು, ವಾಕ್ಕು, ಕಾಯ ಈ ಮೂರರ ಐಕ್ಯದಿಂದ ಉಂಟಾಗುವ ಕರ್ಮವು, ಈ ಜನ್ಮದಲ್ಲಿಯೂ ಸಿದ್ಧಿಯನ್ನು ಕೊಡುವುದು. ಮತ್ತು ಇನ್ನೊಂದು ಜನ್ಮದಲ್ಲಿಯೂ ಉತ್ತಮವಾದ ಗತಿಯನ್ನು ಕೊಡುವುದು. ಆದುದರಿಂದ ಈ ಲೋಕದಲ್ಲಿ ಸಿದ್ಧಿಯನ್ನು ಪಡೆಯಬೇಕಾದ ಸಾಧಕರು ಮನೋವಾಕ್ಕಾಯಗಳ ಐಕ್ಯತೆಯಿಂದ ಕರ್ಮಗಳನ್ನು ಮಾಡಬೇಕಾದುದು ಅಗತ್ಯ."

ತಸ್ಮಾತ್ಕರ್ತ್ರವ್ಯಮೇವೇಹ ತ್ರಿವಿಧಂ ಕರ್ಮ ಸಾಧಕೈಃ ।
ಅನ್ಯವಿತ್ತೇನ ಸ ದ್ವಿಜಃ ಕೃತವಾನ್ ಕರ್ಮ ಮಂತ್ರಜಂ ।
ಅತೋಽನ್ಯಜನ್ಮನಿ ಪ್ರಾಪ್ತೋ ಯಕ್ಷತ್ವಂ ತತ್ಪರೋ ದ್ವಿಜಃ ॥ ೧೮ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ಸ ತು ವೈತಾಲಃ ಪ್ರಸನ್ನವದನೋಽಭವತ್ ॥ ೧೯ ॥

ಸಾಧು ಸಾಧ್ವಿತಿ ತಂ ಪ್ರೋಚ್ಯ ಸದ್ವಾಕ್ಯೈಃ ಸಮಪೂಜಯತ್ ।
ಇತಿಹಾಸಂ ಪುನಃ ಪ್ರಾಹ ಪರೀಕ್ಷಾರ್ಥೇ ನೃಪಾಯ ಸಃ ॥ ೨೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಸಪ್ತದಶೋಽಧ್ಯಾಯಃ.



೧೮. "ಆ ಬ್ರಾಹ್ಮಣನು ವಾಗ್ರೂಪವಾದ ಮಂತ್ರಜಪವನ್ನು ಅನ್ಯರ ದ್ರವ್ಯದಿಂದ ಆಚರಿಸಿದನು. ಆದಕಾರಣ ಇನ್ನೊಂದು ಜನ್ಮದಲ್ಲಿ ಯಕ್ಷಿಣೀಪತಿತ್ವವನ್ನು ಹೊಂದುತ್ತಾನೆ" ಎಂದು ಉತ್ತರ ಕೊಟ್ಟನು."

೧೯-೨೦. ಸೂತಮುನಿವರ್ಯನು ಹೇಳುತ್ತಾನೆ-ಇದನ್ನು ಕೇಳಿ ಬೇತಾಳನ ಮನಸ್ಸಿಗೆ ಸಂತೋಷವಾಗಿ ಮುಖವು ಅರಳಿತು. ಆಗ "ಅಯ್ಯಾ ನಿನ್ನ ಮಾತು ಸತ್ಯವೂ ನ್ಯಾಯವೂ ಆಗಿದೆ" ಎಂದು ಶ್ಲಾಘನೆಯ ಮಾತುಗಳನ್ನಾಡಿ ಅವನನ್ನು ಗೌರವಿಸಿ, ಅವನ ಸರ್ವಜ್ಞತೆಯನ್ನು ಪರೀಕ್ಷಿಸುವುದಕ್ಕಾಗಿ ಇನ್ನೊಂದು ಇತಿಹಾಸವನ್ನು ಹೇಳತೊಡಗಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ದ್ವಿತೀಯ ಖಂಡದಲ್ಲಿ
ಕಲಿಯುಗದ ಇತಿಹಾಸಸಮುದಾಯವೆಂಬ ಹದಿನೇಳನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ಅಷ್ಟಾದಶೋಽಧ್ಯಾಯಃ

॥ ಸೂತ ಉವಾಚ ॥

ಭೋಃ ಶೌನಕ ಮಹಾಪ್ರಾಜ್ಞ ವೈತಾಲಸ್ತಂ ಹಿ ಸೋಽಬ್ರವೀತ್ ।
ಸುದಕ್ಷೋ ನಾಮ ನೃಪತಿರ್ವಸನ್ ಕಂಬಲಕೇ ಪುರೇ ॥ ೧ ॥

ನ್ಯಾಯವಾನ್ಧರ್ಮವಾಞ್ಛೂರೋ ದಾತಾ ಶಿವಪರಾಯಣಃ ।
ತಸ್ಯ ರಾಜ್ಯೇಽವಸದ್ವೈಶ್ಯೋ ಧನಾಢ್ಯಕ್ಷ ಇತಿ ಶ್ರುತಃ ॥ ೨ ॥

ತನಯಾ ಸುಂದರೀ ತಸ್ಯ ನಾಮ್ನಾ ಧನವತೀ ಶುಭಾ ।
ಗೌರೀದತ್ತಾಯ ವೈಶ್ಯಾಯ ಪಿತ್ರಾ ದತ್ತಾ ವರಾಂಗನಾ ॥ ೩ ॥

---

## ಹದಿನೆಂಟನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಅಯ್ಯಾ ಮಹಾಪ್ರಾಜ್ಞನಾದ ಶೌನಕನೇ ! ಕೇಳು ಆ ಬೇತಾಳನು ರಾಜನನ್ನು ಕುರಿತು " ಅಯ್ಯಾ ಪ್ರಭುವೇ ! ಕಂಬಲಪುರದಲ್ಲಿ ಸುದಕ್ಷನೆಂಬ ಅರಸು ಇದ್ದನು.

೨. ಅವನು ನ್ಯಾಯಮಾರ್ಗದಲ್ಲಿ ನಡೆಯುವವನು, ಧರ್ಮಿಷ್ಠನು, ದಾನ ಶೀಲನು, ಮತ್ತು ಶೂರನು, ಅವನಿಗೆ ಶಿವಪೂಜೆಯಲ್ಲಿ ಅತ್ಯಂತ ಆಸಕ್ತಿಯಿದ್ದಿತು.

೩. ಆ ಪಟ್ಟಣದಲ್ಲಿ ಧನಾಢ್ಯನೆಂಬ ವೈಶ್ಯನು ಇದ್ದನು. ಅವನ ಮಗಳ ಹೆಸರು ಧನವತಿ. ಆಕೆ ಬಹು ಸುಂದರಿ, ಆ ಧನಾಢ್ಯಕ್ಷನು ತನ್ನ ಪುತ್ರಿಯನ್ನು ಗೌರೀ ದತ್ತನೆಂಬವನಿಗೆ ಕೊಟ್ಟು ಮದುವೆಮಾಡಿದ್ದನು.

ಕಿಯುತಾ ಚೈವ ಕಾಲೇನ ಮೋಹಿನೀ ತತ್ಸುತಾಭವತ್ ।
ದ್ವಾದಶಾಬ್ದವಯಸ್ತಸ್ಯಾಃ ಪಿತಾ ತು ನಿಧನಂ ಗತಃ ॥ ೪ ॥

ತದಾ ಧನವತೀ ರಂಡಾ ನಿರ್ಧನಾ ಪಿತುರಂತಿಕೇ ।
ಕನ್ಯಯಾ ಸಹ ಸಂಪ್ರಾಪ್ತಾ ನಿಶಿ ಮಾರ್ಗೇ ತಮೋಮಯೇ ॥ ೫ ॥

ನ್ಯಾಯಶರ್ಮಾ ದ್ವಿಜಃ ಕಶ್ಚಿದ್ಬ್ರಹ್ಮಸ್ವಸ್ಯಾಪಹಾರಕಃ ।
ನಾಮಸತ್ಯತ್ವಭಾವೇನ ಶೂಲ್ಯಾಂ ನ ನಿಧನಂ ಗತಃ ॥ ೬ ॥

ಅಕಸ್ಮಾದ್ವೈಶ್ಯಜಾ ಪ್ರಾಪ್ತಾ ತತ್ಕರಂ ಸಾ ತದಾಸ್ಪೃಶತ್ ।
ತೇನ ದುಃಖೇನ ಮಹತಾ ರುರೋದೋಚ್ಚೈರ್ದ್ವಿಜಶ್ಚ ಸಃ ॥ ೭ ॥

---

೪. ಸ್ವಲ್ಪಕಾಲದೊಳಗಾಗಿ ಅವರಿಗೆ ಮೋಹಿನಿಯೆಂಬ ಪುತ್ರಿಯು ಜನಿಸಿದಳು. ಆ ಬಾಲಿಕೆಗೆ ಹನ್ನೆರಡು ವರ್ಷ ತುಂಬುವುದರೊಳಗೆ ಅವಳ ತಂದೆಯಾದ ಗೌರೀದತ್ತನು ಮೃತನಾದನು.

೫. ಅನಂತರ ಆ ಧನವತಿಯು ವಿಧವೆಯೂ, ಧನಹೀನೆಯೂ, ಆಗಿ, ತನ್ನ ಮಗಳನ್ನು ಜತೆಯಲ್ಲಿ ಕರೆದುಕೊಂಡು ತಂದೆಯ ಮನೆಗೆ ಬರುತ್ತಿದ್ದಳು. ಅಂಧಕಾರಾವೃತವಾದ ಒಂದು ರಾತ್ರಿಯಲ್ಲಿ ಅವರು ದಾರಿ ನಡೆಯುತ್ತಿದ್ದರು.

೬. ಆ ವೇಳೆಯಲ್ಲಿ ಬ್ರಹ್ಮಸ್ವತ್ತನ್ನು ಅಪಹರಿಸಿದ ನ್ಯಾಯಶರ್ಮನೆಂಬ ನಾಮಮಾತ್ರ ಬ್ರಾಹ್ಮಣನು, ರಭಸದಿಂದ ಅವರ ಎದುರಿಗೆ ಬಂದು ಸೋಂಕಿದನು. ಚೌರ್ಯದ ಅಕೃತ್ಯಕ್ಕಾಗಿ ಅವನು ಶೂಲಕ್ಕೇರಿಸುವ ಶಿಕ್ಷೆ ಹೊಂದಬೇಕಾಗಿದ್ದರೂ ತನ್ನ ಹೆಸರಿನ ಗೌರವದಮೇಲೆ ಶೂಲಪ್ರಾಪ್ತಿಯ ಶಿಕ್ಷೆಯಿಂದ ಸದ್ಯಕ್ಕೆ ಪಾರಾಗಿ ರಭಸದಿಂದ ಬರುತ್ತಿದ್ದನು.

೭-೮. ಹೀಗೆ ಬರುತ್ತಿರುವಾಗ ಅಕಸ್ಮಾತ್ತಾಗಿ ಅವನ ಕೈಯು ವೈಶ್ಯಪುತ್ರಿಯಾದ ಮೋಹಿನಿಯ ಕೈಗೆ ಸೋಕಿತು. ಅದರಿಂದ ಮಹಾದುಃಖಿತನಾಗಿ ಆ ದ್ವಿಜನು ಅಯ್ಯೋ ! ರಾಮ, ರಾಮ! ಕೃಷ್ಣ, ಪ್ರದ್ಯುಮ್ನ, ಅನಿರುದ್ಧ ಎಂದು ದೊಡ್ಡ ಧ್ವನಿ

**ಹಾ ರಾಮ ಕೃಷ್ಣ ಪ್ರದ್ಯುಮ್ನಾನಿರುದ್ಧೇತಿ ಪುನಃಪುನಃ ।**
**ಶ್ರುತ್ವಾ ಧನವತೀ ದೀನಾ ಕೋ ಭವಾನಿತಿ ಸಾಬ್ರವೀತ್ ॥ ೮ ॥**

**ದ್ವಿಜ ಆಹ ಚ ವಿಪ್ರೋಽಹಂ ತ್ರ್ಯಹಂ ಶೂಲ್ಯಾಂ ನಿರೂಪಿತಃ ।**
**ಯದಿ ದಾಸ್ಯಸಿ ಮೇ ಕನ್ಯಾಂ ಕೋಟಿಸ್ವರ್ಣಂ ದದಾಮಿ ತೇ ॥ ೯ ॥**

**ಶ್ರುತ್ವಾ ಧನವತೀ ತಸ್ಮಾ ಉದ್ವಾಹ್ಯ ಮೋಹಿನೀಂ ಸುತಾಂ ।**
**ವಟಮೂಲೇ ಸ್ಥಿತಂ ದ್ರವ್ಯಂ ಖನಿತ್ವಾ ಗೃಹಮಾಯಯೌ ॥ ೧೦ ॥**

**ಮೋಹಿನ್ಯಪಿ ಪತಿಂ ಪ್ರಾಹ ಭವಾನ್ಮೃತ್ಯುವಶಂ ಗತಃ ।**
**ಕುತೋ ಜಾಯೇತ ತನಯಸ್ತನ್ಮೇ ಬ್ರೂಹಿ ದಯಾನಿಧೇ ॥ ೧೧ ॥**

---

ಯಿಂದ ಬಿಕ್ಕಿಬಿಕ್ಕಿ ರೋದನಮಾಡತೊಡಗಿದನು. ಇದನ್ನು ಕೇಳಿ ಧನವತಿಯು ದೈನ್ಯದಿಂದ "ನೀನು ಯಾರಪ್ಪಾ ?" ಎಂದು ಕೇಳಿದಳು.

೯. ಅದಕ್ಕೆ ಆ ನ್ಯಾಯಶರ್ಮನು "ನಾನೊಬ್ಬ ಬ್ರಾಹ್ಮಣ, ನನ್ನನ್ನು ಇನ್ನು ಮೂರು ದಿನದಲ್ಲಿ ಶೂಲಕ್ಕೇರಿಸುವರು. ನನಗೆ ನಿನ್ನ ಮಗಳನ್ನು ಕೊಟ್ಟರೆ ನಿನಗೆ ಒಂದು ಕೋಟಿ ದ್ರವ್ಯವನ್ನು ಕೊಡುವೆನು" ಎಂದು ಹೇಳಿದನು.

೧೦. ಈ ಮಾತನ್ನು ಕೇಳಿ, ಧನವತಿಯು ತನ್ನ ಪುತ್ರಿಯಾದ ಮೋಹಿನಿಯನ್ನು ಅವನಿಗೆ ಮದುವೆಮಾಡಿಕೊಟ್ಟಳು. ಅವನು ಅಲ್ಲಿಲ್ಲೋ ಆಲದಮರದ ಬುಡದಲ್ಲಿ ನೆಲವನ್ನು ಅಗೆದು ತಾನು ಬಚ್ಚಿಟ್ಟಿದ್ದ ದ್ರವ್ಯವನ್ನು ತೆಗೆದು ಆಕೆಗೆ ಕೊಟ್ಟನು. ಅವಳು ಅದನ್ನು ತೆಗೆದುಕೊಂಡು ತನ್ನ ಮನೆಗೆ ಬಂದಳು. ಇವನೂ ತನ್ನ ನಿವಾಸಕ್ಕೆ ಬಂದನು.

೧೧. ಆ ಮಾರನೆಯ ದಿನ ಮೋಹಿನಿಯು ಗಂಡನನ್ನು ಕುರಿತು "ಓ ದಯಾಳುವೇ ! ಇನ್ನು ಸ್ವಲ್ಪ ದಿನದಲ್ಲಿ ನಿನ್ನನ್ನು ಶೂಲಕ್ಕೇರಿಸುವರೆಂದು ಹೇಳಿದೆ, ನೀನು ಮೃತನಾದಮೇಲೆ ನನಗೆ ಪುತ್ರನಾಗುವ ಬಗೆ ಹೇಗೆ ? ದಯಾನಿಧಿಯೇ ! ಅದನ್ನು ನನಗೆ ಹೇಳು" ಎಂದಳು.

ದ್ವಿಜಃ ಪ್ರಾಹ ಶೃಣು ವ್ಯಂಗೇ ಯದಾ ತೇ ಹೃಚ್ಛಯೋ ಭವೇತ್ ।
ತದಾ ತ್ವಂ ಪಂಡಿತಂ ಪ್ರಾಪ್ಯ ಪುತ್ರಮುತ್ಪಾದಯಾಶು ವೈ ॥ ೧೨ ॥

ಇತ್ಯುಕ್ತ್ವಾ ಮರಣಂ ಪ್ರಾಪ್ಯ ಯಮಲೋಕಂ ಗತೋ ದ್ವಿಜಃ ।
ನಾರಕೀಂ ಯಾತನಾಂ ನಿತ್ಯಂ ಬುಭುಜೇ ನಿಂದ್ಯಕರ್ಮಜಾಂ ॥ ೧೩ ॥

ಮಾತುರ್ಗೃಹೇ ತು ಸಾ ನಾರೀ ಮೋಹಿನೀ ಯೌವನಾನ್ವಿತಾ ।
ಸಮಯಂ ಹೃದಯೇ ಕೃತ್ವಾ ತಿಷ್ಠಂತೀ ಚ ಪುನಃಪುನಃ ॥ ೧೪ ॥

ಕೇ ಭೋಗಾಶ್ಚ ಕಿಮಾಶ್ಚರ್ಯಂ ಕೋ ಜಾಗರ್ತಿ ಶಯೀತ ಕಃ ।
ಪಾಪೋ ವ್ಯಾಧಿಶ್ಚ ದುಃಖಂ ಚ ಕುತೋ ಜಾತಂ ಹೃದಿ ಸ್ಥಿತಂ ॥ ೧೫ ॥

ಇತಿ ಶ್ಲೋಕಂ ದ್ವಿಜಾನಾಹ ನೋತ್ತರಂ ಚ ದದುರ್ದ್ವಿಜಾಃ ।
ಮೇಧಾವೀ ನಾಮ ಕಾಶ್ಮೀರೇ ಸ್ಥಿತೋ ವಿಪ್ರಃ ಸಮಾಗತಃ ॥ ೧೬ ॥

---

೧೨. ಅದಕ್ಕೆ ಬ್ರಾಹ್ಮಣನು "ಎಲೌ ಸುಂದರಿ! ನಿನಗೆ ನಾನು ಬರೆದುಕೊಟ್ಟಿರುವ ಅರ್ಥಗರ್ಭಿತವಾದ ಶ್ಲೋಕಕ್ಕೆ, ಸಮರ್ಪಕವಾಗಿ ಉತ್ತರ ಹೇಳಿದ ವಿದ್ವಾಂಸನನ್ನು ಹೊಂದಿ, ಜಾಗ್ರತೆ ಪುತ್ರೋತ್ಪಾದನೆ ಮಾಡಿಕೊ" ಎಂದು ಹೇಳಿ ಬಳಿಕ ಶಿಕ್ಷಾವಿಧಿಸಲ್ಪಟ್ಟು ಮೃತನಾದನು.

೧೩. ಬಳಿಕ ಆ ದ್ವಿಜನಿಗೆ ಯಮಲೋಕ ಪ್ರಾಪ್ತಿಯಾಯಿತು. ಅಲ್ಲಿ ಅವನು ತನ್ನ ದುಷ್ಕರ್ಮಕ್ಕೆ ಅನುರೂಪವಾದ ನರಕಯಾತನೆಯನ್ನು ನಿತ್ಯವೂ ಅನುಭವಿಸುತ್ತಿದ್ದನು.

೧೪. ಇತ್ತ ಯುವತಿಯಾದ ಮೋಹಿನಿಯು ತಾಯಿಯ ಮನೆಯನ್ನು ಸೇರಿ ಸಮಯ ನಿರೀಕ್ಷೆಮಾಡಿಕೊಂಡು ಇರುತ್ತಾ ಆ ಊರಿಗೆ ಹೊಸದಾಗಿ ಬಂದ ದ್ವಿಜರನ್ನು ಈರೀತಿ ಪ್ರಶ್ನಿಸುತ್ತಿದ್ದಳು.

೧೫-೧೬. ಲೋಕದಲ್ಲಿ ಭೋಗಗಳು ಯಾವುವು? ಆಶ್ಚರ್ಯವೆಂಬುದು ಯಾವುದು? ಸದಾ ಎಚ್ಚರವಾಗಿರುವರು ಯಾರು? ಸದಾ ಸುಖವಾಗಿ ಮಲಗಿರುವರು ಯಾರು? ಮನೋಗತವಾದ ಪಾಪ, ರೋಗ, ದುಃಖ ಇವು ಯಾವುದರಿಂದ ಉಂಟಾಗುವುವು? ಎಂಬ ಪ್ರಶ್ನೆಗಳುಳ್ಳ ಶ್ಲೋಕವನ್ನು ದ್ವಿಜರ ಕೈಗೆ ಕೊಟ್ಟು, ಉತ್ತರವನ್ನು ಕೇಳುತ್ತಿದ್ದಳು. ಒಬ್ಬನಾದರೂ ಉತ್ತರ ಕೊಡಲಿಲ್ಲ.

ತಾಮುವಾಚ ಪ್ರಸನ್ನಾತ್ಮಾ ಶೃಣು ಮೋಹಿನಿ ಸುಂದರಿ ।
ಸುಗಂಧಿ ವನಿತಾ ವಸ್ತ್ರಂ ಗೀತಂ ಪಾನಂ ಚ ಭೋಜನಂ ।
ಶಯ್ಯಾ ಚ ಭೂಷಣಂ ಜ್ಞೇಯೋ ಭೋಗೋ ಹ್ಯಷ್ಟವಿಧೋ ಬುಧೈಃ ॥೧೭॥

ಅಹನ್ಯಹನಿ ಭೂತಾನಿ ಮ್ರಿಯಂತೇ ಜನಯಂತಿ ಚ ।
ಮಮತಾಂ ಯಃ ಕರೋತ್ಯೇಷಾಂ ತದಾಶ್ಚರ್ಯಂ ಸ್ಮೃತಂ ಬುಧೈಃ ॥೧೮॥

ಯೋ ವಿವೇಕಂ ಸಮಾಸಾದ್ಯ ಕುರುತೇ ಕರ್ಮಸಂಗ್ರಹಂ ।
ಸಂಸಾರೇ ಘೋರತಮಸಿ ಸ ಜಾಗರ್ತಿ ವಿವೇಕವಾನ್ ॥ ೧೯ ॥

ಸಂಸಾರಾಜಗರಂ ಜ್ಞಾತ್ವಾ ವೈರಾಗ್ಯಂ ಯೋऽಕರೋದ್ಭುವಿ ।
ಔದಾಸೀನ್ಯಂ ಸಮಾಧಿಂ ಚ ಸುಖಂ ಶೇತೇ ಹಿ ಮಾನವಃ ॥ ೨೦ ॥

---

೧೭. ಒಂದುದಿನ ಕಾಶ್ಮೀರದೇಶದ ಮೇಧಾವಿಯೆಂಬ ವಿಪ್ರನು ಅಲ್ಲಿಗೆ ಬಂದನು. ಅವನು ಪೂರ್ವೋಕ್ತವಾದ ಪ್ರಶ್ನೆಯನ್ನು ಕೇಳಿದ ಆಕೆಯನ್ನು ಕುರಿತು ಪ್ರಸನ್ನ ಮನಸ್ಸಿನಿಂದ "ಸುಂದರಿಯಾದ ಮೋಹಿನಿ! ಕೇಳು, ಸುಗಂಧ ದ್ರವ್ಯಗಳು, ಸುಂದರಿಯಾದ ಯುವತಿ, ವಸ್ತ್ರಾದಿಗಳು, ಸಂಗೀತ, ಪಾನ, ಭೋಜನ, ಹಾಸಿಗೆ, ಒಡವೆಗಳು, ಎಂಬದಾಗಿ ಭೋಗಸಾಮಗ್ರಿಗಳು ಎಂಟು ಬಗೆಯೆಂದು ವಿದ್ವಾಂಸರು ಹೇಳಿದ್ದಾರೆ"

೧೮. "ಲೋಕದಲ್ಲಿ ಪ್ರತಿಕ್ಷಣದಲ್ಲಿಯೂ ಪ್ರಾಣಿಗಳು ಸಾಯುತ್ತವೆ, ಮತ್ತು ಹುಟ್ಟುತ್ತವೆ. ಇದು ಗೊತ್ತಿದ್ದರೂ ಜನರು ಮಮತೆ (ಅಭಿಮಾನ) ಪಡುತ್ತಾರಲ್ಲಾ! ಇದೇ ಆಶ್ಚರ್ಯ, ಎಂದು ತಿಳಿದವರು ಹೇಳಿದ್ದಾರೆ"

೧೯. "ವಿವೇಚನಾಯುಕ್ತನಾಗಿ ಕರ್ಮಸಂಗ್ರಹ ಮಾಡುವವನು, ಮಹಾಂಧಕಾರ ರೂಪವಾದ ಸಂಸಾರದಲ್ಲಿ ವಿವೇಕದಿಂದ ವರ್ತಿಸುವವನು, ಇವರನ್ನು ಸರ್ವದಾ ಎಚ್ಚರವಾಗಿರುವವರೆನ್ನಬಹುದು."

೨೦. ಲೋಕದಲ್ಲಿ ಈ ಸಂಸಾರವನ್ನು ಒಂದು ಹೆಬ್ಬಾವು ಎಂದು ತಿಳಿದು, ಇದರಲ್ಲಿ ಉದಾಸೀನನಾಗಿ ವೈರಾಗ್ಯವನ್ನು ಹೊಂದಿ, ಸಮಾಧಿಯೋಗವನ್ನು ಅನುಸರಿಸಿದವನೇ ಸುಖವಾಗಿ ಮಲಗಿದವನೆನಿಸುವನು.

ಸಂಕಲ್ಪಾಜ್ಜಾಯತೇ ಕಾಮಸ್ತತೋ ಲೋಭಃ ಪ್ರಜಾಯತೇ ।
ಲೋಭಾಜ್ಜಾತಶ್ಚ ತೃಷ್ಣಾಯಾಂ ಸ ಪಾಪೋ ನಿರಯಪ್ರದಃ ॥ ೨೧ ॥

ಜಲಪ್ರಕೃತ್ಯಾಂ ಯೋ ಜಾತೋ ರಸೋ ರಸವಿಕಾರವಾನ್ ।
ರಸಾಜ್ಜಾತಸ್ಯ ದೇಹೇಽಸ್ಮಿನ್ವ್ಯಾಧಿಃ ಕರ್ಮಮಯೋಽಶುಭಃ ॥ ೨೨ ॥

ರುದ್ರಾತ್ಕಾಲ್ಯಾಂ ಸಮುದ್ಭೂತೋ ಮೋಹೋ ಹೃದಿ ಚ ಲೋಕಹಾ ।
ಸ ತುಷ್ಟಾವ ಮಹಾದೇವೀಂ ಪತ್ನ್ಯರ್ಥೇ ಸುರಪೂಜಿತಾಂ ॥ ೨೩ ॥

ಮಿಥ್ಯಾದೃಷ್ಟಿಸ್ತತೋ ಜಾತಾ ಮೋಹಸ್ಯ ದಯಿತಾಭವತ್ ।
ತಸ್ಮಾತ್ಸ್ನೇಹಶ್ಚ ತತ್ಪತ್ನ್ಯಾಂ ಜಾತಶ್ಚ ಮಮತಾಪ್ರಿಯಃ ॥ ೨೪ ॥

ತಯೋಃ ಸಕಾಶಾತ್ಸಂಜಾತಂ ದುಃಖಂ ಶೋಕಸಮನ್ವಿತಂ ।
ಇತಿ ಶ್ರುತ್ವಾ ತು ಸಾ ನಾರೀ ಮುಮೋಹ ವರವರ್ಣಿನೀ ॥ ೨೫ ॥

---

೨೧. "ಮಾನವನಿಗೆ ಸಂಕಲ್ಪದಿಂದ ಕಾಮವು ಹುಟ್ಟಿ, ಅದರಿಂದ ಲೋಭ ಉತ್ಪನ್ನವಾಗುವುದು. ಲೋಭ ಮತ್ತು ತೃಷ್ಣೆ ಇವೆರಡರಿಂದ ಮಾನವನಿಗೆ ನರಕ ಪ್ರಾಪ್ತಿಗೆ ಕಾರಣವಾದ ಪಾಪವುಂಟಾಗುವುದು."

೨೨. "ರಸವು ನೀರಿನಂತೆ ದ್ರವಸ್ವಭಾವವುಳ್ಳದು. ಇದು ಜಲಪ್ರಕೃತಿಯಿಂದ ಹುಟ್ಟುವುದು. ಇದರಿಂದ ದೇಹದಲ್ಲಿ ಅವರವರ ಕರ್ಮಾನುಸಾರವಾಗಿ ಕ್ಲೇಶ (ಅಮಂಗಳ) ರೂಪವಾಗಿ ಕಾಣಿಸುವುದೇ ರೋಗವೆನಿಸುವುದು."

೨೩. "ಲೋಕನಾಶಕವಾದ ಈ ಮೋಹವು ಕಾಲಿಯ ಹೃದಯದಲ್ಲಿ ರುದ್ರನಿಂದ ಉತ್ಪತ್ತಿಯಾಯಿತು. ಅದು ತನಗೆ ಒಬ್ಬ ಸಹಚರಿಯನ್ನು ಕರುಣಿಸು ಎಂದು ದೇವವಂದ್ಯೆಯಾದ ದೇವಿಯನ್ನು ಪ್ರಾರ್ಥಿಸಿತು."

೨೪. "ಆಗ ದೇವಿಯು ಕರುಣೆಯಿಂದ ಮಿಥ್ಯಾದೃಷ್ಟಿಯೆಂಬುದು ಜನಿಸಿ ಆ ಮೋಹಕ್ಕೆ ಪ್ರಿಯಭಾರ್ಯೆಯೆನಿಸಿತು. ಆ ಮೋಹ ಮಿಥ್ಯಾದೃಷ್ಟಿ ಇವರಿಗೆ ಸ್ನೇಹವು ಪುತ್ರನಾಗಿ ಜನಿಸಿತು. ಆ ಸ್ನೇಹಕ್ಕೆ ಮಮತೆಯು ಪ್ರಿಯಪತ್ನಿಯಾದಳು"

೨೫. "ಸ್ನೇಹ, ಮಮತೆ ಇವುಗಳ ದೆಸೆಯಿಂದಲೇ ಶೋಕಯುಕ್ತವಾದ ದುಃಖವುಂಟಾಗುವುದು" ಎಂದು ಹೇಳಿದನು. ಆ ಸುಂದರಿಯು ಇದನ್ನು ಕೇಳಿ ಮನಸ್ಸಿನಲ್ಲಿ ಹೀಗೆ ಭಾವಿಸಿದಳು

**ಮಾನೀ ಶೂರಶ್ಚ ಚತುರೋಽಧಿಕಾರೀ ಗುಣವಾನ್ಸಖಾ ।**
**ಸ್ತ್ರೀರಕ್ಷಕಶ್ಚ ಪುರುಷೋ ವಶಂ ನಾರೀಂ ಸದಾ ನಯೇತ್ ॥ ೨೬ ॥**

**ತಸ್ಯೈ ಗರ್ಭಂ ಚ ವಿಪ್ರೋಽಸೌ ದತ್ತ್ವಾ ಸ್ವರ್ಣಂ ಗೃಹೀತವಾನ್ ।**
**ಸಾಪಿ ನಾರೀ ಸುಖಂ ಲೇಭೇ ತೇನ ಗರ್ಭೇಣ ಪ್ರತ್ಯಹಂ ॥ ೨೭ ॥**

**ಕದಾಚಿದ್ದಶಮಾಸಾಂತೇ ಮೋಹಿನೀಮಬ್ರವೀಚ್ಛಿವಃ ।**
**ಸ್ವಪ್ನಾಂತರೇ ಮಹಾರಾಜ ಸಾಪಿ ಜ್ಞಾತ್ವಾ ತಥಾಕರೋತ್ ॥ ೨೮ ॥**

**ದೋಲಾಮಧ್ಯೇ ಸಹಸ್ರಂ ಚ ಸ್ವರ್ಣಂ ಚೈವ ಸ್ವಬಾಲಕಂ ।**
**ರಾಜದ್ವಾರೇ ಸ್ಥಾಪಯಿತ್ವಾ ಸುಷ್ವಾಪ ಜನನೀ ಸುಖಂ ॥ ೨೯ ॥**

---

೨೬. ಇವನು ಸತ್ಪುರುಷ, ಅಭಿಮಾನಿ, ಶೂರ, ಜಾಣ, ಅಧಿಕಾರಸಮರ್ಥ, ಸುಗುಣವಂತ, ಸ್ನೇಹಪರ, ಮಾನಿನೀಮಾನಸಂರಕ್ಷಣಸಮರ್ಥ, ಎಂದು ಜನರಕೈಲಿ ಹೊಗಳಿಸಿಕೊಂಡು, ತನಗೆ ವಶಳಾದ ಸ್ತ್ರೀಯನ್ನು ಕೈಬಿಡದೆ, ಜೀವಮಾನವನ್ನು ಸಾಗಿಸತಕ್ಕವನು ಎಂದು ನಿರ್ಣಯಿಸಿ ಅವನಲ್ಲಿ ಮೋಹಪಟ್ಟಳು.

೨೭. ಬಳಿಕ ಆ ಕಾಶ್ಮೀರೀ ಬ್ರಾಹ್ಮಣನು ಅವಳನ್ನು ಪರಿಗ್ರಹಿಸಿದನು. ಕೆಲವು ದಿನದಲ್ಲಿ ಆಕೆ ಗರ್ಭವತಿಯಾದಳು, ಅವನಿಗೆ ಬೇಕಾದಷ್ಟು ಧನವನ್ನೂ ಕೊಟ್ಟಳು. ಹಾಗೆ ಗರ್ಭಿಣಿಯಾದುದರಿಂದ ಆ ಹೆಂಗಸು ತಾನೂ ಸುಖಿಯೆಂದು ಭಾವಿಸಿ ಹಾಯಾಗಿದ್ದಳು.

೨೮. ಆ ಗರ್ಭಿಣಿಗೆ ಹತ್ತುತಿಂಗಳಾಗುತ್ತಲೆ ಒಂದುದಿನ ಶಿವನು ಆಕೆಯ ಸ್ವಪ್ನದಲ್ಲಿ ಕಾಣಿಸಿಕೊಂಡು ಒಂದು ಮಾತನ್ನು ಹೇಳಿದನು. ಎಚ್ಚರವಾದಮೇಲೆ ಅವಳು ಆ ಮಾತಿನಂತೆ ನಡೆಸಬೇಕೆಂದು ನಿರ್ಧರಿಸಿದಳು

೨೯. ಅದರಂತೆ ಪ್ರಸುವಿಸಿದ ಮೇಲೆ ತನ್ನ ಮಗುವನ್ನು ತೊಟ್ಟಿಲಿನಲ್ಲಿ ಮಲಗಿಸಿ, ಅದರ ಹತ್ತಿರದಲ್ಲಿಯೇ ಸಾವಿರ ಸುವರ್ಣನಾಣ್ಯಗಳನ್ನು ಇಟ್ಟು, ಆ ತೊಟ್ಟಿಲನ್ನು ತಂದು ಅರಮನೆಯ ಬಾಗಿಲಮುಂದೆ ಇರಿಸಿ, ತಾನು ಮನೆಗೆ ಬಂದು ಸುಖವಾಗಿ ಮಲಗಿದಳು.

ಶಿವೇನ ಬೋಧಿತೋ ರಾಜಾ ಸುತಾರ್ಥೀ ರುದ್ರಪೂಜಕಃ ।
ದ್ವಿಜಪುತ್ರಂ ಸಮಾಲೇಭೇ ಮೋಹಿನ್ಯಾಂ ಜಾತಮುತ್ತಮಂ ॥ ೩೦ ॥

ಕಾರಯಿತ್ವಾ ಜಾತಕರ್ಮ ವಿತತಾರ ಧನಂ ಬಹು ।
ಹರದತ್ತಶ್ಚ ನಾಮ್ನಾ ಸೀತ್ಸರ್ವವಿದ್ಯಾವಿಶಾರದಃ ॥ ೩೧ ॥

ಪಿತುರಂತೇ ಚ ತದ್ರಾಜ್ಯಂ ಪ್ರಾಪ್ಯ ಧರ್ಮಂ ಪ್ರಕಾಶಯನ್ ।
ಗಯಾಶ್ರಾದ್ಧಂ ಕೃತಂ ತೇನ ಫಲ್ಗೂತೀರೇ ವಿಧಾನತಃ ॥ ೩೨ ॥

ತ್ರಯೋ ಹಸ್ತಾಸ್ತದಾ ಜಾತಾಃ ಸ ರಾಜಾ ವಿಸ್ಮಿತೋಽಭವತ್ ॥ ೩೩ ॥

ಇತ್ಯುಕ್ತ್ವಾ ಸ ತು ವೈತಾಲೋ ನೃಪತಿಂ ಪ್ರಾಹ ಭೋ ನೃಪ ।
ಕಸ್ಮೈ ಯೋಗ್ಯೋ ಹಿ ಪಿಂಡೋಽಸೌ ಶ್ರುತ್ವಾ ರಾಜಾಬ್ರವೀದಿದಂ॥ ೩೪ ॥

---

೩೦. ರಾಜನು ಸುತಾರ್ಥಿಯಾಗಿ ಆದಿನ ಶಿವನನ್ನು ವಿಶೇಷವಾಗಿ ಆರಾಧಿಸಿ ಬಳಿಕ, ಮಲಗಿ ನಿದ್ರಿಸುತ್ತಿದ್ದನು. ಆಕೆ ಮಗುವನ್ನಿಟ್ಟುಹೋದ ವೇಳೆಗೆ ಶಿವನು ರಾಜನಿಗೆ ಎಚ್ಚರವಾಗುವಂತೆ ಮಾಡಿದನು. ಎಚ್ಚರಗೊಂಡು ಹೊರಗೆ ಬಂದು, ತೊಟ್ಟಿಲಲ್ಲಿ ಮಲಗಿದ್ದ ಶ್ರೇಷ್ಠನಾದ ದ್ವಿಜ ಕುಮಾರನನ್ನು ಕಂಡು ಒಳಕ್ಕೆ ಕೊಂಡೊಯ್ದನು.

೩೧. ಅನಂತರ ಆ ಮಗುವಿಗೆ ಜಾತಕರ್ಮಮಹೋತ್ಸವವನ್ನು ಮಾಡಿಸಿ ಆ ಸಂದರ್ಭದಲ್ಲಿ ವಿಶೇಷ ದ್ರವ್ಯವನ್ನು ದಾನಮಾಡಿದನು. ಅಲ್ಲದೆ ಆ ಮಗುವಿಗೆ ಹರದತ್ತನೆಂದು ಹೆಸರಿಟ್ಟನು ಆ ಮಗು ದಿನದಿನಕ್ಕೆ ಬೆಳೆಯುತ್ತಾ ಕಾಲಕ್ರಮದಲ್ಲಿ ಸಕಲವಿದ್ಯೆಯಲ್ಲೂ ಪಾರಂಗತನಾದನು.

೩೨. ಕೆಲವು ದಿನದಮೇಲೆ ರಾಜನು ಮೃತನಾಗಲು, ಹರದತ್ತನು ತಾನೇ ರಾಜ್ಯ ಸೂತ್ರವನ್ನು ವಹಿಸಿ, ಧರ್ಮದಿಂದ ರಾಜ್ಯವಾಳತೊಡಗಿದನು. ಆತನು ತೀರ್ಥ ಯಾತ್ರೆಗೆ ಹೋಗಿ, ಫಲ್ಗೂ ನದೀತೀರದಲ್ಲಿ ಶಾಸ್ತ್ರೋಕ್ತವಾಗಿ ಗಯಾಶ್ರಾದ್ಧವನ್ನು ನೆರವೇರಿಸಿದನು.

೩೩. ಆ ಶ್ರಾದ್ಧದಲ್ಲಿ ಪಿಂಡಪ್ರದಾನ ಮಾಡುವಾಗ ಪಿಂಡಗ್ರಹಣಕ್ಕಾಗಿ ಮೂವರು ಕೈಗಳನ್ನು ನೀಡಲು, ಹರದತ್ತನು ಇದನ್ನು ನೋಡಿ ಆಶ್ಚರ್ಯಗೊಂಡನು.

೩೪. ಹೀಗೆಂದು ಬೇತಾಳವು ವಿಕ್ರಮರಾಜನಿಗೆ ಹೇಳಿ ವಿಕ್ರಮರಾಜನನ್ನು ಕುರಿತು " ಎಲೈ ರಾಜನೇ ! ಈ ವ್ಯಕ್ತಿಯು ಗಯಾಶ್ರಾದ್ಧದಲ್ಲಿ ಕೊಟ್ಟ ಪಿಂಡವು ಯಾರಿಗೆ ಸೇರತಕ್ಕದ್ದು ಸಾಧು ? ಅದನ್ನು ತಿಳಿಸು " ಎಂದಿತು.

ದ್ರವ್ಯಾರ್ಥೀ ಪಂಡಿತೋ ಜ್ಞೇಯೋ ಗುರುತುಲ್ಯಶ್ಚ ಭೂಪತಿಃ ।
ಚೌರಾಯ ಪಿಂಡ ಉಚಿತೋ ಯಸ್ಯ ನಾರೀ ಚ ಮೋಹಿನೀ　　॥ ೩೫ ॥

॥ ಸೂತ ಉವಾಚ ॥

ತೇನ ಪಿಂಡಪ್ರಭಾವೇನ ಸ ಚೌರೋ ಬ್ರಹ್ಮದ್ರವ್ಯಹಾ ।
ನಿರಯಾನ್ನಿಸ್ಸೃತೋ ವಿಪ್ರ ಸ್ವರ್ಗಲೋಕಂ ಸಮಾಗತಃ　　॥ ೩೬ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಅಷ್ಟಾದಶೋಽಧ್ಯಾಯಃ.



---

೩೫. ರಾಜನು ಇದನ್ನು ಕೇಳಿ "ಆ ಪಂಡಿತನು ದ್ರವ್ಯಾಶೆಯಿಂದ ಹಾಗೆ ನಡೆದುಕೊಂಡನು. ರಾಜನು ಗುರುವಿಗೆ ಸಮಾನನು ಆದುದರಿಂದ ಅವರಿಬ್ಬರಿಗೂ ಆ ಪಿಂಡವು ಸೇರಲು ಅವಕಾಶವಿಲ್ಲ. ಮೋಹಿನಿಯು ನಿಜವಾಗಿ ಯಾವನಿಗೆ ಪತ್ನಿಯಾಗಿದ್ದಳೋ ಆ ಕಳ್ಳನಿಗೇ ಈ ಪಿಂಡವು ಸಲ್ಲತಕ್ಕದ್ದು" ಎಂದು ನಿರೂಪಿಸಿದನು.

೩೬. ಸೂತಮುನಿವರ್ಯನು ಹೇಳುತ್ತಾನೆ—ಆ ಗಯಾಪಿಂಡಪ್ರದಾನ ಪ್ರಭಾವದಿಂದ ಕಳ್ಳನಾದ ಅವನಿಗೆ ಬ್ರಹ್ಮಸ್ವತ್ತನ್ನು ಅಪಹರಿಸಿದ ಪಾಪವು ಪರಿಹಾರವಾಗಿ ಅವನು ಸ್ವರ್ಗಲೋಕವನ್ನೈದಿದನು

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಪ್ರತಿಸರ್ಗಪರ್ವದ ದ್ವಿತೀಯ ಖಂಡದಲ್ಲಿ
ಕಲಿಯುಗದ ಇತಿಹಾಸಸಮುದಾಯವೆಂಬ ಹದಿನೆಂಟನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ಪ್ರಥಮಖಂಡೇ

## ಏಕೋನವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಚಿತ್ರಕೂಟೇ ಚ ನೃಪತೀ ರೂಪದತ್ತ ಇತಿ ಶ್ರುತಃ ।
ವನೇ ಮೃಗಪ್ರಸಂಗೇನ ವನಾಂತರಮುಪಾಯಯೌ ॥ ೧ ॥

ಮಧ್ಯಾಹ್ನೇ ಸರಸಸ್ತೀರೇ ಮುನಿಪುತ್ರೀಂ ದದರ್ಶ ಸಃ ।
ಚಿನ್ವತೀಂ ಪದ್ಮಕುಸುಮಂ ರೂಪಯೌವನಶಾಲಿನೀಂ ॥ ೨ ॥

ತಸ್ಯಾ ನೇತ್ರೇ ಸ್ವಯಂ ನೇತ್ರೇ ಚೈಕೀಭೂತೇ ಸಮಾಗತೇ ।
ಏತಸ್ಮಿನ್ನಂತರೇ ವಿಪ್ರಸ್ತತ್ರ ಪ್ರಾಪ್ತೋ ದದರ್ಶ ತೌ ॥ ೩ ॥

---

## ಹತ್ತೊಂಭತ್ತನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಚಿತ್ರಕೂಟ ಪ್ರಾಂತದಲ್ಲಿ ರೂಪದತ್ತನೆಂಬ ರಾಜನಿದ್ದನು. ಅವನು ಒಂದುದಿನ ಬೇಟೆಯಾಡುವುದಕ್ಕಾಗಿ ಅರಣ್ಯಕ್ಕೆ ಹೋದನು.

೨. ಆತನು ಮಧ್ಯಾಹ್ನದ ಸಮಯಕ್ಕೆ ಅಲ್ಲಿದ್ದ ಒಂದು ಸರೋವರದ ಸಮೀಪಕ್ಕೆ ಬಂದನು. ರೂಪವತಿಯೂ ಪ್ರಾಯಸಮರ್ಥೆಯೂ ಆದ ಋಷಿಪುತ್ರಿಯೊಬ್ಬಳು ಆ ಸರೋವರದ ತೀರದಲ್ಲಿ ಕಮಲಪುಷ್ಪಗಳನ್ನು ಕುಯ್ಯುತ್ತಿದ್ದುದನ್ನು ಕಂಡನು.

೩. ಇವನು ಆ ಮುನಿಪುತ್ರಿಯನ್ನು ಕುತೂಹಲದಿಂದ ನೋಡುತ್ತಿದ್ದಾಗ ಅವಳೂ ಇವನನ್ನು ಆಶೆಯಿಂದ ನೋಡಿದಳು. ಹೀಗೆ ಇಬ್ಬರ ದೃಷ್ಟಿಗಳೂ ಪರಸ್ಪರ ಮಿಳಿತವಾದುವು.

**ತಸ್ಯ ದರ್ಶನಮಾತ್ರೇಣ ನೃಪತೇರ್ಜ್ಞಾನಮಾಗತಂ ।**
**ವಿನಯಾವನತೋ ರಾಜಾ ಧರ್ಮಂ ಪಪ್ರಚ್ಛ ಚೋತ್ತಮಂ ॥ ೪ ॥**

**ತಮುವಾಚ ಮುನಿರ್ಧೀಮಾನ್ ದಯಾಧರ್ಮಪ್ರತೋಷಣಂ ।**
**ನಿರ್ಭಯಸ್ಯ ಸಮಂ ದಾನಂ ನ ಭೂತೋ ನ ಭವಿಷ್ಯತಿ ॥ ೫ ॥**

**ಅನರ್ಹಾನ್ ದಂಡಮಾದದ್ಯಾದರ್ಹಪೂಜಾಫಲಂ ಭವೇತ್ ।**
**ಮಿತ್ರತಾ ಗೋದ್ವಿಜೇ ನಿತ್ಯಂ ಸಮತಾ ದಂಡನಿಗ್ರಹೇ ॥ ೬ ॥**

**ಸತ್ಯತಾ ಸುರಪೂಜಾಯಾಂ ದಮತಾ ಗುರುಪೂಜನೇ ।**
**ಮೃದುತಾ ದಾನಸಮಯೇ ಸಂತುಷ್ಟಿರ್ನಿಂದ್ಯಕರ್ಮಣಿ ॥ ೭ ॥**

---

೪. ಅಷ್ಟುಹೊತ್ತಿಗೆ ಆ ಯುವತಿಯ ತಂದೆಯು ಅಲ್ಲಿಗೆ ಬಂದು ಆ ಸ್ಥಿತಿಯಲ್ಲಿದ್ದ ಅವರನ್ನು ಕಂಡನು. ಆ ವಿಪ್ರನನ್ನು ಕಂಡೊಡನೆ ರಾಜನಿಗೆ ಜ್ಞಾನೋದಯವಾಯಿತು. ಅವನು ವಿನಯದಿಂದ ಕೂಡಿ, ಆ ಋಷಿಯನ್ನು ನಮಸ್ಕರಿಸಿ, ಉತ್ತಮ ಧರ್ಮಸ್ವರೂಪ ವಿಚಾರವನ್ನು ಪ್ರಶ್ನಿಸಿದನು.

೫. ಪ್ರಾಜ್ಞನಾದ ಆ ಋಷಿಯು ರಾಜನನ್ನು ಕುರಿತು ಇಂತೆಂದನು—" ಮರೆಮೋಸವಿಲ್ಲದೆ ನಿರ್ಭಯವಾದ ನಡವಳಿಕೆಯುಳ್ಳವನನ್ನು ಧರ್ಮಕ್ಕೆ ವಿರೋಧವಿಲ್ಲದಂತೆ ಸಂತೋಷಪಡಿಸುವುದಕ್ಕೆ ಸಮವಾದ ದಾನವು ಹಿಂದೆ ನಡೆದುದಿಲ್ಲ, ಮುಂದೆ ನಡೆಯುವುದಿಲ್ಲ,

೬. ಅಯೋಗ್ಯರಿಗೆ ಶಿಕ್ಷೆ ವಿಧಿಸಲೇಬೇಕು. ಹೀಗೆಮಾಡಿದರೆ ಯೋಗ್ಯಜನರನ್ನು ಪೂಜಿಸಿದ್ದಕ್ಕೆ (ಸಾರ್ಥಕವಾಗುವುದು) ಫಲಬರುವುದು, ಗೋವುಗಳಲ್ಲಿಯೂ ದ್ವಿಜರಲ್ಲಿಯೂ, ಸದಾ ಪ್ರೀತಿ ತೋರಿಸುವುದರಿಂದ, ಶಿಕ್ಷಾರ್ಹರಾದವರನ್ನು ನಿಗ್ರಹಿಸಿದಂತೆ ಆಗುವುದು.

೭-೮. ಗುರುಹಿರಿಯರನ್ನು ಪೂಜಿಸುವಾಗ ಬಹಿರಿಂದ್ರಿಯಗಳನ್ನು ಚೆನ್ನಾಗಿ ನಿಗ್ರಹಿಸಬೇಕು. ದಾನಮಾಡುವಾಗ ಸೌಮ್ಯತೆಯಿಂದ ವರ್ತಿಸಬೇಕು, ನಿಂದಾರ್ಹವಾದ ಕಾರ್ಯಮಾಡಬೇಕಾದಾಗ ಸಂತುಷ್ಟನಾದವನಂತೆ ಅನಾಸಕ್ತನಾಗಬೇಕು" ಎಂದು ನಿರೂಪಿಸಿದನು. ಅಲ್ಲದೆ (ಧೈರ್ಯಶಾಲಿಯಾಗಿ ವರ್ತಿಸಿದ್ದರಿಂದ) ತನ್ನ ಮಗಳನ್ನು

ಇತ್ಯುಕ್ತ್ವಾ ಸ ಮುನಿಃ ಪುತ್ರೀಂ ತಸ್ಮೈ ದತ್ವಾ ಗೃಹಂ ಯಯೌ ।
ರಾಜಾಪಿ ಚ ತಯಾ ಸಾರ್ಧಂ ವಟಮೂಲೇ ಶಯೀತವಾನ್ ॥ ೮ ॥

ತದಾ ತು ರಾಕ್ಷಸಃ ಕಶ್ಚಿತ್ತತ್ಪತ್ನೀಭಕ್ಷಣೋತ್ಸುಕಃ ।
ಬೋಧಯಾಮಾಸ ನೃಪತಿಂ ಬಲಿಂ ತಸ್ಮೈ ಸ ಭೂಪತಿಃ ॥ ೯ ॥

ದಾನಾರ್ಥೇ ಚೈವ ಸಪ್ತಾಹೇ ಸಪ್ತವರ್ಷಾತ್ಮಕಂ ದ್ವಿಜಂ ।
ಸಮಯಂ ಕೃತವಾನ್ ರಾಜಾ ಸತ್ಯೇನ ಸ್ವಗೃಹಂ ಯಯೌ ॥ ೧೦ ॥

ಅಮಾತ್ಯೈಃ ಸಂಮತಂ ಕೃತ್ವಾ ಸ್ವರ್ಣಲಕ್ಷಂ ದದೌ ದ್ವಿಜೇ ।
ಮಧ್ಯಂ ಬಾಲಂ ಪುರಸ್ಕೃತ್ಯ ರಾಕ್ಷಸಾಯ ಬಲಿಂ ದಿದೌ ॥ ೧೧ ॥

ಮೃತ್ಯುಕಾಲೇ ದ್ವಿಜಸುತೋ ವಿಹಸ್ಯೋಚ್ಚೈ ರುರೋದ ಹ ।
ಕಥಂ ಹಾಸ್ಯಂ ಕೃತಂ ತೇನ ತತ್ಪಶ್ಚಾದ್ರೋದನಂ ಕಥಂ ॥ ೧೨ ॥

---

ಅವನಿಗೇ ದಾನಮಾಡಿ ತಾನು ತನ್ನ ಮನೆಗೆ ಹೋದನು ಬಳಿಕ ರಾಜನು ಆಕೆಯೊಡನೆ ಅಲ್ಲಿದ್ದ ಆಲದಮರದ ಕೆಳಗೆ ಮಲಗಿಕೊಂಡನು.

೯. ಆಗ ಒಬ್ಬ ರಾಕ್ಷಸನು ಅವನ ಹೆಂಡತಿಯನ್ನು ತಿಂದುಬಿಡಬೇಕೆಂದು ತವಕಪಟ್ಟು ರಾಜನನ್ನು ಎಬ್ಬಿಸಿ ಹೇಳಿದನು. ಇದನ್ನು ಕೇಳಿ ರಾಜನು, ಅವಳಿಗೆ ಬದಲಾಗಿ ಬೇರೆಯವರನ್ನು ಬಲಿಯಾಗಿ ಸಮರ್ಪಿಸುವೆನೆಂದು ವಚನಕೊಟ್ಟು ಸಂತೈಸಿದನು.

೧೦. ಭಾಷೆಕೊಟ್ಟಂತೆ ಏಳನೆಯದಿನ ಅವನಿಗೆ ಸಮರ್ಪಿಸುವುದಕ್ಕೋಸ್ಕರವಾಗಿ ಏಳುವರ್ಷದ ಬ್ರಾಹ್ಮಣ ಬಾಲಕನೊಬ್ಬನನ್ನು ಪತ್ತೆಮಾಡಿದನು. ಬಳಿಕ ತಾನು ಕೊಟ್ಟಭಾಷೆಯು ಸತ್ಯವಾಗಿ ನೆರವೇರುವುದೆಂದು ಮನಸ್ಸಿಗೆ ಸಮಾಧಾನ ತಂದುಕೊಂಡನು.

೧೧. ಬಳಿಕ ಊರಿಗೆ ಬಂದು ಮಂತ್ರಿಗಳೊಡನೆ ಆಲೋಚಿಸಿ ಆ ಕಾರ್ಯವನ್ನೇ ನಿಶ್ಚಯಿಸಿ, ಆ ಬಾಲಕನಿಗೋಸ್ಕರ ಅವನ ತಂದೆಗೆ ಒಂದುಲಕ್ಷ ಚಿನ್ನದಮೊಹರಗಳನ್ನು ಕೊಟ್ಟು, ಆ ಬ್ರಾಹ್ಮಣನ ನಡುಕಲ ಮಗನನ್ನು ಕರೆದುಕೊಂಡು ಬಂದು ಅವನನ್ನು ರಾಕ್ಷಸನಿಗೆ ಬಲಿಯಾಗಿ ಸಮರ್ಪಿಸಿದನು.

೧೨. ಸಾಯುವಾಗ ಆ ಬಾಲಕನು ಒಂದುಸಲ ನಕ್ಕು, ಅನಂತರ ಗಟ್ಟಿಯಾಗಿ ಅತ್ತನು" ಎಂದು ಹೇಳಿ ಬಳಿಕ " ಎಲೈ ರಾಜನೇ ! ಆ ಬಾಲಕನು ಮೊದಲು ನಕ್ಕದ್ದಕ್ಕೂ ಆ ಮೇಲೆ ಅತ್ತದ್ದಕ್ಕೂ ಕಾರಣವೇನು " ? ಎಂದು ಕೇಳಿದನು.

ಇತಿ ಶ್ರುತ್ವಾ ನೃಪಃ ಪ್ರಾಹ ಶೃಣು ವೈತಾಲಿಕ ದ್ವಿಜ ।
ಜ್ಯೇಷ್ಠಪುತ್ರೋ ಪಿತುರ್ಹೃದ್ಯಂ ಮಾತೃಹೃದ್ಯಮದಾರ್ಯಕಂ　　॥ ೧೩ ॥

ಜ್ಞಾತ್ವಾ ಸ ಮಧ್ಯಮಃ ಪುತ್ರೋ ರಾಜಾನಂ ಶರಣಂ ಯಯೌ ।
ನಿರ್ದಯೋ ರೂಪಸೇನಶ್ಚ ಪತ್ನೀಕಲ್ಯಾಣಭಿಕ್ಷುಕಃ　　॥ ೧೪ ॥

ಖಡ್ಗಹಸ್ತಂ ನೃಪಂ ಜ್ಞಾತ್ವಾ ಜಹಾಸ ಶಿವತತ್ಪರಃ ।
ರಾಕ್ಷಸಾಯ ಶರೀರಂ ಮೇ ಪ್ರಾಪ್ತಮಸ್ಮಾದ್ರುರೋದ ಹ　　॥ ೧೫ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಏಕೋನವಿಂಶೋಽಧ್ಯಾಯಃ.

---

೧೩. ಇದನ್ನು ಕೇಳಿ ವಿಕ್ರಮರಾಜನು "ಎಲೈ ಬೇತಾಳ ಸ್ವರೂಪನಾದ ವಿಪ್ರನೇ ! ಕೇಳು, ಹಿರಿಯ ಮಗನು ತಂದೆಗೆ ಪ್ರೀತಿಪಾತ್ರನು, ಕಿರಿಯ ಮಗನು ತಾಯಿಯ ಪ್ರೀತಿಗೆ ಪಾತ್ರನು".

೧೪. ":ಆದುದರಿಂದ ತಂದೆತಾಯಿಗಳಿಬ್ಬರನ್ನು ಪ್ರಾರ್ಥಿಸಿದರೂ ತನ್ನಿಷ್ಟ ಸಾಧನೆ ಅಸಾಧ್ಯವೆಂದು ತಿಳಿದು, ಆ ನಡುಕಲ ಮಗನು ರಾಜನನ್ನು ಮರೆಹೊಕ್ಕನು. ರೂಪಸೇನಮಹಾರಾಜನು ತನ್ನ ಹೆಂಡತಿಯು ಸುರಕ್ಷಿತಳಾಗಿ ಶುಭಹೊಂದಲಿ ಎಂದು ಮನದಲ್ಲಿ ತವಕಿಸುತ್ತಿದ್ದನು."

೧೫. "ಆದುದರಿಂದ ತನ್ನನ್ನು ಮರೆಹೊಕ್ಕ ಆ ಬಾಲಕನಲ್ಲಿ ಸ್ವಲ್ಪವಾದರೂ ಕೃಪೆಯಿಡದೆ, ನಿರ್ದಯನಾಗಿ, ಕತ್ತಿಹಿರಿದು ನಿಂತುದನ್ನು ನೋಡಿ, ಆ ಬಾಲನು ನಕ್ಕನು. ಅನಂತರ ಈಶ್ವರಧ್ಯಾನದಲ್ಲಿ ಆಸಕ್ತನಾಗಿ "ಆಹಾ ! ನನ್ನ ಶರೀರವು ರಾಕ್ಷಸನಿಗೆ ತುತ್ತಾಗಬೇಕಾಯಿತೇ ! ಎಂಬ ವಿಚಾರಕ್ಕಾಗಿ ಅತ್ತನು" ಎಂದು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ ಖಂಡದಲ್ಲಿ
ಕಲಿಯುಗದ ಇತಿಹಾಸಸಮುದಾಯವೆಂಬ ಹತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ

## ವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಇತಿ ಶ್ರುತ್ವಾ ಸ ವೈತಾಲೋ ನೃಪಂ ಪ್ರಾಹ ಪುನಃ ಕಥಾಂ ।
ವಿಶಾಲನಗರೇ ರಮ್ಯೇ ವಿಪುಲೇಶೋ ಮಹೀಪತಿಃ ॥ ೧ ॥

ತಸ್ಯ ಗ್ರಾಮೇವಸದ್ವೈಶ್ಯೋಽರ್ಥದತ್ತೋ ವಿಪಣೇ ರತಃ ।
ಅನಂಗಮಂಜರೀ ಕನ್ಯಾ ತಸ್ಯ ಜಾತಾ ಮನೋರಮಾ ॥ ೨ ॥

---

## ಇಪ್ಪತ್ತನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಇದನ್ನು ಕೇಳಿದ ಬೇತಾಳವು ರಾಜನನ್ನು ಕುರಿತು, ಪುನಃ ಮತ್ತೊಂದು ಕಥೆಯನ್ನು ಹೇಳಲು ಆರಂಭಿಸಿತು. “ವಿಶಾಲನಗರವೆಂಬ ಸುಂದರವಾದ ಪಟ್ಟಣದಲ್ಲಿ ವಿಪುಲೇಶನೆಂಬವನು ರಾಜನಾಗಿದ್ದನು.

೨. “ಆ ನಗರದಲ್ಲಿ ಸದಾ ವ್ಯಾಪಾರದಲ್ಲಿ ನಿರತನಾದ ಅರ್ಥದತ್ತನೆಂಬ ವೈಶ್ಯನಿದ್ದನು. ಅವನಿಗೆ ಸುಂದರಿಯಾದ ಅನಂಗಮಂಜರಿಯೆಂಬ ಕನ್ಯೆ ಹುಟ್ಟಿದಳು.”

**ಸುವರ್ಣನಾಮ್ನೇ ವೈಶ್ಯಾಯ ಪಿತಾ ವೈ ದತ್ತವಾನ್ ಸ್ವಯಂ ।**
**ಕದಾಚಿತ್ಕಮಲಗ್ರಾಮಾತ್ ಸುವರ್ಣೋ ದ್ವೀಪಮಾಗಮತ್ ।**
**ದ್ರವ್ಯಲಾಭಾಯ ನ್ಯವಸಚ್ಚಿರಂ ಕಾಲಂ ಸ ಲುಬ್ಧವಾನ್ ॥ ೩ ॥**

**ಅನಂಗಮಂಜರೀಗೇಹೇ ದೈವಯೋಗಾದ್ವಿಜೋತ್ತಮಃ ।**
**ಕಮಲಾಕರನಾಮಾಸೌ ಕೃತ್ಯಯೋಗಾತ್ಸಮಾಗತಃ ॥ ೪ ॥**

**ಹೋಮಾಂತೇ ಸುಂದರೀ ನಾರೀ ಮಾರ್ಜನಾರ್ಥೇ ಸುತಾ ಗತಾ ।**
**ದೃಷ್ಟ್ವಾ ತಾಂ ಕಾಮುಕಲಿಕಾಂ ಮುಮೋಹ ದ್ವಿಜಸತ್ತಮಃ ॥ ೫ ॥**

**ಸುತಾಪಿ ಮದಘೂರ್ಣಾಕ್ಷೀ ವಿಪ್ರಾಯ ಸಮಯಂ ದದೌ ।**
**ನಿಶೀಥೇ ತಮಲುದ್ಭೂತೇ ತ್ವಂ ಮಾಂ ಪ್ರಾಪ್ಯ ಸುಖೀ ಭವ ॥ ೬ ॥**

**ಇತಿ ಶ್ರುತ್ವಾ ದ್ವಿಜೋ ವಾಕ್ಯಂ ತಸ್ಯಾ ಧ್ಯಾನಂ ತದಾಕರೋತ್ ।**
**ಕಾಮಾಗ್ನಿನಾ ಚಿರಂ ತಪ್ತಃ ಸುಷ್ವಾಪ ಪರಮಾಸನೇ ॥ ೭ ॥**

---

೩. "ಆ ವೈಶ್ಯನು ಆಕೆಯನ್ನು ಸುವರ್ಣನೆಂಬ ಹೆಸರುಳ್ಳ ವೈಶ್ಯನಿಗೆ ಕೊಟ್ಟು ಮದುವೆಮಾಡಿದನು. ಒಂದುದಿನ ಆ ಸುವರ್ಣನು ತನ್ನ ನಿವಾಸವಾದ ಕಮಲಪುರದಿಂದ ವ್ಯಾಪಾರಾರ್ಥವಾಗಿ ಹೊರಟು ದ್ವೀಪಾಂತರಕ್ಕೆ ಹೋದನು. ದ್ರವ್ಯಲಾಭಾಶೆಯುಳ್ಳ ಆ ಲೋಭಿಯು ಅಲ್ಲಿಯೇ ಬಹುದಿನ ನಿಂತುಬಿಟ್ಟನು."

೪. "ಒಂದುದಿನ ಕಮಲಾಕರನೆಂಬ ಬ್ರಾಹ್ಮಣಶ್ರೇಷ್ಠನು ಪೌರೋಹಿತ ಮಾಡಿಸುವುದಕ್ಕಾಗಿ ಅದೃಷ್ಟವಶಾತ್ ಅನಂಗಮಂಜರಿಯ ಮನೆಗೆ ಬಂದನು".

೫-೬. "ಹವನಹೋಮಗಳು ಮುಗಿದಮೇಲೆ ಸುಂದರಿಯಾದ ಈ ಹುಡುಗಿಯು ಮಾರ್ಜನೆಗಾಗಿ ಅಲ್ಲಿಗೆ ಬಂದಳು. ಮನ್ಮಥನ ಕೈಯ ಕುಸುಮದ ಮೊಗ್ಗಿನಂತಿರುವ ಅವಳನ್ನು ನೋಡಿ, ಬ್ರಾಹ್ಮಣನು ಮೋಹಗೊಂಡನು. ಆ ಯುವತಿಯೂ ಸಹ ಮೋಹಾವೇಶದಿಂದ ಚಂಚಲದೃಷ್ಟಿಯುಳ್ಳವಳಾಗಿ ರಾತ್ರಿ ಕತ್ತಲೆಯಾದಮೇಲೆ ನೀನು ಬಂದು ನನ್ನಲ್ಲಿ ಸುಖಿಸು" ಎಂದು ಆ ಬ್ರಾಹ್ಮಣನಿಗೆ ಸಂಕೇತಮಾಡಿ ತಿಳಿಸಿದಳು.

೭. ಆ ಬ್ರಾಹ್ಮಣನೂ ಆ ಸಂಕೇತವನ್ನು ಅರಿತು, ಆವಳ ಧ್ಯಾನದಲ್ಲೇ ತತ್ಪರನಾಗಿ, ಕಾಮಾಗ್ನಿಯಿಂದ ಸಂತಪ್ತನಾಗಿ ತನ್ನ ಆಸನದಲ್ಲಿ ಮಲಗಿದನು.

ಅರ್ಧರಾತ್ರೇ ತು ಸಾ ನಾರೀ ದ್ವಿಜಾಗಮನತತ್ಪರಾ ।
ಮಾರ್ಗಮನ್ವೇಷಮಾಣಾ ಸಾ ಪ್ರಿಯಸ್ಯ ಸ್ಮರಪೀಡಿತಾ ॥ ೮ ॥

ನಾಗತಃ ಸ ದ್ವಿಜೋ ದೈವಾತ್ತದಾ ಸಾ ಮರಣಂ ಗತಾ ।
ಕಮಲಾಕರ ಏವಾಶು ಸಮಯಾಂತೇ ಸಮಾಯಯೌ ॥ ೯ ॥

ದೃಷ್ಟ್ವಾ ಮೃತ್ಯುವಶಾಂ ಸುಭ್ರೂಂ ಸ್ವಯಂ ಮರಣಮಾಗತಃ ।
ಪ್ರಭಾತೇ ಚಾರ್ಥದತ್ತೋ ವೈ ದಾಹಯಾಮಾಸ ತಾಂ ಶುಚಾ ॥ ೧೦ ॥

ಸುವರ್ಣಶ್ಚ ತದಾಗತ್ಯ ವಿಲಲಾಪ ಪ್ರಿಯಾಂ ಪ್ರತಿ ।
ಚಿತಾಯಾಂ ಭಸ್ಮಸಾದ್ಭೂತ್ವಾ ಸ್ವರ್ಗಲೋಕೇ ತು ಸಾ ಯಯೌ ॥ ೧೧ ॥

ಇತ್ಯುಕ್ತ್ವಾ ಸ ತು ವೈತಾಲೋ ನೃಪತಿಂ ಪ್ರಾಹ ವಿಕ್ರಮಂ ।
ಕಸ್ಯ ಸ್ನೇಹೋಽಧಿಕಸ್ತೇಷಾಂ ಕುತಃ ಸ್ವರ್ಗಪುರಂ ಯಯೌ ॥ ೧೨ ॥

---

೮. ಅರ್ಧರಾತ್ರಿಯಾದಮೇಲೆ ಆ ನಾರಿಯು ಪ್ರಿಯನಾದ ಬ್ರಾಹ್ಮಣನ ಆಗಮನವನ್ನು ನಿರೀಕ್ಷಿಸುತ್ತಾ ಮದನಾತುರೆಯಾಗಿ ತವಕಿಸುತ್ತಿದ್ದಳು.

೯. ಎಷ್ಟು ಹೊತ್ತು ನಿರೀಕ್ಷಿಸಿದರೂ ತನ್ನ ಪ್ರಿಯನಾದ ಆ ವಿಪ್ರನು ಬಾರದೆ ಹೋಗಲು, ಅವಳು ಸಹಿಸಲಾರದೆ ದೈವವಶದಿಂದ ಮೃತಿಹೊಂದಿದಳು. ಕಮಲಾಕರ ನಾದರೋ ಸಮಯ ಮುಂಚಿಹೋದಮೇಲೆ ಅಲ್ಲಿಗೆ ಬಂದನು.

೧೦. ಶೋಭನಾಂಗಿಯಾದ ಪ್ರಿಯೆಯು ಮೃತಳಾಗಿ ಬಿದ್ದಿರುವುದನ್ನು ನೋಡಿ, ಇನ್ನು ತಾನು ಬದುಕಿರಬಾರದೆಂದು ಮೃತನಾದನು. ಬೆಳಗಾಗುತ್ತಲೆ ತಂದೆಯಾದ ಅರ್ಥದತ್ತನು ಬಹುವಾಗಿ ದುಃಖಿಸಿ ಮಗಳಿಗೆ ದಹನಾದಿ ಸಂಸ್ಕಾರಗಳನ್ನು ನಡೆಯಿಸಿದನು.

೧೧. ಇಷ್ಟರಲ್ಲಿ ದ್ವೀಪಾಂತರಕ್ಕೆ ಹೋಗಿದ್ದ ಸುವರ್ಣನೂ ಕೂಡ ಹಿಂದಿರುಗಿ ಬಂದು ಪ್ರಿಯೆಯ ವಿಚಾರವನ್ನು ತಿಳಿದು ಗೋಳಾಡಿದನು. ಅವಳಾದರೋ ಚಿತಿಯಲ್ಲಿ ಭಸ್ಮೀಭೂತಳಾಗಿ ಸ್ವರ್ಗವನ್ನು ಸೇರಿದಳು.

೧೨. ಈರೀತಿ ಆ ಬೇತಾಳವು ರಾಜನಿಗೆ ಹೇಳಿ ಅವನನ್ನು ಕುರಿತು "ಇವರುಗಳಲ್ಲಿ ಯಾರ ಸ್ನೇಹವು ಅತಿಶಯವಾದುದು ? ಆಕೆಗೆ ಯಾರಿಂದ ಸ್ವರ್ಗಲೋಕ ಪ್ರಾಪ್ತಿಯಾಯಿತು ?" ಎಂದು ಕೇಳಿತು.

॥ ರಾಜೋವಾಚ ॥

ಪತಿಸ್ನೇಹೋಧಿಕಸ್ತೇಷಾಂ ಮಧ್ಯಮೌ ನಾರಿವಿಪ್ರಕೌ ।
ದ್ವಿಜಸ್ನೇಹೇನ ಸಾ ನಾರೀ ಮೃತಾ ಸ್ವರ್ಗಪುರಂ ಯಯೌ ॥ ೧೩ ॥

ವೈಶ್ಯವರ್ಣೈಃ ಸದಾ ಪೂಜ್ಯೋ ಬ್ರಾಹ್ಮಣೋ ಬ್ರಹ್ಮಮೂರ್ತಿಮಾನ್॥೧೪॥

ದ್ವಿಜೋಽಪಿ ನಾಪ್ತವಾನ್ನಾರೀಂ ತದಾ ಸ್ವರ್ಗಗತಿಂ ಹರಿಂ ।
ಹೃದಿ ಕೃತ್ವಾ ಚ ನಿಧನಂ ಪ್ರಾಪ್ತೋ ಹ್ಯಸ್ಮಾತ್ತ್ರಿವಿಷ್ಟಪಂ ॥ ೧೫ ॥

ಸುವರ್ಣೋ ಹೃದಿ ಸಂಜ್ಞಾಯ ಮತ್ಪ್ರಿಯಾ ಬ್ರಹ್ಮವತ್ಸಲಾ ।
ಮಾಂ ತ್ಯಕ್ತ್ವಾ ತು ದಿವಂ ಯಾತಾ ವಹ್ನಿದಾಹಪ್ರಭಾವತಃ ॥ ೧೬ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
ಕಲಿಯುಗೀಯೇತಿಹಾಸಸಮುಚ್ಚಯೇ ವಿಂಶೋಽಧ್ಯಾಯಃ.

---

೧೩. ಅದಕ್ಕೆ ರಾಜನು "ಇವರುಗಳಲ್ಲಿ ಆಕೆಯ ನಿಜಪತಿಯ ಸ್ನೇಹವೇ ಹೆಚ್ಚಾದುದು. ಆ ನಾರಿಯ ಸ್ನೇಹವೂ ಬ್ರಾಹ್ಮಣನ ಸ್ನೇಹವೂ ಮಧ್ಯಮವಾದುದು. ಆಕೆಯು ದ್ವಿಜನ ಸ್ನೇಹವಶದಿಂದ ಮೃತಳಾಗಲಾಗಿ ಸ್ವರ್ಗವನ್ನು ಹೊಂದಿದಳು".

೧೪-೧೫ ಬ್ರಹ್ಮಸ್ವರೂಪಿಯಾದ ಬ್ರಾಹ್ಮಣನು ವೈಶ್ಯರಿಂದ ಪೂಜಿಸಿಕೊಳ್ಳಲು ಯಾವಾಗಲೂ ಅರ್ಹನು. ಬ್ರಾಹ್ಮಣನೂ ಸಹ ಆ ನಾರಿಯನ್ನು ಹೊಂದದೆ ಆ ದುಃಖದಲ್ಲಿಯೂ ಸ್ವರ್ಗಮೋಕ್ಷಪ್ರದನಾದ ವಿಷ್ಣುವನ್ನು ಧ್ಯಾನಿಸುತ್ತಾ ಮರಣ ಹೊಂದಿದನಾದುದರಿಂದ ಅವನೂ ಸ್ವರ್ಗಕ್ಕೆ ಹೋದನು.

೧೬. ಸುವರ್ಣನೂ ಸಹ "ನನ್ನ ಪತ್ನಿಯು ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವಳಾಗಿದ್ದಳು. ಆದರಿಂದಲೇ ಅವಳು ನನ್ನನ್ನು ಬಿಟ್ಟು ಅಗ್ನಿದಹನ ಸಂಸ್ಕಾರ ಪ್ರಭಾವದಿಂದ ಸ್ವರ್ಗವನ್ನು ಸೇರಿದಳು ಎಂಬದಾಗಿ ಮನದಲ್ಲಿ ಸಂತೈಸಿಕೊಂಡನು" ಎಂಬದಾಗಿ ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ದ್ವಿತೀಯ ಖಂಡದಲ್ಲಿ
ಕಲಿಯುಗದ ಇತಿಹಾಸಸಮುದಾಯವೆಂಬ ಇಪ್ಪತ್ತನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ಏಕವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಇತ್ಯುಕ್ತ್ವಾ ಸ ತು ವೈತಾಲೋ ರಾಜಾನಂ ಪ್ರಾಹ ನಮ್ರಧೀಃ ।
ಜಯಸ್ಥಲಪುರೇ ರಮ್ಯೇ ವರ್ಧಮಾನೋ ನೃಪೋಽಭವತ್ ॥ ೧ ॥

ತಸ್ಯ ಗ್ರಾಮೋಽವಸದ್ವಿಪ್ರೋ ವೇದವೇದಾಂಗಪಾರಗಃ ।
ವಿಷ್ಣುಸ್ವಾಮೀತಿ ವಿಖ್ಯಾತೋ ರಾಧಾಕೃಷ್ಣಪರಾಯಣಃ ॥ ೨ ॥

ಚತ್ವಾರಶ್ಚಾತ್ಮಜಾಸ್ತಸ್ಯ ಚತುರ್ಭಾಗಪರಾಯಣಾಃ ।
ದ್ಯೂತಕರ್ಮಾ ಚ ಕುಲಟೋ ವಿಷಯೀ ನಾಸ್ತಿಕಃ ಶ್ರುತಃ ॥ ೩ ॥

---

## ಇಪ್ಪತ್ತೊಂದನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಈರೀತಿ ಹೇಳಿ ಆ ಬೇತಾಳವು ನಮ್ರನಾಗಿ ರಾಜನನ್ನು ಕುರಿತು "ಅಯ್ಯಾ ವಿಕ್ರಮನೇ! ಕೇಳು, ಜಯಸ್ಥಳವೆಂಬ ಸುಂದರವಾದ ಪಟ್ಟಣದಲ್ಲಿ ವರ್ಧಮಾನನೆಂಬ ರಾಜನಿದ್ದನು.

೨. ಅವನ ರಾಜಧಾನಿಯಲ್ಲಿ ವೇದವೇದಾಂಗಪಾರಂಗತನೂ ರಾಧಾಕೃಷ್ಣರ ಧ್ಯಾನದಲ್ಲಿ ಆಸಕ್ತನೂ ಆದ ಕೃಷ್ಣಸ್ವಾಮಿಯೆಂಬ ಬ್ರಾಹ್ಮಣನು ವಾಸಿಸುತ್ತಿದ್ದನು.

೩. ಅವನಿಗೆ ನಾಲ್ಕುಮಂದಿ ಮಕ್ಕಳು. ಒಂದನೆಯವನು ಜೂಜಾಟದಲ್ಲೂ, ಎರಡನೆಯವನು ವೇಶ್ಯಾಸಂಗದಲ್ಲೂ, ಮೂರನೆಯವನು ಸದಾ ವಿಷಯಲಂಪಟತೆಯಲ್ಲೂ, ನಾಲ್ಕನೆಯವನು ನಾಸ್ತಿಕತೆಯಲ್ಲೂ ಪರಾಯಣರಾಗಿ ನಿಪುಣರೆನಿಸಿಕೊಂಡಿದ್ದರು.

**ಕದಾಚಿದ್ದೈವಯೋಗೇನ ನಿರ್ಧನತ್ವಂ ಚ ತೇ ಗತಾಃ ।**
**ಪಿತರಂ ವಿಷ್ಣುಶರ್ಮಾಣಂ ನೇಮುಸ್ತೇ ವಿನಯಾನ್ವಿತಾಃ ॥ ೪ ॥**

**ಊಚೂ ರಮಾ ಕಥಂ ನಷ್ಟಾ ತದ್ವದಸ್ವ ಪಿತಃ ಪ್ರಿಯ ।**
**ಪಿತೋವಾಚ ತು ತಚ್ಛ್ರುತ್ವಾ ದ್ಯೂತಕರ್ಮನ್ನಿಶಾಮಯ ॥ ೫ ॥**

**ದ್ಯೂತೋ ಧನವ್ಯಯಕರಃ ಪಾಪಮೂಲೋ ಮಹಾಖಲಃ ।**
**ವ್ಯಭಿಚಾರಸ್ತಥಾ ಚೌರ್ಯಂ ನಿರ್ದಯತ್ವಮತೋ ಭವೇತ್ ।**
**ದ್ಯೂತಕರ್ಮಪ್ರಭಾವೇಣ ತ್ವದೀಯದ್ರವ್ಯಸಂಕ್ಷಯಃ ॥ ೬ ॥**

**ಧನೋಪಾಯೇನ ಭೋಃ ಪಿತ್ರೋರ್ವಾಕ್ಯಂ ಕುರು ಮತಿಂ ಪ್ರತಿ ।**
**ತೀರ್ಥವ್ರತಪ್ರಭಾವೇಣ ತ್ವತ್ಪಾಪಂ ಸಂಕ್ಷಯಂ ವ್ರಜೇತ್ ॥ ೭ ॥**

---

೪. ಕಾಲಕ್ರಮದಲ್ಲಿ ಅವರೆಲ್ಲರೂ ದರಿದ್ರರಾಗಿ, ತಂದೆಯಾದ ವಿಷ್ಣುಸ್ವಾಮಿ (ವಿಷ್ಣುಶರ್ಮ) ಯ ಸನ್ನಿಧಿಗೆ ಬಂದು ವಿನಯದಿಂದ ನಮಸ್ಕರಿಸಿದರು.

೫. ಬಳಿಕ ಅವರು "ಪೂಜ್ಯ ತಂದೆಯೇ! ನಮ್ಮ ಐಶ್ವರ್ಯಲಕ್ಷ್ಮಿಯು ನಮ್ಮನ್ನು ಏಕೆ ತೊರೆದಳು, ಇದನ್ನು ಕೃಪೆಮಾಡಿ ತಿಳಿಸಬೇಕು" ಎಂದು ಕೇಳಿಕೊಂಡರು.

೬-೭. ಆಗ ತಂದೆಯು ಜೂಜುಕೋರನಾದ ಮೊದಲನೆಯ ಮಗನನ್ನು ಕುರಿತು "ಪುತ್ರಾ! ಕೇಳು, ಜೂಜು ದ್ರವ್ಯನಾಶಕವಾದುದು. ಅಲ್ಲದೆ ಪಾಪಕ್ಕೂ ಕಾರಣವಾಗಿ ಬಹು ದುಷ್ಟವು ಎನಿಸುವುದು. ವ್ಯಭಿಚಾರ, ಕಳ್ಳತನ, ನಿಷ್ಕರುಣ, ಇವೆಲ್ಲಾ ಈ ಜೂಜನ್ನು ಹಿಂಬಾಲಿಸಿಯೇ ಇರುವುವು. ಈ ಜೂಜಿನ ಪ್ರಭಾವದಿಂದಲೇ ಐಶ್ವರ್ಯವೆಲ್ಲಾ ನಾಶವಾಯಿತು. ತಂದೆಯಾದ ನನ್ನ ಮಾತಿನಲ್ಲಿ ವಿಶ್ವಾಸವಿಟ್ಟು ಈಗಲೂ ನೀನು ತೀರ್ಥಯಾತ್ರೆಮಾಡು, ಆ ತೀರ್ಥಕ್ಷೇತ್ರ ವ್ರತಪ್ರಭಾವದಿಂದ ನಿನ್ನ ಪಾಪವು ಧ್ವಂಸವಾಗಿ ಪುನಃ ದ್ರವ್ಯವು ಲಭಿಸುವುದು. ಇದೇ ನಿನಗೆ ಧನಸಂಪಾದನೋಪಾಯವು" ಎಂಬದಾಗಿ ಉಪದೇಶಿಸಿದನು.

ಹೇ ಪುತ್ರ ಕುಲಟೆ ತ್ವಂ ವೈ ವೇಶ್ಯಾಸಂಗಂ ಮಹಾಶುಭಂ ।
ತ್ಯಕ್ತ್ವಾ ಬ್ರಹ್ಮಪರೋ ಭೂತ್ವಾ ಬ್ರಹ್ಮಚರ್ಯೇ ಮತಿಂ ಕುರು ॥ ೮ ॥

ವಿಷಯಿನ್ ಮಾಂಸಮದಿರೇ ನಿತ್ಯಪಾಪವಿವರ್ಧಿಕೇ ।
ಅತಃ ಪ್ರಾಪ್ಸ್ಯಸಿ ಚೌರ್ಯತ್ವಮತೋ ವೈ ನಿರಯಸ್ತಥಾ ॥ ೯ ॥

ತಸ್ಮಾತ್ತ್ವಂ ಪ್ರಭುಮೀಶಾನಂ ವಿಷ್ಣುಂ ಜಿಷ್ಣುಂ ಜಗತ್ಪತಿಂ ।
ನಿವೇದ್ಯ ಸರ್ವದಾ ದ್ರವ್ಯಂ ಭುಂಜೀಥಾ ವಾಗ್ಯತಃ ಸ್ವಯಂ ॥ ೧೦ ॥

ನಾಸ್ತಿಕತ್ವಂ ದೇವನಿಂದಾಂ ಪರಿತ್ಯಜ್ಯ ಮತಿಂ ಕುರು ।
ಆತ್ಮಾ ಸರ್ವಾಭಯೋ ನಿತ್ಯಮಾತ್ಮಶಕ್ತಿಶ್ಚ ಚಂಡಿಕಾ ॥ ೧೧ ॥

---

೮. ವೇಶ್ಯಾಸಕ್ತನಾದ ಎರಡನೆಯ ಮಗನನ್ನು ಕುರಿತು “ವತ್ಸಾ ! ವೇಶ್ಯಾ ಸಂಗವು ಮಹಾಪಾಪಕರವಾದುದು. ಆದುದರಿಂದ ಅದನ್ನು ಬಿಟ್ಟು, ಬ್ರಹ್ಮಚರ್ಯ ದಿಂದಿದ್ದು ಬ್ರಹ್ಮಪರನಾಗಿ ವರ್ತಿಸು. ಇದರಿಂದ ನಿನಗೆ ಸುಖವಾಗುವುದು” ಎಂದು ತಿಳಿಸಿದನು.

೯-೧೦. ಅನಂತರ ಸದಾ ವಿಷಯಲಂಪಟನಾದ ಮೂರನೆಯ ಮಗನನ್ನು ಕುರಿತು “ಕುಮಾರಾ ! ಮದ್ಯಮಾಂಸ ಸೇವನೆಯು ನಿತ್ಯವೂ ನಿನ್ನ ಪಾಪವನ್ನು ಹೆಚ್ಚಿಸತಕ್ಕದ್ದು. ಇವುಗಳ ಸೇವನೆಯ ಅಭ್ಯಾಸವು ಕಳ್ಳತನಕ್ಕೆ ಮೂಲ, ಅದರಿಂದ ನರಕಪ್ರಾಪ್ತಿಯು ಖಂಡಿತ, ಆದುದರಿಂದ ನೀನು ಸರ್ವಸಮರ್ಥನೂ ಜಗತ್ಪತಿಯೂ ಜಗದ್ವ್ಯಾಪಕನೂ ಆದ ವಿಷ್ಣುವನ್ನು ಸೇವೆಮಾಡಿ, ಸರ್ವಪ್ರಕಾರದಿಂದಲೂ ವಾಙ್ನಿಯಮ (ಮೌನ) ವುಳ್ಳವನಾದರೆ ಭಾಗ್ಯವನ್ನು ಹೊಂದುವೆ” ಎಂಬದಾಗಿ ನಿರೂಪಿಸಿದನು.

೧೧. ನಾಸ್ತಿಕನಾದ ನಾಲ್ಕನೆಯ ಮಗನನ್ನು ಕುರಿತು “ಎಲೈ ನಾಸ್ತಿಕನೇ ! ನೀನು ದೇವನಿಂದೆಯನ್ನು ಬಿಟ್ಟು ದೈವಭಕ್ತಿಯನ್ನು ಹೊಂದು, ಪರಮಾತ್ಮನು ಸರ್ವರಿಗೂ ಅಭಯಕೊಡತಕ್ಕವನು, ಶಾಶ್ವತನು, ಪರಮಾತ್ಮಶಕ್ತಿಯೇ ಚಂಡಿಕಾ ಸ್ವರೂಪವು”.

ಆತ್ಮನೋಂಗಾನಿ ದೇವಾಶ್ಚ ಸರ್ವಜೀವಗುಹಾಶಯಾಃ ।
ತಾನ್ ಜ್ಞಾತ್ವಾ ಪೂಜನಂ ತೇಷಾಂ ಕುರು ತ್ವಂ ಪಾಪಶಾಂತಯೇ ॥ ೧೨ ॥

ಇತಿ ತೇ ವಚನಂ ಶ್ರುತ್ವಾ ಗತಾಸ್ತೀರ್ಥಾಂತರಂ ಪ್ರತಿ ।
ಶಿವಮಾರಾಧಯಾಮಾಸುರ್ವಿದ್ಯಾರ್ಥೇ ಸರ್ವರೂಪಿಣಂ ॥ ೧೩ ॥

ವರ್ಷಾಂತೇ ಚ ಮಹಾದೇವೋ ವಿದ್ಯಾಂ ಸಂಜೀವನೀಂ ದದೌ ।
ತೇ ಪ್ರಾಪ್ಯ ವನಮಾಗತ್ಯ ಪರೀಕ್ಷಾರ್ಥೇ ಸಮುದ್ಯತಾಃ ॥ ೧೪ ॥

ಮೃತವ್ಯಾಘ್ರಾಸ್ಥಿನಿ ಜ್ಯೇಷ್ಠೋ ಮಂತ್ರಪೂತಾಂಬು ಚಾಕ್ಷಿಪತ್ ।
ತೇನ ಮಂತ್ರಪ್ರಭಾವೇಣ ಪಂಜರತ್ವಮುಪಾಗತಂ ॥ ೧೫ ॥

---

೧೨. "ಪರಮಾತ್ಮನ ಅವಯುವಗಳೇ ದೇವತೆಗಳು, ಸರ್ವರ ಜೀವಾತ್ಮಗಳಿಗೂ ಆಶ್ರಯವಾದುವು. ಇದನ್ನು ತಿಳಿದು ಅವನ್ನು ಭಕ್ತಿಯಿಂದ ಪೂಜಿಸಿದರೆ ನಿನ್ನ ಪಾಪವು ನಿವಾರಣೆಯಾಗುವುದು" ಎಂದು ಹೇಳಿದನು.

೧೩. ತಂದೆಯು ಈ ಪ್ರಕಾರ ಹೇಳಿದುದನ್ನು ಅವರೆಲ್ಲರೂ ಕೇಳಿ, ಜ್ಞಾನ ಪ್ರಾಪ್ತಿಗಾಗಿಯೂ, ಐಶ್ವರ್ಯಪ್ರಾಪ್ತಿಗಾಗಿಯೂ ತೀರ್ಥಯಾತ್ರೆಮಾಡಲು ಹೊರಟರು. ಪವಿತ್ರವಾದ ಕ್ಷೇತ್ರದಲ್ಲಿ ಸರ್ವಾಂತರ್ಯಾಮಿಯಾದ ಪರಶಿವನನ್ನು ವಿಶೇಷವಾಗಿ ಪೂಜಿಸಿದರು.

೧೪. ಒಂದುವರ್ಷ ಈರೀತಿ ಅನುಷ್ಠಾನ ಮಾಡಿದಮೇಲೆ ಪರಶಿವನು ಪ್ರತ್ಯಕ್ಷನಾಗಿ ಅವರಿಗೆ ಸಂಜೀವಿನೀ ಮಂತ್ರವನ್ನು ತಿಳಿಸಿಕೊಟ್ಟನು. ಅವರು ಅದನ್ನು ಪಡೆದು, ಒಂದು ಅರಣ್ಯಕ್ಕೆ ಬಂದು, ಆ ಮಂತ್ರದ ಶಕ್ತಿಯನ್ನು ಪರೀಕ್ಷಿಸಲು ಪ್ರಾರಂಭಿಸಿದರು.

೧೫. ಮೊದಲನೆಯ ಮಗನು ಅಲ್ಲಿ ಬಿದ್ದಿದ್ದ ಹುಲಿಯ ಮೂಳೆಯಮೇಲೆ ಸಂಜೀವಿನಿಯಿಂದ ಅಭಿಮಂತ್ರಿತವಾದ ಜಲವನ್ನು ಪ್ರೋಕ್ಷಿಸಲು, ಆ ಮಂತ್ರಪ್ರಭಾವ ದಿಂದ ಆ ಮೂಳೆಯು ಒಂದು ಹುಲಿಯ ಅಸ್ಥಿಪಂಜರವಾಗಿ ಪರಿಣಮಿಸಿತು.

ತಸ್ಯೋಪರ್ಯೇವ ಕುಲಟೋ ಮಂತ್ರಪೂತಂ ಪಯೋಽಕ್ಷಿಪತ್ ।
ಘನಮಾಂಸಂ ಚ ರುಧಿರಂ ತೇನ ಮಂತ್ರೇಣ ಚಾಭವತ್ ॥ ೧೬ ॥

ವಿಷಯೀ ಚಾಕ್ಷಿಪಚ್ಚೈವ ತಸ್ಯೋಪರಿ ಜಲಂ ಶುಭಂ ।
ತೇನ ಮಂತ್ರಪ್ರಭಾವೇಣ ತ್ವಕ್ಪ್ರಾಣತ್ವಮುಪಾಗತಂ ॥ ೧೭ ॥

ಸುಪ್ತಂ ವ್ಯಾಘ್ರಂ ಚ ಸಂಜ್ಞಾಯ ನಾಸ್ತಿಕಸ್ತು ಜಲಂ ದದೌ ।
ಮಂತ್ರೇಣ ಬೋಧಿತೋ ವ್ಯಾಘ್ರಸ್ತಾಂಶ್ಚ ವಿಪ್ರಾನಖಾದಯತ್ ॥ ೧೮ ॥

॥ ಸೂತ ಉವಾಚ ॥

ಇತ್ಯುಕ್ತ್ವಾ ಸ ತು ವೈತಾಲೋ ರಾಜಾನಮಿದಮಬ್ರವೀತ್ ।
ರಾಜನ್ ಮೂರ್ಖೋ ಹಿ ಕಸ್ತೇಷಾಂ ಶ್ರುತ್ವಾ ರಾಜಾಬ್ರವೀದಿದಂ ॥ ೧೯ ॥

---

೧೬. ಅನಂತರ ಕುಲಟನಾದ ಎರಡನೆಯ ಮಗನು, ಅದೇ ಮಂತ್ರದಿಂದ ಪವಿತ್ರಿತವಾದ ಜಲವನ್ನು ಆ ಅಸ್ಥಿಪಂಜರದಮೇಲೆ ಪ್ರೋಕ್ಷಿಸಿದನು. ಅದರ ಪ್ರಭಾವದಿಂದ ಅಸ್ಥಿಪಂಜರವು ಮಾಂಸಖಂಡ, ರಕ್ತನಾಳಗಳಿಂದ ಯುಕ್ತವಾಗಿ ಪರಿಣಮಿಸಿತು.

೧೭. ಬಳಿಕ ವಿಷಯಲಂಪಟನಾದ ಮೂರನೆಯ ಮಗನು ತಾನು ಮಂತ್ರದಿಂದ ಅಭಿಮಂತ್ರಿಸಿದ ಜಲವನ್ನು ಅಸ್ಥಿಮಾಂಸಯುಕ್ತವಾದ ಆ ಪಂಜರದಮೇಲೆ ಪ್ರೋಕ್ಷಿಸಲು, ಅದರ ಮೇಲೆ ಚರ್ಮವೂ ಪಂಚಪ್ರಾಣಗಳೂ ಕೂಡಿಕೊಂಡು ಜೀವದ ಹುಲಿಯ ಆಕಾರವಾಯಿತು.

೧೮. ಈರೀತಿ ಜೀವಿತವಾಗಿ ಮಲಗಿರುವ ಹುಲಿಯನ್ನು ನಾಲ್ಕನೆಯ ಮಗನಾದ ನಾಸ್ತಿಕನು, ಮಂತ್ರಪೂತವಾದ ಜಲದಿಂದ ಪ್ರೋಕ್ಷಿಸಲು ಆ ಮಂತ್ರಪ್ರಭಾವದಿಂದ ಹುಲಿಯು ಎಚ್ಚರಗೊಂಡು ಹಾರಿ ಬಂದು, ಆ ನಾಲ್ವರು ವಿಪ್ರರನ್ನೂ ತಿಂದು ಹಾಕಿತು.

೧೯–೨೦. ಸೂತನು ಹೇಳುತ್ತಾನೆ—ಈರೀತಿ ಹೇಳಿ ಆ ಬೇತಾಳವು ರಾಜನನ್ನು ಕುರಿತು “ ಪ್ರಭುವೇ ! ಇವರುಗಳಲ್ಲಿ ಯಾರು ಅತಿಮೂರ್ಖರು ? ” ಎಂದು ಕೇಳಿತು. ಅದಕ್ಕೆ ರಾಜನು “ ಅಯ್ಯಾ ಪೂಜ್ಯನೇ ! ಕೇಳು ; ಯಾರು ಮಲಗಿದ್ದ

ಬೋಧಿತೋ ಯೇನ ಸ ವ್ಯಾಘ್ರಃ ಸ ಮೂರ್ಖಸ್ತ್ವಧಿಕೋ ಮತಃ ।
ಇತಿ ಶ್ರುತ್ವಾ ದ್ವಿಜಶ್ರೇಷ್ಠೋ ವೈತಾಲಃ ಪುನರಬ್ರವೀತ್ ॥ ೨೦ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಏಕವಿಂಶೋಽಧ್ಯಾಯಃ.



---

ಹುಲಿಯನ್ನು ಎಚ್ಚರಗೊಳಿಸಿದನೋ ಅವನೇ ಅತಿಮೂರ್ಖನು" ಎಂದು ಹೇಳಿದನು. ಆ ಮಾತನ್ನು ಕೇಳಿ ದ್ವಿಜರೂಪಿಯಾದ ಬೇತಾಳವು ಪುನಃ ಹೇಳಲು ತೊಡಗಿತು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ದ್ವಿತೀಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು-



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ

## ದ್ವಾವಿಂಶೋಽಧ್ಯಾಯಃ

---

॥ ವೈತಾಲ ಉವಾಚ ॥

ಭೋರಾಜನ್ ಬಿಲ್ವಕೀಗ್ರಾಮೋ ಗಂಗಾಯಾಮುನಮಧ್ಯಗೇ ।
ಅಹಂ ಪೂರ್ವಭವೇ ಚಾಸಂ ಕ್ಷತ್ರಸಿಂಹೋ ಮಹೀಪತಿಃ ॥ ೧ ॥

ತಸ್ಯ ಗ್ರಾಮೇಽವಸದ್ವಿಪ್ರೋ ವೇದವೇದಾಂಗಪಾರಗಃ ।
ಶಂಭುದತ್ತ ಇತಿ ಖ್ಯಾತೋ ರುದ್ರಭಕ್ತಿಪರಾಯಣಃ ॥ ೨ ॥

ಉಭೌ ತನಯೌ ತಸ್ಯ ಸರ್ವವಿದ್ಯಾವಿಶಾರದೌ ।
ವಿಷ್ಣುಭಕ್ತಃ ಸ್ಮೃತೋ ಜ್ಯೇಷ್ಠೋ ನಾಮ್ನಾ ಲೀಲಾಧರೋ ಬಲೀ ॥ ೩ ॥

---

### ಇಪ್ಪತ್ತೆರಡನೆಯ ಅಧ್ಯಾಯ

೧. ಬೇತಾಳರೂಪೀ ವಿಪ್ರನು ಹೇಳುತ್ತಾನೆ—ಎಲೈ ರಾಜನೇ ! ಗಂಗಾ ಯಮುನಾ ನದಿಗಳ ಮಧ್ಯಪ್ರದೇಶದಲ್ಲಿ ಬಿಲ್ವಕೀ ಎಂಬ ಗ್ರಾಮವಿದ್ದಿತು. ನಾನು ಹಿಂದಿನ ಜನ್ಮದಲ್ಲಿ ಆ ಗ್ರಾಮದಲ್ಲಿ ಕ್ಷತ್ರಸಿಂಹನೆಂಬ ರಾಜನಾಗಿದ್ದೆನು.

೨. ಆ ಗ್ರಾಮದಲ್ಲಿ ವೇದವೇದಾಂಗ ಪಾರಂಗತನೂ, ಶಿವಭಕ್ತಿಪರಾಯಣನೂ ಆದ, ಶಂಭುದತ್ತನೆಂಬ ಪ್ರಸಿದ್ಧನಾದ ಬ್ರಾಹ್ಮಣನಿದ್ದನು.

೩. ಅವನಿಗೆ ಸಕಲವಿದ್ಯಾನಿಪುಣರಾದ ಇಬ್ಬರು ಮಕ್ಕಳಿದ್ದರು. ಅವರಲ್ಲಿ ಹಿರಿಯವನು ವಿಷ್ಣುಭಕ್ತನೂ, ಮಹಾಬಲಿಷ್ಠನೂ ಆಗಿ, ಲೀಲಾಧರನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು. ಎರಡನೆಯವನು ಶಕ್ತಿದೇವತಾ ಭಕ್ತನಾಗಿ ಮೋಹನನೆಂಬ ಹೆಸರಿನಿಂದ ವಿಖ್ಯಾತನಾಗಿದ್ದನು.

**ಶಾಕ್ಯೋಽಭವತ್ತದನುಜೋ ಮೋಹನೋ ನಾಮ ವಿಶ್ರುತಃ ।**
**ಕದಾಚಿತ್ ಕ್ಷತ್ರಸಿಂಹಸ್ತು ಯಜ್ಞಾರ್ಥೀ ಯಜ್ಞಹೇತವೇ ॥ ೪ ॥**

**ಶಂಭುದತ್ತಂ ಸಮಾಹೂಯ ಸಸುತಂ ಧರ್ಮಕೋವಿದಂ ।**
**ಸ್ವಯಂ ಚ ಕಾರಯಾಮಾಸ ಛಾಗಮೇಧಂ ಸುರಪ್ರಿಯಂ ॥ ೫ ॥**

**ಶಂಭುದತ್ತಸ್ತು ವೃದ್ಧಾತ್ಮಾ ಶಿವಭಕ್ತಿಪರಾಯಣಃ ।**
**ಚತುಶ್ಚಕ್ರಾಂಶ್ಚ ಸಂಸ್ಥಾಪ್ಯ ಕಲಶಂ ಕಾರ್ಯಸಿದ್ಧಿದಂ ॥ ೬ ॥**

**ಹವ್ಯೈಃ ಸುಸಂಸ್ಕೃತೈ ರಮ್ಯೈಶ್ಚಕಾರ ಹವನಂ ಮುದಾ ।**
**ಛಾಗಮಾಹೂಯ ವಿಧಿವತ್ಪೂಜಯಾಮಾಸ ಭೂಪತಿಃ ॥ ೭ ॥**

**ಲೀಲಾಧರಸ್ತು ತಂ ದೃಷ್ಟ್ವಾ ಛಾಗಂ ಚ ಮರಣೋನ್ಮುಖಂ ।**
**ದಯಾಲುರ್ವೈಷ್ಣವೋ ಧೀಮಾನಬ್ರವೀದ್ವಚನಂ ರುಷಾ ।**

---

೪ ರಾಜನಾದ ಕ್ಷತ್ರಸಿಂಹನು ಒಂದುಸಲ ಯಜ್ಞಮಾಡಲು ಮನಸ್ಸುಮಾಡಿ, ಅದಕ್ಕಾಗಿ ಒಡನೆ ಯಜ್ಞವಿಧಿಜ್ಞನಾದ ಶಂಭುದತ್ತನನ್ನು ಅವನ ಮಕ್ಕಳೊಡನೆ ಬರಮಾಡಿದನು. ಅವನು ದೇವತಾಪ್ರೀತ್ಯರ್ಥವಾಗಿ ಪಶುಮೇಧಯಾಗವನ್ನು ಆರಂಭಿಸಿ ತಾನೇ ಯಜ್ಞದೀಕ್ಷಿತನಾದನು.

೫. ವಯೋವೃದ್ಧನೂ, ಶಂಭುಭಕ್ತಿಪರಾಯಣನೂ ಆದ ಆ ಶಂಭುದತ್ತನು ನಾಲ್ಕು ಚಕ್ರಗಳನ್ನು ರಚಿಸಿ, ಅದರಲ್ಲಿ ಕಾರ್ಯಸಿದ್ಧಿಪ್ರದವಾದ ದೇವತಾಕಲಶಗಳನ್ನು ಸ್ಥಾಪಿಸಿ ಪೂಜಿಸಿದನು.

೬. ಬಳಿಕ ಚನ್ನಾಗಿ ಸಂಸ್ಕರಿಸಲ್ಪಟ್ಟ ಹವಿಸ್ಸುಗಳಿಂದ ಹೃಷ್ಟಚಿತ್ತನಾಗಿ ಹೋಮಮಾಡಿದನು. ಆಮೇಲೆ ಯಜ್ಞಪಶುವನ್ನು ತಂದು ನಿಲ್ಲಿಸಿ ಶಾಸ್ತ್ರಪ್ರಕಾರ ಪೂಜೆಮಾಡಿದನು.

೭-೮. ಆಗ ಶಂಭುದತ್ತನ ಹಿರಿಯುಮಗನೂ ವಿಷ್ಣುಭಕ್ತನೂ ಆದ ಲೀಲಾಧರನು, ಮರಣೋನ್ಮುಖವಾದ ಆ ಪಶುವನ್ನು ನೋಡಿದನು. ಅವನ ಮನಸ್ಸು ಕರಗಿಹೋಯಿತು. ಆಗ ಲೀಲಾಧರನು ಕ್ರೋಧಪರವಶನಾಗಿ ತಂದೆಯನ್ನು ಕುರಿತು "ಈ ಆಡನ್ನು ಹಿಂಸೆಮಾಡುವುದರಿಂದ ಕಠೋರವಾದ ನರಕ ಪ್ರಾಪ್ತಿಯಾಗು

ದಾರುಣಂ ನರಕಂ ಯೋಗ್ಯಮನಯಾ ಜೀವಹಿಂಸಯಾ ।
ಸರ್ವೇಶೋ ಭಗವಾನ್ ವಿಷ್ಣುರ್ಹಿಂಸಾಯಜ್ಞೇನ ದುಷ್ಯತಿ ॥ ೮ ॥

ಇತಿ ಶ್ರುತ್ವಾ ವಚಸ್ತಸ್ಯ ಜ್ಯೇಷ್ಠಬಂಧೋಶ್ಚ ಮೋಹನಃ ।
ಮೃದುಪೂರ್ವಂ ಜಹಾಸೋಚ್ಚೈರ್ವಚನಂ ಪ್ರಾಹ ನಮ್ರಧೀಃ ॥ ೯ ॥

ಪುರಾ ಸತ್ಯಯುಗೇ ಭ್ರಾತರ್ಬ್ರಾಹ್ಮಣಾ ಯಜ್ಞತತ್ಪರಾಃ ।
ಅಜೇನೈವ ಹಿ ಯಷ್ಟವ್ಯಮಿತಿ ಜ್ಞಾತ್ವಾ ಪರಾಂ ಶ್ರುತಿಂ ॥ ೧೦ ॥

ತಿಲಾರ್ಥಕಮಜಂ ಮತ್ವಾ ಹವ್ಯೇ ತೇ ತು ಮನೋ ದಧುಃ ।
ತದಾ ಶಕ್ರಾದಯೋ ದೇವಾ ವಹ್ನಿಮಧ್ಯೇ ಸಮಾಗತಾಃ ॥ ೧೧ ॥

ಊಚುಸ್ತೇ ಮಧುರಂ ವಾಕ್ಯಂ ತ್ವಸ್ಮತಂ ನಿಷ್ಫಲಪ್ರದಂ ।
ಅಜಶ್ಛಾಗಃ ಸ್ಮೃತೋ ವೇದೈಸ್ತೇನ ಯಷ್ಟವ್ಯಮಂತರಂ ॥ ೧೨ ॥

---

ವುದು. ಜಗತ್ಪ್ರಭುವೂ ಸರ್ವಸಮರ್ಥನೂ ಆದ ನಾರಾಯಣನಿಗೆ ಹಿಂಸಾತ್ಮಕವಾದ ಈ ಯಜ್ಞದಿಂದ ಎಂದಿಗೂ ಸಂತೋಷವುಂಟಾಗುವುದಿಲ್ಲ; ಖಂಡಿತವಾಗಿ ಅವನು ದೂಷಿತನೇ ಆಗುವನು '' ಎಂದು ಹೇಳಿದನು.

೯. ಶಂಭುದತ್ತನ ಎರಡನೆಯ ಮಗನಾದ ಮೋಹನನು, ಅಣ್ಣನು ಆಡಿದ ಮಾತನ್ನು ಕೇಳಿ ಮೃದುವಾಗಿ ನಕ್ಕು, ವಿನಯದಿಂದ ಕೂಡಿ ಗಟ್ಟಿಯಾದ ಧ್ವನಿಯಿಂದ ಹೀಗೆ ಹೇಳಲು ತೊಡಗಿದನು.

೧೦. '' ಅಣ್ಣಾ ! ಹಿಂದೆ ಸತ್ಯಯುಗದಲ್ಲಿ ಯಜ್ಞಾಸಕ್ತರಾದ ಬ್ರಾಹ್ಮಣರು ಅಜದಿಂದಲೇ ಯಾಗಮಾಡತಕ್ಕದ್ದು ಎಂಬುದನ್ನು ಶ್ರುತಿಯಿಂದ ತಿಳಿದರು. ಅನಂತರ '' ಅಜ '' ಶಬ್ದಕ್ಕೆ ಎಳ್ಳು ಎಂದು ಅರ್ಥಮಾಡಿಕೊಂಡು ಆದರಿಂದ ಯಾಗಮಾಡಲು ಉಪಕ್ರಮಿಸಿದರು.

೧೧. ಆಗ ಇಂದ್ರಾದಿ ದೇವತೆಗಳು ಅಗ್ನಿಕುಂಡದಲ್ಲಿ ಪ್ರತ್ಯಕ್ಷವಾಗಿ ಕಾಣಿಸಿಕೊಂಡು ಮಧುರವಾದ ವಾಕ್ಯನಿಂದ ವಿಪ್ರರನ್ನು ಕುರಿತು ಈ ಪ್ರಕಾರವಾಗಿ ಹೇಳಿದರು.

೧೨. ಎಲೈ ವಿಪ್ರರೇ ನೀವು ಮಾಡುವಕೆಲಸ ನಿಷ್ಫಲ. ವೇದಗಳಲ್ಲಿ ಅಜವೆಂದರೆ ಆಡು ಎಂದು ಅರ್ಥಮಾಡಿದೆ, ಆದುದರಿಂದ ಆಡನ್ನು ಯಜ್ಞಪಶು ಮಾಡಿಯೇ ಯಾಗಮಾಡಬೇಕು '' ಎಂದು ಹೇಳಿದರು.

ಶ್ರುತ್ವೇತಿ ವಚನಂ ತೇಷಾಂ ವಿಸ್ಮಿತಾ ಮುನಯೋಽಭವನ್ ।
ಏತಸ್ಮಿನ್ನಂತರೇ ತತ್ರ ಪಿತೃಯೋಽನಿರಮಾವಸುಃ ॥ ೧೩ ॥

ವಿಮಾನಂ ಪರಮಾರುಹ್ಯ ಮುನೀನ್ ಪ್ರೋವಾಚ ನಿರ್ಭಯಃ ।
ಛಾಗಮೇಧೇನ ಯಷ್ಟವ್ಯಂ ಸುರಾಣಾಂ ತೃಪ್ತಿಹೇತವೇ ॥ ೧೪ ॥

ಇತಿ ಶ್ರುತ್ವಾ ವಚಸ್ತಸ್ಯ ತಥಾ ಕೃತ್ವಾ ಶಿವಂ ಯಯುಃ ।
ತಸ್ಮಾತ್ತ್ವಂ ಚ ಮಯಾ ಸಾರ್ಧಂ ಯಜ್ಞಂ ಕುರು ಮಹಾಮತೇ ॥ ೧೫ ॥

ಇತಿ ಶ್ರುತ್ವಾ ವಚೋ ಘೋರಂ ಲೀಲಾಧರ ಉದಾರಧೀಃ ।
ಮೋಹನಂ ಪ್ರಾಹ ಧರ್ಮಾತ್ಮಾ ಯಜ್ಞಸ್ತ್ರೇತಾಯುಗೇಽಭವತ್ ॥ ೧೬ ॥

---

೧೩. "ಹೀಗೆ ಆ ದೇವೇಂದ್ರಾದಿಗಳು ಹೇಳಿದುದನ್ನು ಕೇಳಿ ಆ ಬ್ರಾಹ್ಮಣರು ಆಶ್ಚರ್ಯಚಕಿತರಾದರು. ಈವೇಳೆಗೆ ಅಲ್ಲಿಗೆ ಪಿತೃಗಣದ ಅಮಾವಸು ಎಂಬ ಒಬ್ಬನು ಶ್ರೇಷ್ಠವಾದ ವಿಮಾನವನ್ನು ಏರಿಕೊಂಡು ಅಲ್ಲಿಗೆ ಬಂದನು.

೧೪. "ಆತನು ನಿರ್ಭಯದಿಂದ ಆ ವಿಪ್ರರನ್ನು ಕುರಿತು, "ದೇವತೆಗಳಿಗೆ ತೃಪ್ತಿಯಾಗಬೇಕಾದರೆ ಛಾಗವನ್ನು ಪಶುಮಾಡಿಯೇ ಯಜ್ಞಮಾಡಬೇಕು" ಎಂದು ಹೇಳಿದನು.

೧೫. "ಅವನು ಹೇಳಿದ ವಾಕ್ಯವನ್ನು ಬ್ರಾಹ್ಮಣರು ಕೇಳಿ, ಅದರಂತೆಯೇ ಆಚರಿಸಿ ಶುಭಫಲವನ್ನು ಪಡೆದರು. ಮಹಾಬುದ್ಧಿಶಾಲಿಯಾದ ತಂದೆಯೇ! ಈ ಕಾರಣದಿಂದ ಅಣ್ಣನು ಹೇಳಿದಂತೆ ಮಾಡದೆ, ಛಾಗಪಶುಕ್ರಮದಿಂದಲೇ ಯಜ್ಞ ಮಾಡು" ಎಂಬದಾಗಿ ಹೇಳಿದನು.

೧೬. ಉದಾರಬುದ್ಧಿಯಾದ ಲೀಲಾಧರನು ತಮ್ಮನು ಹೇಳಿದ ಘೋರವಾದ ಈ ಮಾತನ್ನು ಕೇಳಿ ಅವನನ್ನು ಕುರಿತು "ಧರ್ಮಾತ್ಮಾ! ಅಂಥ ಯಜ್ಞವು ತ್ರೇತಾಯುಗಕ್ಕೇ ಆಯಿತು. ಆ ಯುಗದಲ್ಲಿ ಲೋಕವು ರಜೋಗುಣಮಯ ವಾಗಿತ್ತು."

ರಜೋಗುಣಮಯೋ ಲೋಕಸ್ತ್ರೇತಾಯಾಂ ಸಂಬಭೂವ ಹ ।
ಹಿಂಸಾ ಸತ್ಯಯುಗೇ ನಾಸೀದ್ಧರ್ಮಸ್ತತ್ರ ಚತುಷ್ಪದಃ ॥ ೧೭ ॥

ಹವ್ಯೇನ ತರ್ಪಿತಾ ದೇವಾ ನ ಮಾಂಸೈ ರಕ್ತಸಂಭವೈಃ ।
ಇತಿ ಶ್ರುತ್ವಾ ಕ್ಷತ್ರಸಿಂಹಸ್ತ್ಯಕ್ತ್ವಾ ಛಾಗಂ ಭಯಾತುರಂ ॥ ೧೮ ॥

ಫಲಾದ್ಯೈಃ ಕಾರಯಾಮಾಸ ತದಾ ಪೂರ್ಣಾಹುತೀರ್ನೃಪ ।
ಏತಸ್ಮಿನ್ನಂತರೇ ದೇವೀ ತಾಮಸೀ ಕ್ರೋಧಮೂರ್ಛಿತಾ
ನಗರಂ ದಾಹಯಾಮಾಸ ನರನಾರೀಸಮನ್ವಿತಂ ॥ ೧೯ ॥

ಮಹಾಮಾಯಾಪ್ರಭಾವೇಣ ಶಂಭುದತ್ತಃ ಶಿವಪ್ರಿಯಃ ।
ಸ ಭೂತ್ವಾ ಚ ಮಹೋನ್ಮಾದೀ ತ್ಯಕ್ತ್ವಾ ದೇಹಂ ದಿವಂ ಯಯೌ ॥ ೨೦ ॥

---

೧೭. " ಸತ್ಯಯುಗದಲ್ಲಿ ಪ್ರಾಣಿಹಿಂಸೆಯೆಂಬುದು ಇರಲೇ ಇಲ್ಲ. ಆಗ ಧರ್ಮವು ನಾಲ್ಕುಪಾದಗಳಿಂದಲೂ ಕೂಡಿತ್ತು. ಆಗ ದೇವತೆಗಳನ್ನು ಹವಿಸ್ಸಿನಿಂದ ತೃಪ್ತಿಪಡಿಸುತ್ತಿದ್ದರೇ ಹೊರತು ರಕ್ತಸಂಭವವಾದ ಮಾಂಸದಿಂದ ತೃಪ್ತಿಪಡಿಸುತ್ತಿರಲಿಲ್ಲ " ಎಂದನು.

೧೮. ಕ್ಷತ್ರಸಿಂಹನು ಇದನ್ನು ಕೇಳಿ ಭಯದಿಂದ ಗಡಗಡನೆ ನಡುಗುತ್ತಿದ್ದ ಆಡನ್ನು ಬಂಧನದಿಂದ ಬಿಡಿಸಿ ಓಡಿಸಿ, ಹಣ್ಣು ಹವಿಸ್ಸು ಮುಂತಾದುವುಗಳಿಂದಲೇ ಪೂರ್ಣಾಹುತಿಯನ್ನು ಸಿಕೊಡಿಸಿದನು.

೧೯. ಯಜ್ಞ ಮುಗಿಯುವಷ್ಟರಲ್ಲಿ ತಮೋಗುಣವಿಶಿಷ್ಟೆಯಾದ ದೇವಿಯು ಕೋಪಾವಿಷ್ಟಳಾಗಿ ನರನಾರೀಗಣದ ಆ ಬಾಲವೃದ್ಧರಿಂದ ಕೂಡಿದ ಆ ನಗರವನ್ನು ಅಗ್ನಿಗೆ ಆಹುತಿಯಾಗುವಂತೆ ಮಾಡಿದಳು.

೨೦, ಈಶ್ವರಭಕ್ತನಾದ ಶಂಭುದತ್ತನು ಮಹಾಮಾಯೆಯ ಪ್ರಭಾವದಿಂದ ದಿವ್ಯೋನ್ಮಾದ ಹೊಂದಿ ಶರೀರತ್ಯಾಗಮಾಡಿ ಸ್ವರ್ಗಕ್ಕೆ ಹೋದನು.

ತದಾ ಲೀಲಾಧರೋ ವಿಪ್ರೋ ದಶಪುತ್ರೋಪಜೀವಕಃ ।
ಬಾಲಾನಧ್ಯಾಪಯಾಮಾಸ ಗ್ರಾಮೇ ಪದ್ಮಪುರೇ ಶುಭೇ　　॥ ೨೧ ॥

ಕ್ಷತ್ರಸಿಂಹಸ್ತು ನೃಪತಿರ್ಮೋಹನಾಂತಿಕಮಾಯಯೌ ।
ಪ್ರಸಾದಂ ಕಾರಯಾಮಾಸ ದೇವಮಾತುರನುಗ್ರಹಂ　　॥ ೨೨ ॥

॥ ಮೋಹನ ಉವಾಚ ॥

ಬೀಜಮಂತ್ರಜಪಾದ್ಬ್ರಹ್ಮಾ ಬ್ರಾಹ್ಮೀಂ ಶಕ್ತಿಮವಾಪ್ತವಾನ್ ।
ತದಂಬಾಯೈ ನಮಸ್ತುಭ್ಯಂ ಸುವೀರಾಯೈ ನಮೋನಮಃ　　॥ ೨೩ ॥

ಜಪ್ತ್ವಾ ಸಪ್ತಶತೀಂ ವಿಷ್ಣುರ್ವೈಷ್ಣವೀಂ ಶಕ್ತಿಮಾಪ್ತವಾನ್ ।
ತದಂಬಾಯೈ ನಮಸ್ತುಭ್ಯಂ ಮಹಾಲಕ್ಷ್ಮ್ಯೈ ನಮೋನಮಃ　　॥ ೨೪ ॥

---

೨೧. ಬಳಿಕ ಲೀಲಾಧರ ವಿಪ್ರನು ತನ್ನ ಹತ್ತು ಗಂಡುಮಕ್ಕಳನ್ನು ಸಲಹುತ್ತಾ ಪದ್ಮಪುರವೆಂಬ ಶ್ರೇಷ್ಠವಾದ ಊರಿನಲ್ಲಿ ಬಾಲಕರಿಗೆ ಅಧ್ಯಯನಮಾಡಿಸುವ ಅಧ್ಯಾಪಕನಾಗಿ ಇರತೊಡಗಿದನು.

೨೨. ಬಳಿಕ ಕ್ಷತ್ರಸಿಂಹರಾಜನು ಮೋಹನನ ಸಮೀಪಕ್ಕೆ ಬಂದು ವಿನಯನಮ್ರನಾಗಿ "ನನಗೂ ದೇವಮಾತೃವಿನ ಅನುಗ್ರಹವುಂಟಾಗುವಂತೆ ಮಾಡಿಸಿ" ಎಂದು ಬೇಡಿಕೊಂಡನು.

೨೩. ಆಗ ಮೋಹನನು ದೇವಿಯ ಪ್ರಭಾವವನ್ನು ವಿವರಿಸತೊಡಗಿ, ಬ್ರಹ್ಮನು ಬೀಜಾಕ್ಷರ ಮಂತ್ರವನ್ನು ಜಪಿಸಿ ಬ್ರಾಹ್ಮೀಶಕ್ತಿಯನ್ನು ಹೊಂದಿದನು. ಮಹಾವೀರತನವುಳ್ಳ ಬ್ರಾಹ್ಮೀಶಕ್ತಿರೂಪಿಣಿಯಾದ ಅಂಬೆಗೆ ನಮಸ್ಕಾರ.

೨೪. ಮಹಾವಿಷ್ಣುವು ಸಪ್ತಶತೀ ಮಂತ್ರವನ್ನು ಜಪಿಸಿ ವೈಷ್ಣವೀ ಶಕ್ತಿಯನ್ನು ಪಡೆದನು. ಮಹಾಲಕ್ಷ್ಮೀರೂಪಿಣಿಯಾದ ಆ ಜಗದಂಬೆಗೆ ನಮಸ್ಕಾರ.

ಪ್ರಣವಸ್ತನಯೋ ಯಸ್ಯಾಸ್ತುರೀಯಾ ಪುರುಷಪ್ರಿಯಾ ।
ತದಂಬಾಯೈ ನಮಸ್ತುಭ್ಯಂ ಪ್ರಣವಾಯೈ ನಮೋನಮಃ ॥ ೨೫ ॥

ಯಯಾ ದೃಶ್ಯಮಿದಂ ಜಾತಂ ಯಯಾ ವೈ ಪಾಲ್ಯತೇ ಜಗತ್ ।
ಯಸ್ಯಾ ದೇಹೇ ಸ್ಥಿತಂ ವಿಶ್ವಂ ತದಂಬಾಯೈ ನಮೋನಮಃ ॥ ೨೬ ॥

ಶಚೀ ಸಿದ್ಧಿಸ್ತಥಾ ಮೃತ್ಯುಃ ಪ್ರಭಾ ಗೀರ್ವಾಣಸೈನಿಕಾಃ ।
ಸ್ವಾಹಾ ಚ ನಿಋುಋುತೀ ರಾತ್ರಿರೃರ್ದ್ಧಿಭುರ್ಕ್ತಿಸ್ತ್ವದುದ್ಭವಾ ।
ಲೋಕಪಾಲಪ್ರಿಯಾ ತ್ವಂ ಹಿ ಲೋಕಮಾತರ್ನಮೋನಮಃ ॥ ೨೭ ॥

ಕೃಷ್ಣಾ ತೃಪ್ತೀ ರತಿರ್ನೀತಿರ್ಹಿಂಸಾ ಕ್ಷಾಂತಿರ್ಮತಿರ್ಗತಿಃ ।
ನಿಂದಾ ಸ್ತುತಿಸ್ತಥೇಷ್ಯಾರ್ ಚ ಲಜ್ಜಾ ತ್ವಂ ಹಿ ನಮೋನಮಃ ॥ ೨೮ ॥

---

೨೫. ಪುರುಷನೆನಿಸಿದ ಪರಮಾತ್ಮನಿಗೆ ಪ್ರಿಯಳೂ, ತ್ರಿಮೂರ್ತಿಗಳನ್ನು ಬಿಟ್ಟರೆ ನಾಲ್ಕನೆಯವಳೂ, ಪ್ರಣವಜನನಿಯೂ, ಪ್ರಣವಸ್ವರೂಪಿಣಿಯೂ ಆದ ಅಂಬೆಗೆ ನಮಸ್ಕಾರ.

೨೬. ಈಗ ಗೋಚರವಾಗುವ ಜಗತ್ತನ್ನು ಸೃಷ್ಟಿಸಿದವಳೂ, ಅದನ್ನು ರಕ್ಷಿಸುವವಳೂ, ಕೊನೆಯಲ್ಲಿ ಈ ಜಗತ್ತನ್ನೆಲ್ಲಾ ತನ್ನ ದೇಹದಲ್ಲಿ ಐಕ್ಯಮಾಡಿಕೊಳ್ಳುವವಳೂ ಆದ ಜಗದಂಬೇ ! ನಿನಗೆ ನಮಸ್ಕಾರ.

೨೭. ಶಚೀ, ಸಿದ್ಧಿ, ಮೃತ್ಯು, ಪ್ರಭೆ, ದೇವಸೈನಿಕರು, ಸ್ವಾಹೆ, ನಿಋುಋುತಿ, ರಾತ್ರಿ, ಋದ್ಧಿ (ಸುಖ) ಭುಕ್ತಿ, ಮುಂತಾದವರೆಲ್ಲರೂ ಕೂಡ ನಿನ್ನಿಂದ ಜನಿಸಿದರು. ಲೋಕಪಾಲಕರ ಪತ್ನಿಯರ ಸ್ವರೂಪೆಯಾದ ಜಗನ್ಮಾತೆಯೇ ! ನಿನಗೆ ನಮಸ್ಕಾರ.

೨೮. ತೃಷ್ಣೆ, ತೃಪ್ತಿ, ರತಿ, ನೀತಿ, ಹಿಂಸೆ, ಕ್ಷಾಂತಿ, ಮತಿ, ಗತಿ, ಸ್ತುತಿ, ನಿಂದೆ, ಈರ್ಷ್ಯೆ (ಹೊಟ್ಟೆಕಿಚ್ಚು) ಲಜ್ಜೆ (ನಾಚಿಕೆ) ಇವೆಲ್ಲವುಗಳ ಸ್ವರೂಪಿಣಿ ನೀನು. ಇಂಥಾ ನಿನಗೆ ನಮಸ್ಕಾರ.

ಇತ್ಯಷ್ಟಕಪ್ರಭಾವೇನ ಕ್ಷತ್ರಸಿಂಹೋ ಮಹೀಪತಿಃ ।
ಶಿವಲೋಕಂ ಗತಃ ಸಾಧುರ್ವೈತಾಲತ್ವಮವಾಪ್ತವಾನ್ ॥ ೨೯ ॥

ತಸ್ಮಾತ್ತ್ವಂ ವಿಕ್ರಮಾದಿತ್ಯ ಭಜ ದುರ್ಗಾಂ ಸನಾತನೀಂ ।
ಶಿವಾಜ್ಞಯಾ ತ್ವಹಂ ಪ್ರಾಪ್ತಸ್ತ್ವತ್ಸಮೀಪೇ ಮಹೀಪತೇ ॥ ೩೦ ॥

ಪ್ರಶ್ನೋತ್ತರೇಣ ಭೂಪಾಲ ಮಯಾ ತ್ವಂ ಸಂಪರೀಕ್ಷಿತಃ ।
ಭುಜಯೋಸ್ತೇ ಸ್ಥಿತಿರ್ಮೇ ಸ್ಯಾಜ್ಜಹಿ ಸರ್ವರಿಪೂನ್ ಭುವಿ ॥ ೩೧ ॥

ದಸ್ಯುನಷ್ಟಾಃ ಪುರೀಃ ಸರ್ವಾಃ ಕ್ಷೇತ್ರಾಣಿ ವಿವಿಧಾನಿ ಚ ।
ಶಾಸ್ತ್ರಮಾನೇನ ಸಂಸ್ಥಾಪ್ಯ ಸಮಯಂ ಕುರು ಭೋ ನೃಪ ॥ ೩೨ ॥

---

೨೯. ಈ ಪ್ರಕಾರ ನಮಸ್ಕಾರಾತ್ಮಕವಾದ ಎಂಟು ಸ್ತೋತ್ರವನ್ನು ಹೇಳಿದನು. ಅದನ್ನು ಕೇಳಿದ ಮಹಿಮೆಯಿಂದ ಆ ಕ್ಷತ್ರಸಿಂಹರಾಜನು ಶಿವಲೋಕವನ್ನು ಸೇರಿ ಅಲ್ಲಿ ಬೇತಾಳತ್ವವನ್ನು ಹೊಂದಿದನು.

೩೦. ಆದುದರಿಂದ ಓ ವಿಕ್ರಮರಾಜನೇ ! ನೀನು ಪುರಾತನೆಯಾದ ಆ ದುರ್ಗೆಯನ್ನು ಭಜಿಸು. ಅಯ್ಯಾ ರಾಜನೇ ! ಆ ಬೇತಾಳನಾದ ನಾನು ಈಶ್ವರಾಜ್ಞೆಯ ಪ್ರಕಾರ ಈಗ ನಿನ್ನ ಸಮೀಪವನ್ನು ಸೇರಿದ್ದೇನೆ.

೩೧. ತೊಡಕಾದ ಪ್ರಶ್ನೆ ಕೇಳಿ ಉತ್ತರಪಡೆಯುವ ಮೂಲಕ ನಾನು ನಿನ್ನನ್ನು ಚೆನ್ನಾಗಿ ಪರೀಕ್ಷಿಸಿದೆನು. ನಿನ್ನ ಭುಜದಲ್ಲಿ ಗೋಪ್ಯವಾಗಿ ನೆಲಸುತ್ತೇನೆ, ನೀನು ಶತ್ರುಗಳನ್ನೆಲ್ಲಾ ಧ್ವಂಸಮಾಡಿ ವಿಜಯಿಯಾಗು.

೩೨-೩೪. ಎಲೈ ರಾಜನೆ! ಎಲ್ಲಾ ನಗರಗಳಲ್ಲಿಯೂ ಇರುವ, ಲೂಟಿ ಕೋರರಾದ ದುಷ್ಟರನ್ನು ನಿರ್ಮೂಲಮಾಡಿ, ಶಾಸ್ತ್ರೋಕ್ತ ಕ್ರಮದಂತೆ ನಾನಾ ವಿಧ ಕ್ಷೇತ್ರಗಳನ್ನು ನಿರ್ಮಿಸು. ಸಮಯ ನಿಬಂಧನೆಯನ್ನು ಏರ್ಪಡಿಸು. ಹೀಗೆ ಸರ್ವತೀರ್ಥ ಕ್ಷೇತ್ರಗಳನ್ನೂ ಪುನರುಜ್ಜೀವನ ಮಾಡುವಂಥಾ ರಾಜನು, ಆ ರೀತಿ ಹಿಂದೆ ನಾನು

ಯೋ ನೃಪಃ ಸರ್ವತೀರ್ಥಾನಿ ಪುನರುದ್ಧಾರಯಿಷ್ಯತಿ ।
ಸ ಹಿ ಮತ್ಸ್ಥಾಪಿತಂ ಸಂವದ್ವಿಪರೀತಂ ಕರಿಷ್ಯತಿ ॥ ೩೩ ॥

ವಿಕ್ರಮಾಖ್ಯಾನಕಾಲೋऽಯಂ ಪುನರ್ಧರ್ಮಂ ಕರೋತಿ ಹಿ ।
ದ್ವಾದಶಾಬ್ದಶತಂ ವರ್ಷಂ ದ್ವಾಪರೋ ಹಿ ಪ್ರವರ್ತತೇ ॥ ೩೪ ॥

ತದಂತೇ ಭುವಿ ಕೃಷ್ಣಾಂಶೋ ಭವಿಷ್ಯತಿ ಮಹಾಬಲೀ ।
ಕಲೇರುದ್ಧರಣಾರ್ಥಾಯ ಮ್ಲೇಚ್ಛವಂಶವಿವೃದ್ಧಯೇ ॥ ೩೫ ॥

ಸೂತಾದ್ಯಾ ಮುನಯಃ ಸರ್ವೇ ನೈಮಿಷಾರಣ್ಯವಾಸಿನಃ ।
ವಿಶಾಲಾಯಾಂ ಸಮಾಗತ್ಯ ಚಕ್ರತೀರ್ಥನಿವಾಸಿನಃ ।
ಭವಿಷ್ಯಂತಿ ಮಹಾರಾಜ ಪುರಾಣಶ್ರವಣೇ ರತಾಃ ॥ ೩೬ ॥

ಇತ್ಯುಕ್ತ್ವಾ ಸ ತು ವೈತಾಲಸ್ತತ್ರೈವಾಂತರಧೀಯತ ।
ನೃಪತಿರ್ವಿಕ್ರಮಾದಿತ್ಯಃ ಪರಮಾನಂದಮಾಪ್ತವಾನ್ ॥ ೩೭ ॥

---

ಅನುಸರಿಸಿದ್ದ ಯಜ್ಞವಿಚ್ಛೇದಾದಿಗಳಿಗೆ ವ್ಯತಿರಿಕ್ತವಾಗಿ ಎಂದರೆ ಅದು ನಡೆಯುವಂತೆ ಮಾಡುವನು. ವಿಕ್ರಮಾರ್ಕನ ಆಳ್ವಿಕೆಯ ಕಾಲದಲ್ಲಿ ಧರ್ಮವು ಉದ್ಧಾರವಾಗುವುದು. ದ್ವಾಪರಯುಗದಲ್ಲಿ ಕೊನೆಯ ಸಾವಿರದ ಇನ್ನೂರುವರ್ಷಗಳಲ್ಲಿ ವಿಕ್ರಮನ ಆಳ್ವಿಕೆ ಜರುಗುವುದು.

೩೫. ಆ ಯುಗದ ಕೊನೆಯಲ್ಲಿ ಕಲಿಯ ಉದ್ಧಾರಕ್ಕಾಗಿಯೂ ಮ್ಲೇಂಛ ಕುಲದ ಅಭಿವೃದ್ಧಿಗಾಗಿಯೂ ಮಹಾಬಲಶಾಲಿಯೊಬ್ಬನು ಕೃಷ್ಣನ ಅಂಶದಿಂದ ಲೋಕದಲ್ಲಿ ಜನ್ಮವೆತ್ತುವನು.

೩೬. ನೈಮಿಶಾರಣ್ಯವಾಸಿಗಳಾದ ಶೌನಕಾದಿ ಋಷಿಗಳೆಲ್ಲರೂ ಈ ವಿಶಾಲಾ ನಗರಕ್ಕೆ ಬಂದು ಚಕ್ರತೀರ್ಥದ ಸಮೀಪದಲ್ಲಿ ವಾಸಿಸುತ್ತಾ ಸೂತಪುರಾಣಿಕರು ಹೇಳುವ ಪುರಾಣವನ್ನು ಶ್ರವಣಮಾಡುವುದರಲ್ಲಿ ಆಸಕ್ತರಾಗುತ್ತಾರೆ.

೩೭. ಹೀಗೆಂದು ಹೇಳಿ ಆ ಭೇತಾಳವು ಅಲ್ಲಿಯೇ ಅಂತರ್ಧಾನವಾಯಿತು. ವಿಕ್ರಮರಾಜನು ಪರಮಾನಂದ ಯುಕ್ತನಾದನು.

**ತಸ್ಮಾದ್ಯೂಯಂ ಮುನಿಶ್ರೇಷ್ಠಾ ಜ್ಞಾತ್ವಾ ಸಂಧ್ಯಾಂ ಸಮಾಗತಾಂ ।**
**ಶಿವಂ ಭಜತ ಸರ್ವೇಶಂ ಧ್ಯಾನನಿಷ್ಠಾಸಮನ್ವಿತಾಃ　　　॥ ೩೮ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ದ್ವಾವಿಂಶೋಽಧ್ಯಾಯಃ.**



೩೮. " ಎಲೈ ಮುನಿಶ್ರೇಷ್ಠರೇ! ಈ ವಿಚಾರವನ್ನು ತಿಳಿದು ನೀವು ಸಂಧ್ಯಾ ಕಾಲವಾಗುತ್ತಲೆ ಸರ್ವೇಶ್ವರನಾದ ಶಿವನನ್ನು ಧ್ಯಾನನಿಯಮದಿಂದ ಕೂಡಿದವರಾಗಿ ಭಜಿಸಿರಿ " ಎಂದು ಹೇಳಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಪ್ರತಿಸರ್ಗಪರ್ವದ ಎರಡನೆಯ ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ತ್ರಯೋವಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ಇತಿ ಶ್ರುತ್ವಾ ತು ಮುನಯೋ ವಿಶಾಲಾನಗರೀಸ್ಥಿತಾಃ ।
ಸ್ನಾತ್ವಾ ಕೇದಾರಕುಂಡೇ ತೇ ಮನಸಾಪೂಜಯಞ್ಶಿವಂ ॥ ೧ ॥

ಸಮಾಧಿನಿಷ್ಠಾಸ್ತೇ ಸರ್ವೇ ವರ್ಷಮೇಕಂ ವ್ಯತೀತಯನ್ ॥ ೨ ॥

ಏತಸ್ಮಿನ್ನಂತರೇ ರಾಜಾ ವಿಕ್ರಮಾದಿತ್ಯಭೂಪತಿಃ ।
ನತ್ವಾ ಮುನೀನ್ ಸಮಾಧಿಸ್ಥಾಂಸ್ತುಷ್ಟಾವ ಪರಯಾ ಗಿರಾ ॥ ೩ ॥

---

## ಇಪ್ಪತ್ತಮೂರನೆಯ ಅಧ್ಯಾಯ

೧-೨. ವ್ಯಾಸಮುನಿವರ್ಯರು ಹೇಳುತ್ತಾರೆ—ವಿಶಾಲಾನಗರಿಯಲ್ಲಿದ್ದ ಮುನಿಗಳೆಲ್ಲರೂ ಇದನ್ನು ಕೇಳಿ, ಕೇದಾರಕುಂಡವೆಂಬ ತೀರ್ಥದಲ್ಲಿ ಸ್ನಾನಮಾಡಿ ಶಿವನನ್ನು ಮನಸ್ಸಿನಲ್ಲಿ ಆರಾಧಿಸುತ್ತಾ ಸಮಾಧಿಯೋಗದಲ್ಲಿ ನಿರತರಾಗಿ (ಅಂತರ್ಮುಖರಾಗಿ) ಒಂದುವರ್ಷಕಾಲ ತಪಸ್ಸುಮಾಡುತ್ತಿದ್ದರು.

೩. ಹೀಗಿರುವಾಗ ವಿಕ್ರಮಾದಿತ್ಯರಾಜನು ಸಮಾಧಿಸ್ಥರಾದ ಋಷಿಗಳನ್ನು ನಮಸ್ಕರಿಸಿ ಶ್ರೇಷ್ಠವಾದ ವಾಕ್ಕುಗಳಿಂದ ಅವರನ್ನು ಸ್ತುತಿಸಿದನು.

**ಉಷಿತ್ವಾ ತೇ ತು ಮುನಯಃ ಸೂತಂ ಗತ್ವಾಽಬ್ರುವನ್ನಿದಂ ।**
**ಸೋಽಯಂ ರಾಜಾ ಸಮಾಯಾತೋ ಯಸ್ಯೈವಂ ವರ್ಣಿತಾ ಕಥಾ ॥ ೪ ॥**

**ವಾಜಿಮೇಧಂ ಚ ನೃಪತೇಃ ಕಾರಯಾಮಸ್ತ್ವದಾಜ್ಞಯಾ ।**
**ಭವಾನ್ ಹಿ ಚಕ್ರತೀರ್ಥೇ ಚ ಸ್ಥಿತ್ವಾ ಧ್ಯಾನಪರೋ ಭವೇತ್ ॥ ೫ ॥**

**ತಥೇತ್ಯುಕ್ತ್ವಾ ತು ಸೂತಸ್ತೈಃ ಸಾರ್ಧಂ ಚ ಪುನರಾಗಮತ್ ।**
**ವಿಧಿನಾ ಕಾರಯಾಮಾಸ ಹಯಮೇಧಂ ಮಹಾಮಖಂ ॥ ೬ ॥**

**ಪೂರ್ವೇ ತು ಕಪಿಲಸ್ಥಾನಂ ದಕ್ಷಿಣೇ ಸೇತುಬಂಧನಂ ।**
**ಪಶ್ಚಿಮೇ ಸಿಂಧುನದ್ಯಂತಂ ಚೋತ್ತರೇ ಬದರೀವನಂ ॥ ೭ ॥**

**ಹಯೋ ಜಗಾಮ ತರಸಾ ತತಃ ಕ್ಷಿಪ್ರಾಂ ನದೀಂ ಗತಃ ।**
**ತ್ಯಕ್ತ್ವಾ ಕಲೇವರಂ ವಹ್ನೌ ಸ್ವರ್ಗಲೋಕಮತೋ ಯಯೌ ॥ ೮ ॥**

---

೪-೫. ಆಗ ಮುನಿಗಳು ಬಹಿರ್ಮುಖರಾಗಿ ಸೂತಮುನಿವರ್ಯನ ಬಳಿಗೆ ಹೋಗಿ ವಿಜ್ಞಾಪಿಸುವರಾಗಿ " ಸ್ವಾಮಿ ! ಈವರೆಗೆ ಯಾರ ಕಥೆಯನ್ನು ವರ್ಣಿಸಿದಿರೋ ಆ ರಾಜಶ್ರೇಷ್ಠನೇ ಬಂದಿದ್ದಾನೆ ಅಯ್ಯಾ ಮಹಾತ್ಮನೇ ! ನೀನು ಅನುಮತಿಸಿದರೆ ಆ ರಾಜನ ಅಶ್ವಮೇಧಯಾಗವನ್ನು ಮಾಡುವೆವು. ಆಗ ನೀನು ಅಲ್ಲಿ ಚಕ್ರತೀರ್ಥದಲ್ಲಿ ವಾಸಿಸುತ್ತಾ ಧ್ಯಾನಾಸಕ್ತನಾಗಿರಬೇಕು " ಎಂದು ಕೇಳಿಕೊಂಡರು.

೬. ಆಗ ಆತನು " ಹಾಗೆಯೇ ಆಗಲಿ " ಎಂದನು. ಅನಂತರ ಆ ಸೂತಮುನಿಯನ್ನು ಕರೆದುಕೊಂಡು ಹಿಂದಿರುಗಿ ಬಂದರು. ಆತನು ಶಾಸ್ತ್ರವಿಧಿಗನುಸಾರವಾಗಿ ಅಶ್ವಮೇಧ ಮಹಾಯಜ್ಞವನ್ನು ಆರಂಭಮಾಡಿಸಿ ಅಶ್ವವನ್ನು ಪೂಜಿಸಿ ಭೂಪ್ರದಕ್ಷಿಣೆಗಾಗಿ ಬಿಟ್ಟನು.

೭-೮. ಆ ಯಜ್ಞಾಶ್ವವು ಪೂರ್ವದಿಕ್ಕಿನಲ್ಲಿ ಕಪಿಲಋಷಿಯ ಆಶ್ರಮದವರೆಗೂ, ದಕ್ಷಿಣದಲ್ಲಿ ರಾಮಸೇತುವಿರುವ ರಾಮೇಶ್ವರದವರೆಗೂ, ಪಶ್ಚಿಮದಕಡೆ ಸಿಂಧೂನದಿಯವರೆಗೂ, ಉತ್ತರದಲ್ಲಿ ಬದರಿಕಾರಣ್ಯದವರೆಗೂ, ವೇಗವಾಗಿ ಸಂಚರಿಸಿ ಕೊನೆಗೆ ಶಿಪ್ರಾನದಿಯತೀರದ ಯಜ್ಞಶಾಲೆಗೆ ಬಂದಿತು. ಅಲ್ಲಿ ತನ್ನ ಶರೀರವನ್ನು (ಎಂದರೆ ಯಜ್ಞಾಹುತಿಗೆ ಬೇಕಾದ ಶರೀರ ಭಾಗವನ್ನು) ಅಗ್ನಿಗೆ ಸಮರ್ಪಿಸಿತು. ಆ ಪುಣ್ಯದಿಂದ ಅದಕ್ಕೆ ಸ್ವರ್ಗಪ್ರಾಪ್ತಿಯಾಯಿತು.

ನೃಪಯಜ್ಞೇ ಸುರಾಃ ಸರ್ವೇ ಸಪತ್ನೀಕಾಃ ಸಮಾಗತಾಃ ।
ಚಂದ್ರಮಾಸ್ತತ್ರ ನಾಯಾತೋ ಭೂಪತಿರ್ವಿಮನಾ ಅಭೂತ್ ॥ ೯ ॥

ಯಜ್ಞಾಂತೇ ವಿವಿಧಂ ದಾನಂ ದತ್ವಾ ವೈತಾಲಸಂಯುತಃ ।
ಚಂದ್ರಲೋಕಂ ಗತೋ ರಾಜಾ ಚಂದ್ರಮಾಃ ಸುಖಿತೋಽಭವತ್ ॥೧೦॥

ಭೋಭೋ ರಾಜನ್ ಮಹಾಭಾಗ ಕಲೌ ಪ್ರಾಪ್ತೇ ಭಯಂಕರೇ ।
ಮದ್ಗತಿರ್ಭೂತಲೇ ನಾಸ್ತಿ ತಸ್ಮಾನ್ನಾಯಾಮಿ ತೇಽಂತಿಕಂ ॥ ೧೧ ॥

ದತ್ವಾ ಸುಧಾಮಯಂ ತೋಯಂ ಚಂದ್ರಶ್ಚಾಂತರ್ದಧೇ ಪುನಃ ।
ಜ್ಞಾತ್ವೇಂದ್ರಸ್ತತ್ರ ಸಂಪ್ರಾಪ್ಯ ದ್ವಿಜರೂಪೀ ಹ್ಯಯಾಚಯತ್ ॥ ೧೨ ॥

ದತ್ತಂ ರಾಜ್ಞಾ ತದಮೃತಂ ಶಕ್ರಃ ಸ್ವರ್ಗಮುಪಾಗತಃ ।
ತೇನ ತಸ್ಯ ಫಲಂ ಜಾತಮಾಯುರ್ಲಕ್ಷಸಮಂ ಹ್ಯಭೂತ್ ॥ ೧೩ ॥

---

೯-೧೦. ರಾಜನು ಮಾಡಿಸಿದ ಆ ಯಜ್ಞಕ್ಕೆ ದೇವತೆಗಳೆಲ್ಲರೂ ಪತ್ನೀಸಮೇತರಾಗಿ ಬಂದಿದ್ದರು. ಆದರೆ ಚಂದ್ರನು ಒಬ್ಬನು ಮಾತ್ರ ಬರಲಿಲ್ಲ ಆದುದರಿಂದ ರಾಜನು ಮನಸ್ಸಿನಲ್ಲಿ ಸ್ವಲ್ಪ ಖಿನ್ನನಾದನು. ಯಜ್ಞಸಮಾಪ್ತಿಯ ಕಾಲದಲ್ಲಿ ಸಮೃದ್ಧಿಯಾಗಿ ದಾನಗಳನ್ನು ಮಾಡಿದನು. ಅನಂತರ ಬೇತಾಳ ಸಮೇತನಾಗಿ ಚಂದ್ರಲೋಕಕ್ಕೆ ಹೋದನು. ಅಲ್ಲಿ ಚಂದ್ರನು ಸುಖವಾಗಿ ಕುಳಿತಿದ್ದನು.

೧೧-೧೨. ಮಹಾತ್ಮನಾದ ಆ ರಾಜನು ತನ್ನ ಬಳಿಗೆ ಬಂದುದನ್ನು ಕಂಡು ಚಂದ್ರನು "ಅಯ್ಯಾ ಪೂಜ್ಯನಾದ ರಾಜನೇ! ಭಯಂಕರವಾದ ಈ ಕಲಿಯುಗ ಆರಂಭವಾಗಿ ಬಿಟ್ಟಿರುವುದರಿಂದ ಭೂಲೋಕಕ್ಕೆ ನಾನು ಬರುವಂತಿಲ್ಲ. ಆದುದರಿಂದ ನೀನು ಮಾಡಿದ ಯಜ್ಞಕ್ಕೆ ನಾನು ಬರಲಿಲ್ಲ" ಎಂಬದಾಗಿ ಹೇಳಿ ಅಮೃತಮಯವಾದ ಜಲವನ್ನು ಆ ರಾಜನಿಗೆ ಕೊಟ್ಟು ಚಂದ್ರನು ಅಂತರ್ಧಾನನಾದನು. ಈ ವಿಚಾರವು ಇಂದ್ರನಿಗೆ ಗೊತ್ತಾಯಿತು. ಆಗ ಅವನು ಬ್ರಾಹ್ಮಣ ರೂಪವನ್ನು ಧರಿಸಿ ರಾಜನ ಬಳಿಗೆ ಬಂದು "ಆ ಅಮೃತಜಲವನ್ನು ನನಗೆ ಕೊಡು" ಎಂದು ಯಾಚಿಸಿದನು.

೧೩. ಧರ್ಮಿಷ್ಠನಾದ ರಾಜನು ಆ ಬ್ರಾಹ್ಮಣ (ರೂಪದ ಇಂದ್ರ) ನಿಗೆ ಕೊಟ್ಟುಬಿಟ್ಟನು. ಅದನ್ನು ತೆಗೆದುಕೊಂಡು ಇಂದ್ರನು ಸ್ವರ್ಗಕ್ಕೆ ಹೊರಟು ಹೋದನು ಹೀಗೆ ದಾನಮಾಡಿದುದರ ಫಲವಾಗಿ ಆ ರಾಜನಿಗೆ ಲಕ್ಷವರ್ಷ ಆಯುಷ್ಯವು ಲಭಿಸಿತು.

ತಸ್ಮಿನ್ ಕಾಲೇ ದ್ವಿಜಃ ಕಶ್ಚಿಜ್ಜಯಂತೋ ನಾಮ ವಿಶ್ರುತಃ ।
ತತ್ಫಲಂ ತಪಸಾ ಪ್ರಾಪ್ತಃ ಶಕ್ರತಃ ಸ್ವಗೃಹಂ ಯಯೌ ॥ ೧೪ ॥

ಜಯಂತೋ ಭರ್ತೃಹರಯೇ ಲಕ್ಷಸ್ವರ್ಣೇನ ವರ್ಣಯನ್ ।
ಭುಕ್ತ್ವಾ ಭರ್ತೃಹರಿಸ್ತತ್ರ ಯೋಗಾರೂಢೋ ವನಂ ಯಯೌ ॥ ೧೫ ॥

ವಿಕ್ರಮಾದಿತ್ಯಏವಾಸ್ಯ ಭುಕ್ತ್ವಾ ರಾಜ್ಯಮಕಂಟಕಂ ।
ಶತವರ್ಷಂ ಮುದಾಯುಕ್ತೋ ಜಗಾಮ ಮರಣೇ ದಿವಂ ॥ ೧೬ ॥

ಶೌನಕಾದ್ಯಾಸ್ತು ಋಷಯೋ ಜ್ಞಾತ್ವಾ ಭೂಪಸ್ಯ ಸ್ವರ್ಗತಿಂ ।
ಗತ್ವಾ ಸೂತಂ ಪ್ರಣಮ್ಯೋಚುರ್ಧರ್ಮಂ ಮುಖ್ಯಂ ವದಾಧುನಾ ॥ ೧೭ ॥

---

೧೪. ಜಯಂತನೆಂಬ ಹೆಸರಿನಿಂದ ಪ್ರಸಿದ್ಧನಾದ ಒಬ್ಬ ಬ್ರಾಹ್ಮಣನು ಇದೇ ಕಾಲದಲ್ಲಿ ಇಂದ್ರನನ್ನು ಕುರಿತು ತಪಸ್ಸುಮಾಡುತ್ತಿದ್ದನು. ಇಂದ್ರನು ಅವನಿಗೆ ಪ್ರಸನ್ನನಾಗಲು, ಅವನಿಂದ ಲಕ್ಷವರ್ಷದ ಆಯುಸ್ಸಿನ ಫಲವನ್ನು ಪಡೆದು ತನ್ನ ಮನೆಗೆ ಬಂದನು.

೧೫. ಅನಂತರ ಜಯಂತನು ಲಕ್ಷ ಸುವರ್ಣನಾಣ್ಯಗಳನ್ನು ತೆಗೆದುಕೊಂಡು ಭರ್ತೃಹರಿ (ರಾಜ) ಗೆ ಈ ಮಾರ್ಗವನ್ನು ಉಪದೇಶಿಸಲು ಭರ್ತೃಹರಿಯು ಅದರಂತೆಯೇ ನಡೆದು ಯೋಗಾರೂಢನಾಗಲು ಕೊನೆಗೆ ವನಕ್ಕೆ ತೆರಳಿದನು.

೧೬. ಎಲೈ ವಿಕ್ರಮಾದಿತ್ಯನೇ! ಅವನು ಯೋಗಸಿದ್ಧನಾಗಿ ರಾಜ್ಯವನ್ನು ಶತ್ರುಬಾಧೆಯಿಲ್ಲದೆ ನಿಷ್ಕಂಟಕವಾಗಿ ಅನುಭವಿಸುತ್ತಾ ನೂರುವರ್ಷಗಳಕಾಲ ಸಂತೋಷದಿಂದ ಇದ್ದು ಅನಂತರ ಶರೀರತ್ಯಾಗಮಾಡಿ ಸ್ವರ್ಗಲೋಕಕ್ಕೆ ಹೋದನು

೪೭. ಶೌನಕನೇ ಮುಂತಾದ ಋಷಿಗಳು ರಾಜನು ಸ್ವರ್ಗಸ್ಥನಾದುದನ್ನು ತಿಳಿದು, ಸೂತಮಹರ್ಷಿಯ ಸಮೀಪಕ್ಕೆ ಹೋಗಿ ನಮಸ್ಕಾರಮಾಡಿ "ಅಯ್ಯಾ ಮಹಾತ್ಮನೇ! ಮುಖ್ಯವಾದ ಧರ್ಮವನ್ನು ನಮಗೆ ಈಗಲೇ ನೀನು ನಿರೂಪಣೆಮಾಡಬೇಕು" ಎಂದು ಕೇಳಿಕೊಂಡರು.

**ತೇಭ್ಯಃ ಸೂತಃ ಪುರಾಣಾನಿ ಶ್ರಾವಯಾಮಾಸ ವೈ ಪುನಃ ।**
**ಶತವರ್ಷಂ ಪಂಚಲಕ್ಷಶ್ಲೋಕಮಧ್ಯಾಪಯನ್ ಮುದಾ ।**
**ತೇ ಶ್ರುತ್ವಾ ಮುನಯಃ ಸರ್ವೇ ಜಗ್ಮುರ್ಹರ್ಷಾಃ ಸ್ವಮಾಲಯಂ ॥ ೧೮ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ತ್ರಯೋವಿಂಶೋಽಧ್ಯಾಯಃ.**



---

೧೮. ಆಗ ಸೂತಮಹರ್ಷಿಯು ಅವರಿಗೆ ಮತ್ತೆ ಹೇಳಲು ಉದ್ದೇಶಿಸಿ, ಐದು ಲಕ್ಷ ಸಂಖ್ಯೆಯ ಶ್ಲೋಕಗಳುಳ್ಳ ಪುರಾಣಗಳನ್ನು ನೂರುವರ್ಷ ಪರ್ಯಂತ ಸಂತೋಷದಿಂದ ಭೋಧಿಸಿ ಪುರಾಣಶ್ರವಣ ಮಾಡಿಸಿದನು. ಅದನ್ನು ಕೇಳಿ ಋಷಿಗಳೆಲ್ಲರೂ ಹರ್ಷಯುಕ್ತರಾಗಿ ತಮ್ಮ ತಮ್ಮ ಸ್ಥಾನ (ಆಶ್ರಮ) ಗಳಿಗೆ ತೆರಳಿದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಪ್ರತಿಸರ್ಗಪರ್ವದ ಎರಡನೆಯ ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ಚತುರ್ವಿಂಶೋಽಧ್ಯಾಯಃ

॥ ವ್ಯಾಸ ಉವಾಚ ॥

ಏಕದಾ ನೈಮಿಷಾರಣ್ಯೇ ಋಷಯಃ ಶೌನಕಾದಯಃ ।
ಪೃಚ್ಛಂತಿ ವಿನಯೇನೈವ ಸೂತಂ ಪೌರಾಣಿಕಂ ಖಲು ॥ ೧ ॥

ಭಗವನ್ ಬ್ರೂಹಿ ಲೋಕಾನಾಂ ಹಿತಾರ್ಥಾಯ ಚತುರ್ಯುಗೇ ।
ಕಃ ಪೂಜ್ಯಃ ಸೇವಿತವ್ಯಶ್ಚ ವಾಂಛಿತಾರ್ಥಪ್ರದಾಯಕಃ ॥ ೨ ॥

ವಿನಾಯಾಸೇನ ವೈ ಕಾಮಂ ಪ್ರಾಪ್ನುಯುರ್ಮಾನವಾಃ ಶುಭಂ ।
ಸತ್ಯಂ ಬ್ರಹ್ಮನ್ ವದೋಪಾಯಂ ನರಾಣಾಂ ಕೀರ್ತಿಕಾರಕಂ ॥ ೩ ॥

---

## ಹದಿನೆಂಟನೆಯ ಅಧ್ಯಾಯ

೧-೩. ವ್ಯಾಸಮುನಿವರ್ಯನು ಹೇಳುತ್ತಾನೆ–ನೈಮಿಶಾರಣ್ಯವಾಸಿಗಳಾದ ಶೌನಕಾದಿ ಮಹರ್ಷಿಗಳು ಒಂದುದಿನ ಸೂತಪುರಾಣಿಕನನ್ನು ಕುರಿತು “ಓ ಪೂಜ್ಯನೇ ! ನಾಲ್ಕು ಯುಗಗಳಲ್ಲಿಯೂ ಪೂಜಾರ್ಹನೂ, ಎಲ್ಲರಿಂದಲೂ ಸೇವಿಸಲ್ಪಡುವವನೂ, ಎಲ್ಲರಿಗೂ ಇಷ್ಟಾರ್ಥಗಳನ್ನು ಕೊಡತಕ್ಕವನೂ, ಆದ ದೇವನು ಯಾರು ? ಮಾನವರು ವಿಶೇಷ ಶ್ರಮವಿಲ್ಲದೆಯೇ ಶುಭಕರವಾದ ತಮ್ಮ ಇಷ್ಟಾರ್ಥವನ್ನು ಪಡೆಯುವುದು ಹೇಗೆ ? ಮನುಷ್ಯನಿಗೆ ಕೀರ್ತಿಯು ಸತ್ಯವಾಗಿ ಲಭ್ಯವಾಗತಕ್ಕ ಯಾವುದಾದರೂ ಒಂದು ಉಪಾಯವನ್ನು ಲೋಕದ ಹಿತಕ್ಕಾಗಿ ಕರುಣಿಸಬೇಕು” ಎಂಬದಾಗಿ ವಿನಯದಿಂದ ಪ್ರಶ್ನೆ ಮಾಡಿದನು.

॥ ಸೂತ ಉವಾಚ ॥

ನವಾಂಭೋಜನೇತ್ರಂ ರಮಾಕೇಲಿಪಾತ್ರಂ ।
ಚತುರ್ಬಾಹುಚಾಮೀಕರಾಚಾರುಗಾತ್ರಂ ।
ಜಗತ್ತ್ರಾಣಹೇತುಂ ರಿಪೌ ಧೂಮ್ರಕೇತುಂ ।
ಸದಾ ಸತ್ಯನಾರಾಯಣಂ ಸ್ತೌಮಿ ದೇವಂ ॥ ೪ ॥

ಶ್ರೀರಾಮಂ ಸಹಲಕ್ಷ್ಮಣಂ ಸಕರುಣಂ ಸೀತಾನ್ವಿತಂ ಸಾತ್ತ್ವಿಕಂ ।
ವೈದೇಹೀಮುಖಪದ್ಮಲುಬ್ಧಮಧುಪಂ ಪೌಲಸ್ತ್ಯಸಂಹಾರಕಂ ।
ವಂದೇ ವಂದ್ಯಪದಾಂಬುಜಂ ಸುರವರಂ ಭಕ್ತಾನುಕಂಪಾಕರಂ ।
ಶತ್ರುಘ್ನೇನ ಹನೂಮತಾ ಚ ಭರತೇನಾಸೇವಿತಂ ರಾಘವಂ ॥ ೫ ॥

ಕಲಿಕಲುಷವಿನಾಶಂ ಕಾಮಸಿದ್ಧಿಪ್ರಕಾಶಂ ।
ಸುರವರಮುಖಭಾಸಂ ಭೂಸುರೇಣ ಪ್ರಕಾಶಂ ।

---

೪. ಆಗ ಸೂತಮುನಿವರ್ಯನು ಉತ್ತರ ಹೇಳತೊಡಗಿದನು—" ಎಲೈ ಋಷಿಗಳೇ ! ನೂತನವಾಗಿ ಅರಳಿದ ಕಮಲದಂತೆ ಕಣ್ಣುಳ್ಳವನೂ, ಲಕ್ಷ್ಮೀದೇವಿಯೊಡನೆ ವಿಹರಿಸುವವನೂ, ನಾಲ್ಕು ತೋಳುಗಳುಳ್ಳವನೂ, ಭಂಗಾರದಂತೆ ಮನೋಹರವಾಗಿ ಶೋಭಿಸುವ ದೇಹವುಳ್ಳವನೂ, ಲೋಕಕ್ಕೆ ಪ್ರಾಣಪ್ರಿಯನಾದವನೂ, ಸರ್ವಶತ್ರುಗಳನ್ನೂ ಧ್ವಂಸಮಾಡಿದವನೂ, ಆದ ಸತ್ಯನಾರಾಯಣಸ್ವಾಮಿಯನ್ನು ಸದಾ ಸ್ತುತಿಸಬೇಕು.

೫. ಯಾವಾಗಲೂ ಲಕ್ಷ್ಮಣಸಹಿತನಾಗಿರುವವನೂ, ದಯಾಶಾಲಿಯೂ, ಸಾತ್ವಿಕನೂ, ಕಮಲದ ಮಕರಂದದಲ್ಲಿ ಭ್ರಮರವು ಆಸಕ್ತವಾಗಿರುವಂತೆ ಸೀತಾಮುಖದಲ್ಲಿ ಆಸಕ್ತನಾಗಿ ಅವಳೊಡನೆ ಇರುವವನೂ, ರಾವಣನನ್ನು ಧ್ವಂಸಮಾಡಿದವನೂ, ಸರ್ವರೂ ನಮಸ್ಕಾರಮಾಡಲು ಅರ್ಹವಾದ ಪಾದಕಮಲಗಳುಳ್ಳವನೂ, ದೇವಶ್ರೇಷ್ಠನೂ, ಭಕ್ತರಲ್ಲಿ ಕೃಪಾಳುವೂ, ಭರತ ಶತ್ರುಘ್ನ ಹನುಮಂತ ಇವರುಗಳಿಂದ ಸೇವಿಸಲ್ಪಡುವವನೂ ಆದ ಶ್ರೀರಾಮನನ್ನು ಸ್ತುತಿಸಬೇಕು.

೬. ಇದಲ್ಲದೆ ಕಲಿಯುಗದ ಪಾಪವನ್ನು ಧ್ವಂಸಮಾಡತಕ್ಕದ್ದೂ, ಇಷ್ಟಾರ್ಥಪ್ರದವಾದುದೆಂದು ಪ್ರಸಿದ್ಧವಾದುದೂ, ದೇವಶ್ರೇಷ್ಠನ ಮೂಲಕ ಪ್ರಕಾಶವಾದುದೂ, ಬ್ರಾಹ್ಮಣಶ್ರೇಷ್ಠನಿಂದ ಉಕ್ತವಾದುದೂ, ದೇವತೆಗಳಿಗೂ ವಿದ್ವಾಂಸರಿಗೂ ಸಂತೋಷ

ವಿಬುಧಜನವಿಲಾಸಂ ಸಾಧುಚರ್ಯಾವಿಶೇಷಂ ।
ನೃಪತಿವರಚರಿತ್ರಂ ಭೋಃ ಶೃಣುಷ್ವೇತಿಹಾಸಂ ॥ ೬ ॥

ಏಕದಾ ನಾರದೋ ಯೋಗೀ ಪರಾನುಗ್ರಹವಾಂಛಯಾ ।
ಪರ್ಯಟನ್ ವಿವಿಧಾಲ್ಲೋಕಾನ್ ಮರ್ತ್ಯಲೋಕಮುಪಾಗಮತ್ ॥ ೭ ॥

ತತ್ರ ದೃಷ್ಟ್ವಾ ಜನಾನ್ ಸರ್ವಾನ್ ನಾನಾಕ್ಲೇಶಸಮನ್ವಿತಾನ್ ।
ಆಧಿವ್ಯಾಧಿಯುತಾನಾರ್ತಾನ್ ಪಚ್ಯಮಾನಾನ್ ಸ್ವಕರ್ಮಭಿಃ ॥ ೮ ॥

ಕೇನೋಪಾಯೇನ ಚೈತೇಷಾಂ ದುಃಖನಾಶೋ ಭವೇದ್ಧ್ರುವಂ ।
ಇತಿ ಸಂಚಿಂತ್ಯ ಮನಸಾ ವಿಷ್ಣುಲೋಕಂ ಗತಸ್ಸದಾ ॥ ೯ ॥

ತತ್ರ ನಾರಾಯಣಂ ದೇವಂ ಶುಕ್ಲವರ್ಣಂ ಚತುರ್ಭುಜಂ ।
ಶಂಖಚಕ್ರಗದಾಪದ್ಮವನಮಾಲಾವಿಭೂಷಿತಂ ॥ ೧೦ ॥

---

ಪ್ರದವಾದುದೂ, ಸಾಧುಸಜ್ಜನರ ಅಸಾಧಾರಣವಾದ ನಡವಳಿಕೆಯನ್ನು ತೋರಿಸಿ ಕೊಡತಕ್ಕದ್ದೂ, ಆಗಿರುವ ರಾಜಶ್ರೇಷ್ಠರ ಚರಿತ್ರವಾದ ಭಾರತ ಮುಂತಾದ ಪುರಾಣ ಇತಿಹಾಸ ಇವನ್ನು ಶ್ರವಣಮಾಡಬೇಕು " ಎಂಬದಾಗಿ ಹೇಳಿದನು

೭. ಒಂದಾನೊಂದು ದಿನ ಯೋಗೀಂದ್ರನಾದ ನಾರದಮಹರ್ಷಿಯು ಜನರಿಗೆ ಅನುಗ್ರಹಮಾಡಬೇಕೆಂಬ ಅಪೇಕ್ಷೆಯಿಂದ ನಾನಾ ಲೋಕಗಳಲ್ಲಿ ಸಂಚಾರ ಮಾಡುತ್ತಾ ಭೂಲೋಕಕ್ಕೆ ಬಂದನು.

೮. ಅಲ್ಲಿ ಅನೇಕ ದುಃಖಗಳಿಗೆ ಒಳಗಾಗಿರುವವರು ಎಂದರೆ ಮನೋವ್ಯಥೆ ಗೀಡಾದವರು, ದೇಹಾಲಸ್ಯದಿಂದ ನರಳುವವರು, ತಮ್ಮ ಪೂರ್ವಕರ್ಮಾನುಸಾರ ವಾಗಿ ಸಂತಾಪಕ್ಕೆ ಗುರಿಯಾದವರು ಹೀಗೆ ಬಹುಪ್ರಕಾರವಾಗಿ ದುಃಖಪಡುತ್ತಿರುವ ಜನರನ್ನು ಕಂಡನು.

೯. ಇವರುಗಳ ದುಃಖವು ಶಾಶ್ವತವಾಗಿ ನಿವಾರಣೆಯಾಗುವುದಕ್ಕೆ ಉಪಾ ಯುವೇ ಇಲ್ಲವೇ ? ಎಂಬದಾಗಿ ಅವನ ಮನಸ್ಸು ಆಲೋಚನಾಮಗ್ನವಾಗಿತ್ತು. ಅಲ್ಲಿಂದ ಮುಂದೆ ಸಾಗಿ ವಿಷ್ಣುಲೋಕಕ್ಕೆ ಬಂದನು.

೧೦-೧೧. ಅಲ್ಲಿ ಶುಭ್ರವಾದ ಮೈಬಣ್ಣ, ಶಂಖ ಚಕ್ರ, ಗದಾ ಪದ್ಮಗಳಿಂದ ಶೋಭಿತವಾದ ನಾಲ್ಕು ತೋಳುಗಳು ಉಳ್ಳವನಾಗಿ, ವನಮಾಲೆಯನ್ನು ಧರಿಸಿಕೊಂಡು

ಪ್ರಸನ್ನವದನಂ ಶಾಂತಂ ಸನಕಾದ್ಯೈರಭಿಷ್ಟುತಂ ।
ದೃಷ್ಟ್ವಾ ತಂ ದೇವದೇವೇಶಂ ಸ್ತೋತುಂ ಸಮುಪಚಕ್ರಮೇ ॥ ೧೧ ॥

॥ ನಾರದ ಉವಾಚ ॥
ನಮೋ ವಾಙ್ಮನಸಾತೀತರೂಪಾಯಾನಂತಶಕ್ತಯೇ ।
ನಾದಿಮಧ್ಯಾಂತದೇವಾಯ ನಿರ್ಗುಣಾಯ ಮಹಾತ್ಮನೇ ॥ ೧೨ ॥

ಸರ್ವೇಷಾಮಾದಿಭೂತಾಯ ಲೋಕಾನಾಮುಪಕಾರಿಣೇ ।
ಅಪಾರಪರಿಮಾಣಾಯ ತಪೋಧಾಮ್ನೇ ನಮೋನಮಃ ॥ ೧೩ ॥

॥ ಸೂತ ಉವಾಚ ॥
ಇತಿ ಶ್ರುತ್ವಾ ಸ್ತುತಿಂ ವಿಷ್ಣುರ್ನಾರದಂ ಪ್ರತ್ಯಭಾಷತ ।
ಕಿಮರ್ಥಮಾಗತೋಽಸಿ ತ್ವಂ ಕಿಂ ತೇ ಮನಸಿ ವರ್ತತೇ ॥ ೧೪ ॥

---

ಮಹಾವಿಷ್ಣುವು ನಗೆಮೊಗದಿಂದ ಕೂಡಿ ಶಾಂತನಾಗಿ ಕುಳಿತಿದ್ದನು. ಸನಕ ಸನಂದ ನಾದಿಗಳು ಅವನನ್ನು ಸ್ತುತಿಸುತ್ತಿದ್ದರು. ಇಂಥಾ ದೇವದೇವನನ್ನು ಸಂದರ್ಶಿಸಿ ನಾರದನೂ ಸ್ತುತಿಸಲು ತೊಡಗಿದನು.

೧೨-೧೩. ನಾರದನು ಹೇಳುತ್ತಾನೆ—"ಯತೋವಾಚೋ ನಿವರ್ತಂತೆ ಅಪ್ರಾಪ್ಯಮನಸಾ ಸಹ" ಎಂಬ ಶ್ರುತಿಯಂತೆ ಮಾತುಗಳಿಂದ ವರ್ಣಿಸಲು ಅಸಾಧ್ಯನೆನಿಸಿ, ಮನಸ್ಸಿಗೂ ಊಹಿಸಲು ಅಸಾಧ್ಯವಾದ ರೂಪುಳ್ಳವನಾದ ಅಪಾರಮಹಿಮನೇ ! ಆದಿ, ಮಧ್ಯ, ಅಂತ ಇವು ಇಲ್ಲದವನೇ ! ಗುಣರಹಿತನೇ ! ಸಮಸ್ತಕ್ಕೂ ಆದಿಭೂತನೇ ! ಲೋಕೋಪಕಾರಿಯೇ ! ಅನಂತವಾದ ಪರಿಮಾಣವುಳ್ಳವನೇ (ಅಪ್ರಮೇಯನೇ) ! ತಪಸ್ವಿಗಳ ಹೃದಯದಲ್ಲಿ ನೆಲಸಿರುವವನೇ ! ನಿನಗೆ ನಮಸ್ಕಾರ" (ಎಂಬದಾಗಿ ಭಜಿಸಿದನು.)

೧೪-೧೫. ಪುನಃ ಸೂತಮುನಿವರ್ಯನು ಹೇಳುತ್ತಾನೆ — ಮಹಾವಿಷ್ಣುವು ನಾರದನ ಈ ಸ್ತೋತ್ರವನ್ನು ಕೇಳಿ ಆತನನ್ನು ಇಂತು ಮಾತನಾಡಿಸಿದನು. "ಪೂಜ್ಯನೇ ! ಏತಕ್ಕಾಗಿ ಬಂದೆ? ನಿನ್ನ ಮನಸ್ಸಿನ ಆಶಯವೇನಿದೆ? ಹೇಳು. ನೀನು ಏನು ಕೇಳಿದರೂ ಅವಕ್ಕೆಲ್ಲಾ ಸರಿಯಾದ ಉತ್ತರ ಹೇಳುತ್ತೇನೆ" ಎಂದು ಹೇಳಿದನು.

ಕಥಯಸ್ವ ಮಹಾಭಾಗ ತತ್ಸರ್ವಂ ಕಥಯಾಮಿ ತೇ ।
ಶ್ರುತ್ವಾ ತು ನಾರದೋ ವಿಷ್ಣುಮುಕ್ತವಾನ್ ಸರ್ವಕಾರಣಂ ॥ ೧೫ ॥

ನಾರದಸ್ಯ ವಚಃ ಶ್ರುತ್ವಾ ಸಾಧುಸಾಧ್ವಿತ್ಯಪೂಜಯತ್ ।
ಶೃಣು ನಾರದ ವಕ್ಷ್ಯಾಮಿ ವ್ರತಮೇಕಂ ಸನಾತನಂ ॥ ೧೬ ॥

ಕೃತೇ ತ್ರೇತಾಯುಗೇ ವಿಷ್ಣುರ್ದ್ವಾಪರೇಽನೇಕರೂಪಧೃಕ್ ।
ಕಲೌ ಪ್ರತ್ಯಕ್ಷಫಲದಃ ಸತ್ಯನಾರಾಯಣೋ ವಿಭುಃ ॥ ೧೭ ॥

ಚತುಷ್ಪಾದೋ ಹಿ ಧರ್ಮಸ್ಯ ತಸ್ಯ ಸತ್ಯಂ ಪ್ರಸಾಧನಂ ।
ಸತ್ಯೇನ ಧಾರ್ಯತೇ ಲೋಕಃ ಸತ್ಯೇ ಬ್ರಹ್ಮ ಪ್ರತಿಷ್ಠಿತಂ ॥ ೧೮ ॥

ಸತ್ಯನಾರಾಯಣವ್ರತಮತಃ ಶ್ರೇಷ್ಠತಮಂ ಸ್ಮೃತಮ್ ।
ಇತಿ ಶ್ರುತ್ವಾ ಹರೇರ್ವಾಕ್ಯಂ ನಾರದಃ ಪುನರಬ್ರವೀತ್ ॥ ೧೯ ॥

---

ವಿಷ್ಣುಪರಮಾತ್ಮನು ಹೀಗೆ ಹೇಳಿದುದನ್ನು ಕೇಳಿ ನಾರದನು ತಾನು ಬಂದುದರ ಕಾರಣವೆಲ್ಲವನ್ನೂ ವಿಷ್ಣುವಿಗೆ ಹೇಳಿದನು.

೧೬. ವಿಷ್ಣುವು ನಾರದನ ಮಾತನ್ನು ಕೇಳಿ "ನೀನು ಕೇಳಿದ್ದು ಸಾಧು ನ್ಯಾಯ" ಎಂದು ಶ್ಲಾಘಿಸಿ "ಎಲೈ ನಾರದನೇ! ಪುರಾತನವಾದ ಒಂದು ವ್ರತವನ್ನು ಹೇಳುವೆನು ಕೇಳು".

೧೭-೧೮- "ಕೃತ, ತ್ರೇತಾಯುಗಗಳಲ್ಲಿ ವಿಷ್ಣುವೆನಿಸಿಕೊಂಡವನೇ ಮುಂದೆ, ದ್ವಾಪರಯುಗದಲ್ಲಿ ಅನೇಕ ರೂಪಗಳನ್ನು ಧರಿಸಿದ್ದು, ಕಲಿಯುಗದಲ್ಲಿ ಸತ್ಯನಾರಾಯಣ ಎನ್ನಿಸಿಕೊಂಡು ಭಕ್ತರಿಗೆ ಶೀಘ್ರದಲ್ಲಿ ಪ್ರತ್ಯಕ್ಷ ಫಲವನ್ನು ಕೊಡುವನು. ಲೋಕದಲ್ಲಿ ಧರ್ಮವು ನಾಲ್ಕು ಪಾದಗಳನ್ನುಳ್ಳದ್ದು. ಹಾಗೆ ನಾಲ್ಕು ಪಾದಗಳೂ ಇರುವುದಕ್ಕೆ ಸತ್ಯವೇ ಮುಖ್ಯಸಾಧನ. ಸತ್ಯದಿಂದಲೇ ಲೋಕವು ಸ್ಥಿರವಾಗಿನಿಂತಿದೆ ಸತ್ಯದಲ್ಲಿಯೇ ಬ್ರಹ್ಮಸ್ವರೂಪವು ನೆಲಸಿದೆ.

೧೯-೨೦. "ಆದಕಾರಣ ಸತ್ಯನಾರಾಯಣವ್ರತವು ಶ್ರೇಷ್ಠವಾದುದೆಂದು ತಿಳಿಯಬೇಕು" ಎಂಬದಾಗಿ ವಿಷ್ಣು ಹೇಳಿದನು. ನಾರದನು ಇದನ್ನು ಕೇಳಿ ಮತ್ತೆ ಪ್ರಶ್ನಿಸಲು ಆಶಿಸಿ "ಸ್ವಾಮಿ! ಆ ಸತ್ಯನಾರಾಯಣ ವ್ರತಮಾಡುವ ಕ್ರಮವು

ಕಿಂ ಫಲಂ ಕಿಂ ವಿಧಾನಂ ಚ ಸತ್ಯನಾರಾಯಣಾರ್ಚನೇ ।
ತತ್ಸರ್ವಂ ಕೃಪಯಾ ದೇವ ಕಥಯಸ್ವ ಕೃಪಾನಿಧೇ ॥ ೨೦ ॥

॥ ಭಗವಾನುವಾಚ ॥

ನಾರಾಯಣಾರ್ಚನೇ ವಕ್ತುಂ ಫಲಂ ನಾಲಂ ಚತುರ್ಮುಖಃ ।
ಶೃಣು ಸಂಕ್ಷೇಪತೋ ಹ್ಯೇತತ್ಕಥಯಾಮಿ ತವಾಗ್ರತಃ ॥ ೨೧ ॥

ನಿರ್ಧನೋಽಪಿ ಧನಾಢ್ಯಃ ಸ್ಯಾದಪುತ್ರಃ ಪುತ್ರವಾನ್ ಭವೇತ್ ।
ಭ್ರಷ್ಟರಾಜ್ಯೋ ಲಭೇದ್ರಾಜ್ಯಮಂಧೋಽಪಿ ಸ್ಯಾತ್ಸುಲೋಚನಃ ॥ ೨೨ ॥

ಮುಚ್ಯತೇ ಬಂಧನಾದ್ಬದ್ಧೋ ನಿರ್ಭಯಃ ಸ್ಯಾದ್ಭಯಾತುರಃ ।
ಮನಸಾ ಕಾಮಯೇದ್ಯಂಯಂ ಲಭತೇ ತಂ ವಿಧಾನತಃ ॥ ೨೩ ॥

ಇಹ ಜನ್ಮನಿ ಭೋ ವಿಪ್ರ ಭಕ್ತ್ಯಾ ಚ ವಿಧಿನಾರ್ಚಯೇತ್ ।
ಲಭೇತ್ಕಾಮಂ ಹಿ ತಚ್ಛೀಘ್ರಂ ನಾತ್ರ ಕಾರ್ಯಾ ವಿಚಾರಣಾ ॥ ೨೪ ॥

---

ಯಾವುದು ? ಆ ವ್ರತಮಾಡಿದುದರಿಂದ ಬರುವ ಫಲವೇನು ? ದಯಾನಿಧಿಯೇ ! ದಯೆಯಿಟ್ಟು ಅದೆಲ್ಲವನ್ನೂ ಹೇಳಬೇಕು " ಎಂದು ಕೇಳಿದನು.

೨೧-೨೩. ಆ ಮಾತನ್ನು ಕೇಳಿ ಭಗವಂತನು ಉತ್ತರ ಹೇಳುವನಾಗಿ "ಸತ್ಯ ನಾರಾಯಣ ಪೂಜೆಯ ಫಲವನ್ನು ವಿವರಿಸುವುದಕ್ಕೆ ನಾಲ್ಕು ಮುಖಗಳುಳ್ಳ ಬ್ರಹ್ಮನೂ ಸಮರ್ಥನಾಗಲಾರನು, ಈಗ ನಿನಗೆ ಅದನ್ನು ಸಂಗ್ರಹವಾಗಿ ಹೇಳುವೆನು ಕೇಳು, ದರಿದ್ರನು ಪೂಜಿಸಿದರೆ ಧನಿಕನಾಗುವನು, ಮಕ್ಕಳಿಲ್ಲದವನು ಈ ವ್ರತಮಾಡಿದರೆ ಮಕ್ಕಳನ್ನು ಪಡೆಯುವನು. ರಾಜ್ಯಭ್ರಷ್ಟನು ವ್ರತಮಾಡಿದರೆ ಮತ್ತೆ ರಾಜ್ಯವನ್ನು ಪಡೆಯುವನು. ಕುರುಡನು ವ್ರತಮಾಡಿದರೆ ಅವನಿಗೆ ಕಣ್ಣು ಬರುವುದು. ಬಂಧನಕ್ಕೆ ಸಿಕ್ಕಿದವನು ಈ ವ್ರತಮಾಡಿದರೆ ಬಿಡುಗಡೆ ಹೊಂದುವನು. ಭಯಪೀಡಿತನಾದವನ ಭಯವು ನಿವಾರಣೆಯಾಗುವುದು. ಶಾಸ್ತ್ರೋಕ್ತವಿಧಾನದಿಂದ ಈ ವ್ರತಮಾಡಿದರೆ ಮನಸ್ಸಿನಲ್ಲಿ ಏನೇನನ್ನು ಅಪೇಕ್ಷಿಸುವನೋ ಅದೆಲ್ಲವನ್ನೂ ಪಡೆಯುವನು."

೨೪. " ಎಲೈ ವಿಪ್ರವರ್ಯನಾದ ನಾರದನೇ! ಈ ಜನ್ಮದಲ್ಲಿ ವಿಧಿಪ್ರಕಾರ ಭಕ್ತಿಯುಕ್ತನಾಗಿ ಪೂಜಿಸಿದವನು. ತಾನು ಆಶಿಸಿದುದೆಲ್ಲವನ್ನೂ ಶೀಘ್ರದಲ್ಲಿ ಪಡೆಯುವನು. ಈ ವಿಷಯದಲ್ಲಿ ಏನೂ ಸಂಶಯಪಡಬೇಕಾಗಿಲ್ಲ.

**ಪ್ರಾತಃ ಸ್ನಾಯೀ ಶುಚಿರ್ಭೂತ್ವಾ ದಂತಧಾವನಪೂರ್ವಕಂ ।**
**ತುಲಸೀಮಂಜರೀಂ ಧೃತ್ವಾ ಧ್ಯಾಯೇತ್ಸತ್ಯಸ್ಥಿತಂ ಹರಿಂ ॥ ೨೫ ॥**

**ನಾರಾಯಣಂ ಸಾಂದ್ರಘನಾವದಾತಂ ।**
**ಚತುರ್ಭುಜಂ ಪೀತಮಹಾರ್ಹವಾಸಸಂ ॥**
**ಪ್ರಸನ್ನವಕ್ತ್ರಂ ನವಕಂಜಲೋಚನಂ ।**
**ಸನಂದನಾದ್ಯೈರುಪಸೇವಿತಂ ಭಜೇ ॥ ೨೬ ॥**

**ಕರೋಮಿ ತೇ ವ್ರತಂ ದೇವ ಸಾಯಂಕಾಲೇ ತ್ವದರ್ಚನಂ ।**
**ಶ್ರುತ್ವಾ ಗಾಥಾಂ ತ್ವದೀಯಾಂ ಹಿ ಪ್ರಸಾದಂ ತೇ ಭಜಾಮ್ಯಹಂ ॥ ೨೭ ॥**

**ಇತಿ ಸಂಕಲ್ಪ್ಯ ಮನಸಾ ಸಾಯಂಕಾಲೇ ಪ್ರಪೂಜಯೇತ್ ।**
**ಪಂಚಭಿಃ ಕಲಶೈರ್ಜುಷ್ಟಂ ಕದಲೀತೋರಣಾನ್ವಿತಂ ॥ ೨೮ ॥**

---

೨೫. ಬೆಳಗ್ಗೆ ಎದ್ದು ನಿಯಮಪ್ರಕಾರ ದಂತಕಾಷ್ಠದಿಂದ ಹಲ್ಲನ್ನುಜ್ಜಿ, ಬಳಿಕ ಸ್ನಾನಮಾಡಿ ಶುಚಿರ್ಭೂತನಾಗಿ, ತುಲಸೀದಳಗಳ ಗೊಂಚಲನ್ನು ಹಿಡಿದುಕೊಂಡು ಸತ್ಯಸ್ಥಿತನಾದ ವಿಷ್ಣುವನ್ನು ಹೀಗೆ ಸ್ಮರಿಸಬೇಕು.

೨೬. " ಸಾಂದ್ರವಾದ ಮೇಘದಂತೆ ಬಣ್ಣವುಳ್ಳವನೂ, ನಾಲ್ಕುಭುಜಗಳುಳ್ಳವನೂ, ಹೊಂಬಣ್ಣವುಳ್ಳ ಶ್ರೇಷ್ಠವಾದ ಪೀತಾಂಬರವನ್ನು ಧರಿಸಿದವನೂ, ಹರ್ಷಯುಕ್ತವಾದ ಮುಖವುಳ್ಳವನೂ ನವವಿಕಸಿತವಾದ ಕಮಲದಂತೆ ಕಣ್ಣುಳ್ಳವನೂ, ಸನಂದನನೇ ಮೊದಲಾದವರಿಂದ ಪೂಜಿಸಲ್ಪಡುವವನೂ ಆದ ನಾರಾಯಣನನ್ನು ಧ್ಯಾನಿಸುವೆನು "

೨೭. " ಸ್ವಾಮೀ ಪರಮಾತ್ಮಾ ! ನಾನು ನಿನ್ನ ವ್ರತವನ್ನು ಮಾಡಬೇಕೆಂದು ಮನಸ್ಸುಮಾಡಿದ್ದೇನೆ. ಸಾಯಂಕಾಲ ನಿನ್ನ ಪೂಜೆಯನ್ನು ಮಾಡುತ್ತೇನೆ. ಪೂಜಾನಂತರ ವ್ರತಕ್ಕೆ ಅಂಗವಾಗಿ ಕಥೆಯನ್ನು ಶ್ರವಣಮಾಡಿ ಬಳಿಕ ಪ್ರಸಾದವನ್ನು ಸೇವಿಸುತ್ತೇನೆ" ಎಂಬದಾಗಿ ಮನದಲ್ಲಿ ಸಂಕಲ್ಪಮಾಡಬೇಕು.

೨೮. ಸಾಯಂಕಾಲ ಪೂಜಾಸಂಭಾರಗಳನ್ನು ಸಿದ್ಧಪಡಿಸಿಕೊಂಡು ಪೂಜಾರ್ಥವಾಗಿ ಪೀಠದಮೇಲೆ ಐದು ಕಲಶಗಳನ್ನು ಸ್ಥಾಪಿಸಿ ಪೂಜಾಮಂಟಪವನ್ನು ಬಾಳೆಯ ಕಂಬ ಮಾವಿನತೋರಣ ಇವುಗಳಿಂದ ಅಲಂಕರಿಸಬೇಕು.

ಶಾಲಗ್ರಾಮಂ ಸ್ವರ್ಣಯುಕ್ತಂ ಪೂಜಯೇದಾತ್ಮಸೂಕ್ತಕೈಃ ।
ಪಂಚಾಮೃತೇನ ಸಂಸ್ನಾಪ್ಯ ಚಂದನಾದಿಭಿರರ್ಚಯೇತ್ ॥ ೨೯ ॥

ಓಂ ನಮೋ ಭಗವತೇ ನಿತ್ಯಂ ಸತ್ಯದೇವಾಯ ಧೀಮಹಿ ।
ಚತುಃಪದಾರ್ಥದಾತ್ರೇ ಚ ನಮಸ್ತುಭ್ಯಂ ನಮೋನಮಃ ॥ ೩೦ ॥

ಜಪ್ತ್ವೇತ್ಯಷ್ಟೋತ್ತರಶತಂ ಜುಹುಯಾತ್ತದ್ದಶಾಂಶಕಂ ।
ತರ್ಪಣಂ ಮಾರ್ಜನಂ ಕೃತ್ವಾ ಕಥಾಂ ಶ್ರುತ್ವಾ ಹರೇರಿಮಾಂ ॥ ೩೧ ॥

ಷಡಧ್ಯಾಯೀಂ ಸತ್ಯಮುಖ್ಯಾಂ ತತ್ಪಶ್ಚಾತ್ತತ್ಪ್ರಸಾದಕಂ ।
ಸಮ್ಯಗ್ವಿಭಜ್ಯ ತತ್ಸರ್ವಂ ದಾಪಯೇಚ್ಛ್ರೋತೃಕಾಯ ಚ ॥ ೩೨ ॥

---

೨೯. ಸ್ವರ್ಣ ಪ್ರತಿಮೆ, ಸಾಲಿಗ್ರಾಮ ಇವನ್ನು ತಟ್ಟೆಯಲ್ಲಿಟ್ಟುಕೊಂಡು ಪಂಚಾಮೃತಸ್ನಾನಮಾಡಿಸಬೇಕು. ಪುರುಷಸೂಕ್ತ ಮಂತ್ರಪೂರ್ವಕವಾಗಿ ಶುದ್ಧೋದಕದಿಂದ ಅಭಿಷೇಕಮಾಡಬೇಕು, ಅನಂತರ ವಸ್ತ್ರ ಗಂಧ ಮೊದಲಾದುವುಗಳಿಂದ ಪೂಜಿಸಬೇಕು.

೩೦ "ಓಂ ನಮೋ ಭಗವತೇ........ನಮೋನಮಃ" ಈ ಮಂತ್ರವನ್ನು ನೂರೆಂಟುಸಾರಿ ಜಪಮಾಡಬೇಕು. (ನಾಲ್ಕು ಪುರುಷಾರ್ಥಗಳನ್ನು ಕೊಡತಕ್ಕವನೂ, ಷಡ್ಗುಣೈಶ್ವರ್ಯ ಸಂಪನ್ನನೂ, ಪ್ರಣವಸ್ವರೂಪನೂ ಆದ ಸತ್ಯನಾರಾಯಣಸ್ವಾಮಿಯೇ! ನಿನಗೆ ಅನೇಕ ನಮಸ್ಕಾರಗಳು ಎಂಬುದು ಆ ಮಂತ್ರದ ಅರ್ಥ).

೩೧. ವ್ರತೋದ್ಯಾಪನೆಗೆ ಅಂಗವಾದ ಹೋಮಮಾಡುವ ಸಂದರ್ಭದಲ್ಲಿ, ಇದೇ ಮಂತ್ರಪೂರ್ವಕವಾಗಿ ಅದರ ಹತ್ತರಲ್ಲೊಂದು ಭಾಗದಷ್ಟು ಆಹುತಿ ಹೋಮ ಮಾಡಬೇಕು. ಅನಂತರ ವ್ರತಸಮರ್ಪಣೆಮಾಡಿ ಪ್ರಸನ್ನಾರ್ಘ್ಯಕೊಟ್ಟು, ಮಾರ್ಜನೆ ಮಾಡಿಕೊಳ್ಳಬೇಕು.

೩೨-೩೩. ಆಮೇಲೆ ಸತ್ಯನಾರಾಯಣ ಮಹಿಮಾತ್ಮಕವಾದುದೆನಿಸಿ ಆರು ಅಧ್ಯಾಯಗಳುಳ್ಳ ಕಥೆಯನ್ನು ಶ್ರವಣಮಾಡಬೇಕು. ಆಮೇಲೆ ನಿವೇದನಮಾಡಿದ ಸಪಾದ ಭಕ್ಷ್ಯಪ್ರಸಾದವನ್ನು ನಾಲ್ಕುಭಾಗಮಾಡಿ ಒಂದು ಭಾಗವನ್ನು ಆಚಾರ್ಯನಿಗೆ

ಆಚಾರ್ಯೋಯಾದಿಭಾಗಂ ಚ ದ್ವಿತೀಯಂ ಸ್ವಕುಲಾಯ ಸಃ ।
ಶ್ರೋತೃಭ್ಯಶ್ಚ ತೃತೀಯಂ ಚ ಚತುರ್ಥಂ ಚಾತ್ಮಹೇತವೇ ॥ ೩೩ ॥

ವಿಪ್ರೇಭ್ಯೋ ಭೋಜನಂ ದದ್ಯಾತ್ಸ್ವಯಂ ಭುಂಜೀತ ವಾಗ್ಯತಃ ।
ದೇವರ್ಷೇಽನೇನ ವಿಧಿನಾ ಸತ್ಯನಾರಾಯಣಾರ್ಚನಂ ॥ ೩೪ ॥

ಕಾರಯೇದ್ಯದಿ ಭಕ್ತ್ಯಾ ಚ ಶ್ರದ್ಧಯಾ ಚ ಸಮನ್ವಿತಃ ।
ವ್ರತೀ ಕಾಮಾನವಾಪ್ನೋತಿ ವಾಂಛಿತಾನೀಹ ಜನ್ಮನಿ ॥ ೩೫ ॥

ಇಹಜನ್ಮಕೃತಂ ಕರ್ಮ ಪರಜನ್ಮನಿ ಪದ್ಯತೇ ।
ಪರಜನ್ಮಕೃತಂ ಕರ್ಮ ಭೋಕ್ತವ್ಯಂ ಸರ್ವದಾ ನರೈಃ ॥ ೩೬ ॥

ಸತ್ಯನಾರಾಯಣವ್ರತಮಿಹ ಸರ್ವಾನ್ ಕಾಮಾನ್ ದದಾತಿ ಹಿ ।
ಅದ್ಯೈವ ಜಗತೀಮಧ್ಯೇ ಸ್ಥಾಪಯಾಮಿ ತ್ವದಾಜ್ಞಯಾ ॥ ೩೭ ॥

---

ಕೊಡಬೇಕು. ಇನ್ನೊಂದು ಪಾಲನ್ನು ತನ್ನ ಕುಟುಂಬದ ಬಾಂಧವರಿಗೂ, ಮತ್ತೊಂದು ಪಾಲನ್ನು ಕಥಾಶ್ರವಣಮಾಡಲು ಬಂದಿದ್ದವರಿಗೂ ಕೊಟ್ಟು, ಉಳಿದ ಇನ್ನೊಂದು ಪಾಲನ್ನು ತಾನು ಸೇವಿಸಬೇಕು.

೩೪-೩೫. ಅನಂತರ ಬ್ರಾಹ್ಮಣರಿಗೆ ಸಂತರ್ಪಣೆಮಾಡಿಸಿ ತಾನು ಮೌನದಿಂದ ಭೋಜನಮಾಡಬೇಕು. ಎಲೈ ನಾರದನೇ! ಶ್ರದ್ಧಾಭಕ್ತಿಯಿಂದ ಈ ವಿಧಿಪ್ರಕಾರ ಸತ್ಯನಾರಾಯಣ ಪೂಜೆಯನ್ನು ಮಾಡಿದ ಪುಣ್ಯಾತ್ಮನು, ಇಹಲೋಕದಲ್ಲಿ ತನ್ನ ಅಭೀಷ್ಟಗಳನ್ನೆಲ್ಲಾ ಪಡೆಯುವನು. ಈ ಜನ್ಮದಲ್ಲಿ ಮಾಡಿದ ಕರ್ಮವು ಇನ್ನೊಂದು ಜನ್ಮಕ್ಕೂ ಅನುಸರಿಸುತ್ತದೆ.

೩೬-೩೭. ಜನ್ಮಾಂತರದಲ್ಲಿ ಮಾಡಿದ ಕರ್ಮದ ಫಲವನ್ನು ಮಾನವನು ಸರ್ವದಾ ಅನುಭವಿಸಬೇಕಾಗುವುದು. ಈ ಸತ್ಯನಾರಾಯಣ ವ್ರತವನ್ನು ಆಚರಿಸಿದವನಿಗೆ, ಸ್ವಾಮಿಯು ಇಹದಲ್ಲಿ ಸಮಸ್ತ ಇಷ್ಟಾರ್ಥಗಳನ್ನೂ ಕೊಡುತ್ತಾನೆ." ಎಂಬುದಾಗಿ ಹೇಳಿ ಮಹಾವಿಷ್ಣುವು ಅಂತರ್ಧಾನನಾದನು. ನಿನ್ನ ಅಪ್ಪಣೆಯಿಂದ ಈಗಲೇ ಜಗತ್ತಿನಲ್ಲಿ ಇದನ್ನು ಸ್ಥಾಪನೆಮಾಡುತ್ತೇನೆ ಎಂದುಕೊಂಡು ನಾರದನೂ ಸ್ವರ್ಗ

**ಇತ್ಯುಕ್ತ್ವಾಂತರ್ದಧೇ ದೇವೋ ನಾರದಃ ಸ್ವರ್ಗತಿಂ ಯಯೌ ।**
**ಸ್ವಯಂ ನಾರಾಯಣೋ ದೇವಃ ಕಾಶ್ಯಾಂ ಪುರ್ಯಾಂ ಸಮಾಗತಃ ॥ ೩೮ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಚತುರ್ವಿಂಶೋಽಧ್ಯಾಯಃ.**



---

ಲೋಕಕ್ಕೆ ಹೋದನು. ನಾರಾಯಣನು ತಾನು ಬಂದು ಕಾಶೀಪಟ್ಟಣವನ್ನು ಸೇರಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ದ್ವಿತೀಯ ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ

## ಪಂಚವಿಂಶೋಽಧ್ಯಾಯಃ

॥ ಸೂತ ಉವಾಚ ॥

ಕೃಪಯಾ ಬ್ರಾಹ್ಮಣದ್ವಾರಾ ಪ್ರಕಟೀಕೃತವಾನ್ ಸ್ವಕಂ ।
ಇತಿಹಾಸಮಿಮಂ ವಕ್ಷ್ಯೇ ಸಂವಾದಂ ಹರಿವಿಪ್ರಯೋಃ ॥ ೧ ॥

ಕಾಶೀಪುರೀತಿ ವಿಖ್ಯಾತಾ ತತ್ರಾಸೀದ್ಬ್ರಾಹ್ಮಣೋ ವರಃ ।
ದೀನೋ ಗೃಹಾಶ್ರಮೀ ನಿತ್ಯಂ ಭಿಕ್ಷುಃ ಪುತ್ರಕಲತ್ರವಾನ್ ॥ ೨ ॥

---

## ಇಪ್ಪತ್ತೈದನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಶ್ರೀಹರಿಯು ಕೃಪೆಯಿಟ್ಟು ಅಲ್ಲಿ ಒಬ್ಬ ಬ್ರಾಹ್ಮಣನ ಮೂಲಕ ಸತ್ಯನಾರಾಯಣವ್ರತ ವಿಚಾರವನ್ನು ಪ್ರಕಟಪಡಿಸಿದನು. ಈ ವಿಚಾರವನ್ನು ತಿಳಿಸುವ ಸಂದರ್ಭದಲ್ಲಿ ಶ್ರೀಹರಿಗೂ ಬ್ರಾಹ್ಮಣನಿಗೂ ನಡೆದ ಸಂಭಾಷಣೆಯ ರೂಪವಾದ ಈ ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳಿ.

೨. ಕಾಶೀಪುರೀ ಎಂಬ ಒಂದು ಪಟ್ಟಣವಿತ್ತು. ಅಲ್ಲಿ ಹೆಂಡತಿ ಮಕ್ಕಳ ಸಮೇತ ಶತಾನಂದನೆಂಬ ಬ್ರಾಹ್ಮಣ ಶ್ರೇಷ್ಠನು ವಾಸವಾಗಿದ್ದನು. ಅವನು ಶೀರ ಬಡವನೂ, ವಿಷ್ಣುಪೂಜೆಯಲ್ಲಿ ನಿರತನೂ ಆಗಿ, ನಿತ್ಯವೂ ಭಿಕ್ಷಾವೃತ್ತಿಯಿಂದ ಜೀವಿಸುತ್ತಿದ್ದನು.

ಶತಾನಂದ ಇತಿ ಖ್ಯಾತೋ ವಿಷ್ಣುವ್ರತಪರಾಯಣಃ ।
ಏಕದಾ ಪಥಿ ಭಿಕ್ಷಾರ್ಥಂ ಗಚ್ಛತಸ್ತಸ್ಯ ಶ್ರೀಪತಿಃ ॥ ೩ ॥

ವಿನೀತಸ್ಯಾತಿ ಶಾಂತಸ್ಯ ಸ ಬಭೂವಾಕ್ಷಿಗೋಚರಃ ।
ವೃದ್ಧಬ್ರಾಹ್ಮಣವೇಷೇಣ ಪಪ್ರಚ್ಛ ಬ್ರಾಹ್ಮಣಂ ಹರಿಃ ।
ಕ್ವ ಯಾಸೀತಿ ದ್ವಿಜಶ್ರೇಷ್ಠ ವೃತ್ತಿಃ ಕಾಮೇನ ಕಥ್ಯತಾಂ ॥ ೪ ॥

॥ ಶತಾನಂದ ಉವಾಚ ॥

ಭಿಕ್ಷಾವೃತ್ತಿರಹಂ ಸೌಮ್ಯ ಕಲತ್ರಾಪತ್ಯಹೇತವೇ ।
ಯಾಚಿತುಂ ಧನಿನಾಂ ದ್ವಾರಿ ವ್ರಜಾಮಿ ಧನಮುತ್ತಮಂ ॥ ೫ ॥

॥ ನಾರಾಯಣ ಉವಾಚ ॥

ಭಿಕ್ಷಾವೃತ್ತಿಸ್ತ್ವಯಾ ದೀರ್ಘಕಾಲಂ ದ್ವಿಜ ಸದಾ ಧೃತಾ ।
ತದ್ವಾರಕ ಉಪಾಯೋಽಯಂ ವಿಶೇಷೇಣ ಕಲೌ ಕಿಲ ॥ ೬ ॥

---

೩. ಒಂದುದಿನ ಆತನು ಭಿಕ್ಷಕ್ಕಾಗಿ ಹೋಗುತ್ತಿದ್ದನು. ವಿನಯಶೀಲನೂ ಶಾಂತನೂ ಆದ ಆ ಬ್ರಾಹ್ಮಣನಿಗೆ ದಾರಿಯಲ್ಲಿ ಶ್ರೀಹರಿಯು ವೃದ್ಧಬ್ರಾಹ್ಮಣ ವೇಷದಿಂದ ಕಾಣಿಸಿಕೊಂಡನು.

೪. ಹೀಗೆ ಎದುರಿಗೆ ಬಂದ ಆ ವೃದ್ಧವಿಪ್ರನಾದ ಹರಿಯು ಈತನನ್ನು ಕುರಿತು "ಅಯ್ಯಾ ಬ್ರಾಹ್ಮಣೋತ್ತಮಾ ! ಎಲ್ಲಿಗೆ ಹೊರಟೆ ? ನಿನ್ನ ಜೀವನವೃತ್ತಿಯೇನು? ಎಂಬುದನ್ನು ನಿಸ್ಸಂಕೋಚದಿಂದ ಹೇಳು" ಎಂಬದಾಗಿ ಪ್ರಶ್ನೆಮಾಡಿದನು.

೫. ಅದಕ್ಕೆ ಶತಾನಂದನು ಹೇಳಿದನು—"ಅಯ್ಯಾ ಸೌಮ್ಯಮೂರ್ತಿಯೇ ! ಹೆಂಡತಿ ಮಕ್ಕಳ ಸಂರಕ್ಷಣೆಗಾಗಿ ನಾನು ಭಿಕ್ಷಾವೃತ್ತಿಯನ್ನು ಅವಲಂಬಿಸಿದ್ದೇನೆ. ಹಣಗಾರರ ಮನೆಗಳಲ್ಲಿ ಉತ್ತಮವಾದ ದ್ರವ್ಯವನ್ನು ಯಾಚಿಸುವುದಕ್ಕಾಗಿ ಹೋಗುತ್ತಿದ್ದೇನೆ" ಎಂದು ಹೇಳಿದನು.

೬-೭. ಆಗ ವೃದ್ಧಬ್ರಾಹ್ಮಣ ರೂಪಿನ ಹರಿಯು "ಅಯ್ಯಾ ದ್ವಿಜಶ್ರೇಷ್ಠಾ ! ನೀನು ಬಹುಕಾಲದಿಂದಲೂ ಸದಾ ಭಿಕ್ಷಾವೃತ್ತಿಯನ್ನೇ ಮಾಡುತ್ತಿದ್ದೀಯೆ. ಅದನ್ನು ನಿವಾರಣೆಮಾಡಿಕೊಂಡು ಅನುಕೂಲಶಾಲಿಯಾಗುವುದಕ್ಕೆ ಕಲಿಯುಗದಲ್ಲಿ ವಿಶೇಷ ಸಹಾಯಕವಾದ ಒಂದು ಉಪಾಯವಿದೆ. ಅಯ್ಯಾ ಬ್ರಾಹ್ಮಣಾ ! ದಾರಿದ್ರ್ಯ ದುಃಖ

**ಮಮೋಪದೇಶತೋ ವಿಪ್ರ ಸತ್ಯನಾರಾಯಣಂ ಭಜ ।**
**ದಾರಿದ್ರ್ಯಶೋಕಶಮನಂ ಸಂತಾಪಹರಣಂ ಹರೇಃ ।**
**ಚರಣಂ ಶರಣಂ ಯಾಹಿ ಮೋಕ್ಷದಂ ಪದ್ಮಲೋಚನಂ ॥ ೭ ॥**

**ಏವಂ ಸಂಬೋಧಿತೋ ವಿಪ್ರೋ ಹರಿಣಾ ಕರುಣಾತ್ಮನಾ ।**
**ಪುನಃ ಪಪ್ರಚ್ಛ ವಿಪ್ರೋಸೌ ಸತ್ಯನಾರಾಯಣೋ ಹಿ ಕಃ ॥ ೮ ॥**

**॥ ವೃದ್ಧಬ್ರಾಹ್ಮಣ ಉವಾಚ ॥**

**ಬಹುರೂಪಃ ಸತ್ಯಸಂಧಃ ಸರ್ವವ್ಯಾಪೀ ನಿರಂಜನಃ ।**
**ಇದಾನೀಂ ವಿಪ್ರರೂಪೇಣ ತವ ಪ್ರತ್ಯಕ್ಷಮಾಗತಃ ॥ ೯ ॥**

**ದುಃಖೋದಧಿನಿಮಗ್ನಾನಾಂ ತರಣಿಶ್ಚರಣೌ ಹರೇಃ ।**
**ಕುಶಲಾಃ ಶರಣಂ ಯಾಂತಿ ನೇತರೇ ವಿಷಯಾತ್ಮಿಕಾಃ ॥ ೧೦ ॥**

---

ವನ್ನು ಉಪಶಮನಮಾಡಿ, ಸಂಕಟಗಳನ್ನು ಧ್ವಂಸಮಾಡತಕ್ಕ ಸತ್ಯನಾರಾಯಣ ಪೂಜೆಯನ್ನು ಮಾಡು. ಮೋಕ್ಷವನ್ನು ಕೊಡಬಲ್ಲವನೂ, ಕಮಲದಂತೆ ಕಣ್ಣುಳ್ಳವನೂ, ಆದ ಆ ಶ್ರೀಹರಿಯ ಪಾದಾರವಿಂದಗಳಲ್ಲಿ ಶರಣಾಗತನಾಗು" ಎಂದು ಹೇಳಿದನು.

೮. ದಯಾಸಮುದ್ರನೆನಿಸಿದ ಶ್ರೀಹರಿಯು, ಬ್ರಾಹ್ಮಣರೂಪಿನಿಂದ ಹೀಗೆ ಬೋಧನೆಮಾಡಲಾಗಿ ಆ ಶತಾನಂದ ಬ್ರಾಹ್ಮಣನು "ಸತ್ಯನಾರಾಯಣ ಎಂಬ ದೇವರು ಯಾರು?" ಎಂಬದಾಗಿ ಪುನಃ ಆ ವೃದ್ಧಬ್ರಾಹ್ಮಣನನ್ನು ಪ್ರಶ್ನಿಸಿದನು.

೯. ಆಗ ವೃದ್ಧಬ್ರಾಹ್ಮಣನು "ಅಯ್ಯಾ ವಿಪ್ರಾ! ನಾನಾರೂಪಗಳನ್ನು ಧರಿಸಬಲ್ಲವನೂ, ಸತ್ಯಸಂಧನೂ, ಎಲ್ಲ ಕಡೆಯಲ್ಲೂ ವ್ಯಾಪಿಸಿಕೊಂಡಿರುವವನೂ ಆಗಿದ್ದರೂ, ಯಾವುದರ ಸಂಬಂಧವೂ ಇಲ್ಲದಂತೆ ನಿರ್ಲೇಪನೆನಿಸಿಕೊಳ್ಳುವ ಆ ಸತ್ಯನಾರಾಯಣನು ಈಗ ವೃದ್ಧಬ್ರಾಹ್ಮಣ ರೂಪಿನಿಂದ ನಿನ್ನ ಕಣ್ಣೆದಿರಿಗೆ ಬಂದು ನಿಂತಿದ್ದಾನೆ."

೧೦. "ದುಃಖಸಾಗರದಲ್ಲಿ ಮುಳುಗಿ ಹೋಗುತ್ತಿರುವವರಿಗೆ ಆ ಸತ್ಯನಾರಾಯಣನ ಪಾದದ್ವಯಗಳು ಅವರನ್ನು ದುಃಖಸಮುದ್ರದಿಂದ ದಾಟಿಸುವ ಸಾಧನಸ್ವರೂಪ ಹಡಗುಗಳಾಗಿವೆ. (ಎಂದರೆ ಅವನ ಪಾದಕಮಲಗಳನ್ನು ಅರ್ಚಿಸಿದರೆ ಮಹಾದುಃಖದಿಂದಕೂಡ ಪಾರಾಗಬಹುದು) ಜ್ಞಾನಿಗಳು (ಜಾಣರು) ಹೀಗೆ ಅವನನ್ನು ಶರಣು ಹೊಗುತ್ತಾರೆ. ವಿಷಯ ಲಂಪಟರಾದ ಇತರ ಜನರು ಆರೀತಿ ಮಾಡುವುದಿಲ್ಲ."

ಆಹೃತ್ಯ ಪೂಜಾಸಂಭಾರಾನ್ಸ್ಥಿತಾಯು ಜಗತಾಂ ದ್ವಿಜ ।
ಅರ್ಚಯಂಸ್ತಮನುಧ್ಯಾಯಂಸ್ತ್ವಮೇತತ್ಪ್ರಕಟೀ ಕುರು ॥ ೧೧ ॥

ಇತಿ ಬ್ರುವಂತಂ ವಿಪ್ರೋऽಸೌ ದದರ್ಶ ಪುರುಷೋತ್ತಮಂ ।
ಜಲದಶ್ಯಾಮಲಂ ಚಾರುಚತುರ್ಬಾಹುಂ ಗದಾದಿಭಿಃ ॥ ೧೨ ॥

ಪೀತಾಂಬರಂ ನವಾಂಭೋಜಲೋಚನಂ ಸ್ಮಿತಪೂರ್ವಕಂ ।
ವನಮಾಲಾಮಧುವ್ರಾತಚುಂಬಿತಾಂಘ್ರಿಸರೋರುಹಂ ॥ ೧೩ ॥

ನಿಶಮ್ಯ ಪುಲಕಾಂಗೋऽಸೌ ಪ್ರೇಮಪೂರ್ಣಸುಲೋಚನಃ ।
ಸ್ತುವನ್ ಗದ್ಗದಯಾ ವಾಚಾ ದಂಡವತ್ಪತಿತೋ ಭುವಿ ॥ ೧೪ ॥

ಪ್ರಣಮಾಮಿ ಜಗನ್ನಾಥಂ ಜಗತ್ಕಾರಣಕಾರಕಂ ।
ಅನಾಥನಾಥಂ ಶಿವದಂ ಶರಣ್ಯಮನಘಂ ಶುಚಿಂ ॥ ೧೫ ॥

---

೧೧. "ಅಯ್ಯಾ ದ್ವಿಜನೇ! ನೀನು ಪೂಜಾಸಾಮಗ್ರಿಗಳನ್ನು ಸಂಪಾದಿಸಿ ಸಿದ್ಧಮಾಡಿಕೊಂಡು ಸತ್ಯನಾರಾಯಣನನ್ನೇ ಧ್ಯಾನಿಸುತ್ತಾ ಅವನ ಪೂಜೆಮಾಡಿ, ಲೋಕದ ಹಿತಕ್ಕಾಗಿ ಈ ವ್ರತವಿಚಾರವನ್ನು ಎಲ್ಲರಿಗೂ ಪ್ರಕಟವಾಗುವಂತೆ ಮಾಡು" ಎಂದು ಹೇಳಿದನು.

೧೨-೧೩. ಹೀಗೆನ್ನುತ್ತಾ ಶತಾನಂದನ ದೃಷ್ಟಿಗೆ ಗೋಚರನಾಗಿದ್ದ ಆ ವೃದ್ಧ ಬ್ರಾಹ್ಮಣನು ಹೀಗೆ ಹೇಳುತ್ತಾ ಹೇಳುತ್ತಾ ನೀಲಮೇಘಶ್ಯಾಮನೂ, ಮನೋಹರವಾದ ನಾಲ್ಕು ತೋಳುಗಳಲ್ಲಿ ಗದಾ ಶಂಖಾದಿ ಆಯುಧಗಳನ್ನು ಧರಿಸಿದವನೂ, ಪೀತಾಂಬರಧಾರಿಯೂ, ಕಮಲದಂತೆ ಕಣ್ಣುಳ್ಳವನೂ, ವನಮಾಲೆಯಿಂದ ಅಲಂಕೃತನಾಗಿ, ಅದರ ಮಕರಂದದ ಹನಿಗಳು ಸುರಿದ ಪಾದಕಮಲವುಳ್ಳವನೂ, ಹಸನ್ಮುಖನೂ ಆದ, ಸಾಕ್ಷಾತ್ ಶ್ರೀ ಪುರುಷೋತ್ತಮನೇ ಆಗಿ ಪರಿಣಮಿಸಿದ್ದನ್ನು ಕಂಡನು.

೧೪. ಆ ವೃದ್ಧವಿಪ್ರರೂಪದ ಸತ್ಯನಾರಾಯಣನು ಹೇಳಿದ ಮಾತನ್ನು ಕೇಳಿ, ಶತಾನಂದನು ರೋಮಾಂಚ ಹೊಂದಿ, ಪ್ರೇಮಪುರಸ್ಸರವಾದ ದೃಷ್ಟಿಯುಳ್ಳವನಾಗಿ, ಸತ್ಯನಾರಾಯಣನನ್ನು ಗದ್ಗದಸ್ವರಯುಕ್ತವಾದ ಮಾತಿನಿಂದ ಸ್ತುತಿಸುತ್ತಾ ದೀರ್ಘದಂಡ ನಮಸ್ಕಾರ ಮಾಡಿದನು.

೧೫-೧೭. "ಲೋಕೇಶ್ವರನೂ, ಜಗತ್ತಿಗೆ ಕಾರಣನೂ, ಜಗತ್ತಿನ ನಿರ್ಮಾಣಕರ್ತನೂ ಆದ ನಿನಗೆ ನಮಸ್ಕರಿಸುವೆನು. ಅನಾಥರಿಗೆ ದಿಕ್ಕಾದವನೂ, ಶುಭ

ಅವ್ಯಕ್ತಂ ವ್ಯಕ್ತತಾಂ ಯಾತಂ ತಾಪತ್ರಯವಿಮೋಚನಂ ॥ ೧೬ ॥

ನಮಃ ಸತ್ಯನಾರಾಯಣಾಯಾಸ್ಯಕರ್ತ್ರೇ
ನಮಃ ಶುದ್ಧಸತ್ತ್ವಾಯ ವಿಶ್ವಸ್ಯ ಭರ್ತ್ರೇ ।
ಕರಾಲಾಯ ಕಾಲಾಯ ವಿಶ್ವಸ್ಯ ಹರ್ತ್ರೇ
ನಮಸ್ತೇ ಜಗನ್ಮಂಗಲಾಯಾತ್ಮಮೂರ್ತೇ ॥ ೧೭ ॥

ಧನ್ಯೋಽಸ್ಮ್ಯದ್ಯ ಕೃತೀ ಧನ್ಯೋ ಭವೋದ್ಯ ಸಫಲೋ ಮಮ ।
ವಾಙ್ಮನೋಗೋಚರೋ ಯಸ್ತ್ವಂ ಮಮ ಪ್ರತ್ಯಕ್ಷಮಾಗತಃ ॥ ೧೮ ॥

ದಿಷ್ಟಂ ಕಿಂ ವರ್ಣಯಾಮ್ಯಾಹೋ ನ ಜಾನೇ ಕಸ್ಯ ವಾ ಫಲಂ ।
ಕ್ರಿಯಾಹೀನಸ್ಯ ಮಂದಸ್ಯ ದೇಹೋಽಯಂ ಫಲವಾನ್ಕೃತಃ ॥ ೧೯ ॥

ಪೂಜನಂ ಚ ಪ್ರಕರ್ತವ್ಯಂ ಲೋಕನಾಥ ರಮಾಪತೇ ।
ವಿಧಿನಾ ಕೇನ ಕೃಪಯಾ ತದಾಜ್ಞಾಪಯ ಮಾಂ ವಿಭೋ ॥ ೨೦ ॥

---

ಪ್ರದನೂ, ರಕ್ಷಕನೂ, ಪಾಪರಹಿತನೂ, ಶುಚಿಭೂತನೂ, ಅಸದ್ರೂಪನೆನಿಸಿದ ವ್ಯಕ್ತ ನಲ್ಲದವನೂ, ಸತ್ತಾಗಿ ವ್ಯಕ್ತರೂಪ ಹೊಂದಿದವನೂ; ಆಧ್ಯಾತ್ಮಿಕ, ಆಧಿದೈವಿಕ ಆಧಿಭೌತಿಕ ಎಂಬ ತಾಪತ್ರಯಗಳನ್ನು ಹೋಗಲಾಡಿಸತಕ್ಕವನೂ, ಆದ ನಿನಗೆ ನಮಸ್ಕಾರ. ಈ ಸಮಸ್ತ ಸೃಷ್ಟಿಗೂ ಕರ್ತೃವಾದವನೂ, ಶುದ್ಧ ಸತ್ವಗುಣದಿಂದ ಪ್ರಪಂಚವನ್ನೆಲ್ಲಾ ಪೋಷಿಸತಕ್ಕವನೂ, ಕೊನೆಯಲ್ಲಿ ಕರಾಳ ಸ್ವರೂಪನಾದ ಕಾಲ ನೆನಿಸಿ, ಲೋಕವನ್ನೆಲ್ಲಾ ಸಂಹರಿಸತಕ್ಕವನೂ ಆಗಿ, ಜಗತ್ತಿಗೆ ಮಂಗಳಕರನೆನಿಸಿದ ಪರಮಾತ್ಮಸ್ವರೂಪನಿಗೆ ನಮಸ್ಕಾರ.

೧೮-೧೯. “ಪರಮಾತ್ಮಾ! ನನ್ನ ವಾಕ್ಕಿಗೂ ಮನಸ್ಸಿಗೂ ಗೋಚರನಾಗಿ ನನಗೆ ಪ್ರತ್ಯಕ್ಷನಾದೆ. ಇದರಿಂದ ಈಗ ನಾನು ಧನ್ಯ; ನನ್ನ ಜನ್ಮ ಸಾರ್ಥಕವಾಯಿತು. ನಾನೇ ಪುಣ್ಯಶಾಲಿ, ನನ್ನ ಅದೃಷ್ಟವನ್ನು ಎಷ್ಟೆಂದು ವರ್ಣಿಸಲಿ! ಪೂರ್ವ ಜನ್ಮದಲ್ಲಿ ನಾನು ಮಾಡಿದ ಯಾವ ಪುಣ್ಯದಿಂದ ಈ ಫಲವಾಯಿತೋ ಕಾಣೆ. ಸತ್ಕಾರ್ಯಾಚರಣೆ ಮಾಡದೆ ಜಡನಾಗಿದ್ದೆ. ನಾನು ಈಗ ದೇಹಧಾರಣೆಮಾಡಿದುದು ಸಫಲವಾಯಿತು.

೨೦. “ಜಗತ್ಪತಿಯಾದ ನಾರಾಯಣಸ್ವಾಮಿಯೇ! ಈ ಸತ್ಯನಾರಾಯಣ ವ್ರತದಲ್ಲಿ ಯಾವ ವಿಧಾನದಿಂದ ಪೂಜೆಮಾಡಬೇಕು ಎಂಬುವನ್ನು ನನಗೆ ಆಜ್ಞಾಪಿಸು” ಎಂಬದಾಗಿ ಬೇಡಿಕೊಂಡನು.

ಹರಿಸ್ತಮಾಹ ಮಧುರಂ ಸಸ್ಮಿತಂ ವಿಶ್ವಮೋಹನಃ ।
ಪೂಜಾಯಾಂ ಮಮ ವಿಪ್ರೇಂದ್ರ ಬಹು ನಾಪೇಕ್ಷಿತಂ ಧನಂ ॥ ೨೦॥

ಅನಾಯಾಸೇನ ಲಬ್ಧೇನ ಶ್ರದ್ಧಾಮಾತ್ರೇಣ ಮಾಂ ಯಜ ।
ಗ್ರಾಹಗ್ರಸ್ತೋಽಜಾಮಿಲೋ ವಾ ಯಥಾಽಭೂನ್ಮುಕ್ತಸಂಕಟಃ ॥ ೨೨ ॥

ವಿಧಾನಂ ಶೃಣು ವಿಪ್ರೇಂದ್ರ ಮನಸಾ ಕಾಮಯೇತ್ಫಲಂ ।
ಪೂಜಾಸಂಭೃತಸಂಭಾರಃ ಪೂಜಾಂ ಕುರ್ಯಾದ್ಯಥಾವಿಧಿ ॥ ೨೩ ॥

ಗೋಧೂಮಚೂರ್ಣಂ ಪಾದಾರ್ಧಂ ಸೇಟಿಕಾದಿಪ್ರಮಾಣತಃ ।
ದುಗ್ಧೇನ ತಾವತಾ ಯುಕ್ತಂ ಮಿಶ್ರಿತಂ ಶರ್ಕರಾದಿಭಿಃ ॥ ೨೪ ॥

---

೨೧-೨೨. ಅದನ್ನು ಕೇಳಿ ಲೋಕಕ್ಕೇ ಮೋಹನವನ್ನುಂಟುಮಾಡುವ ಹರಿಯು, ನಗೆಮೊಗದಿಂದ ಕೂಡಿ ಮಧುರಸ್ವರಯುಕ್ತನಾಗಿ ಅವನನ್ನು ಕುರಿತು "ಎಲೈ ಬ್ರಾಹ್ಮಣೋತ್ತಮಾ ! ನನ್ನ ಪೂಜೆಗಾಗಿ ತುಂಬಾ ಹಣವೇನೂ ಬೇಕಾಗಿಲ್ಲ. ವಿಶೇಷ ಶ್ರಮವಿಲ್ಲದೆ ಲಭ್ಯವಾದಷ್ಟು ಧನದಿಂದಲೇ ನನ್ನನ್ನು ಭಕ್ತಿಪೂರ್ವಕವಾಗಿ ಪೂಜಿಸು ಮೊಸಳೆಯು ಹಿಡಿತಕ್ಕೆ ಸಿಕ್ಕಿದ ಗಜೇಂದ್ರನೂ, ಯಮದೂತ ಪೀಡಿತನಾದ ಅಜಾಮಿಳನೂ, ನನ್ನನ್ನು ನೆನೆದು ಸಂಕಟದಿಂದ ಪಾರಾದಂತೆ, ಈ ವ್ರತಮಾಡಿದವನು ಕಷ್ಟರಹಿತನಾಗುವನು."

೨೩. "ಅಯ್ಯಾ ಬ್ರಾಹ್ಮಣೋತ್ತಮ ! ಈ ವ್ರತಮಾಡುವವನು ಫಲವನ್ನು ಮನಸ್ಸಿನಲ್ಲಿಯೇ ಕುರಿತುಕೊಳ್ಳಬೇಕು. ಇನ್ನು ಪೂಜೆಯ ವಿಧಾನವನ್ನು ಹೇಳುವೆನು ಕೇಳು. ಪೂಜೆಗೆ ಬೇಕಾದ ವಸ್ತುಗಳನ್ನೆಲ್ಲಾ ಸಿದ್ಧಪಡಿಸಿಕೊಂಡು ವಿಧಿಪ್ರಕಾರ ಪೂಜೆ ಮಾಡಬೇಕು.

೨೪. ಸೇಟಕ ಪ್ರಮಾಣದಲ್ಲಿ ಅರ್ಧಭಾಗ ಅಥವಾ ಕಾಲುಭಾಗ ಗೋಧಿಯ ಹಿಟ್ಟನ್ನು ಹಾಕಿ, ಅದರಷ್ಟೇ ಹಾಲನ್ನೂ ಹಾಕಿ, ಅದಕ್ಕೆ ತಕ್ಕಷ್ಟು ಸಕ್ಕರೆ, ಏಲಕ್ಕಿ, ಕೇಸರಿ, ದ್ರಾಕ್ಷಿ, ಮುಂತಾದುವೆಲ್ಲವನ್ನೂ ಸೇರಿಸಬೇಕು.

ತಚ್ಚೂರ್ಣಂ ಹರಯೇ ದದ್ಯಾದ್ ಘೃತಯುಕ್ತಂ ಹರಿಪ್ರಿಯಂ ।
ಗೋದುಗ್ಧೇನೈವ ದಧಿನಾ ಗೋಘೃತೇನ ಸಮನ್ವಿತಂ ॥ ೨೫ ॥

ಗಂಗಾಜಲೇನ ಮಧುನಾ ಯುಕ್ತಂ ಪಂಚಾಮೃತಂ ಪ್ರಿಯಂ ।
ಪಂಚಾಮೃತೇನ ಸಂಸ್ನಾಪ್ಯ ಶಾಲಗ್ರಾಮೋದ್ಭವಾಂ ಶಿಲಾಂ ॥ ೨೬ ॥

ಗಂಧಪುಷ್ಪಾದಿ ಭಿರ್ದ್ರವ್ಯೈರ್ವೇದವಾದ್ಯೈರ್ಮನೋಹರೈಃ ।
ಧೂಪೈರ್ದೀಪೈಶ್ಚ ನೈವೇದ್ಯೈಸ್ತಾಂಬೂಲಾದಿಭಿರರ್ಚಯೇತ್ ॥ ೨೭ ॥

ಮೃಷ್ಟಾನ್ನದಾನಸನ್ಮಾನೈರ್ಭಕ್ಷ್ಯೈರ್ಭೋಜ್ಯೈಃ ಫಲೈಸ್ತಥಾ ।
ಋತುಕಾಲೋದ್ಭವೈಃ ಪುಷ್ಪೈಃ ಪೂಜಯೇದ್ಭಕ್ತಿತತ್ಪರಃ ॥ ೨೮ ॥

ಬ್ರಾಹ್ಮಣೈಃ ಸ್ವಜನೈಶ್ಚೈವ ವೇಷ್ಟಿತಃ ಶ್ರದ್ಧಯಾನ್ವಿತಃ ।
ತ್ವಯಾ ಸಾರ್ದ್ಧಂ ಮಮ ಕಥಾಂ ಶೃಣುಯಾತ್ಪರಮಾದರಾತ್ ॥ ೨೯ ॥

---

೨೫. ಹೀಗೆ ಸಿದ್ಧಮಾಡಿದ ಚೂರ್ಣಕ್ಕೆ ತುಪ್ಪವನ್ನು ಮಿಶ್ರಮಾಡಿ, ಮಹಾವಿಷ್ಣುವಿಗೆ ಪ್ರಿಯವಾದ ಸಪಾದಭಕ್ಷ್ಯವನ್ನು ಮಾಡಿಕೊಳ್ಳಬೇಕು.

೨೬–೨೮. ಬಳಿಕ ಹಸುವಿನಹಾಲು, ಮೊಸರು, ಹಸುವಿನತುಪ್ಪ ಮತ್ತು ಸಕ್ಕರೆ, ಗಂಗಾಜಲ, ಜೇನುತುಪ್ಪ ಇವುಗಳಿಂದ (ಎಂದರೆ ಶ್ರೀಹರಿ ಪ್ರಿಯವಾದ ಪಂಚಾಮೃತದಿಂದ) ಸಾಲಿಗ್ರಾಮಮೂರ್ತಿಗೆ ಅಭಿಷೇಕಮಾಡಿ ; ವಸ್ತ್ರ, ಗಂಧ, ಪುಷ್ಪ, ಧೂಪ, ದೀಪ, ಮೃಷ್ಟಾನ್ನ, ಪಾನೀಯಗಳು, ಭಕ್ಷ್ಯಭೋಜ್ಯಗಳು, ಹಣ್ಣುಗಳು ಇವುಗಳ ನೇವೇದ್ಯ, ತಾಂಬೂಲ, ಮುಂತಾದ್ದನ್ನು ಸಮರ್ಪಿಸಿ ಪೂಜಿಸಬೇಕು. ಮನೋಹರವಾಗುವಂತೆ ವೇದಪಾರಾಯಣ ಮಾಡಿಸಬೇಕು. ಆಯಾ ಋತುಗಳಲ್ಲಿ ದೊರೆಯುವ ಪುಷ್ಪಗಳು ಫಲಗಳು ಇವನ್ನು ಸಂಪಾದಿಸಿ ತಂದು, ಭಕ್ತಿಯಿಂದ ವ್ರತ ಮಾಡಬೇಕು.

೨೯. ಆಗ ತನ್ನ ನಂಟರಿಷ್ಟರು ಮತ್ತು ಬ್ರಾಹ್ಮಣರು ಇವರುಗಳನ್ನು ಜತ ಮಾಡಿಕೊಂಡು ಸುತ್ತಲೂ ಕೂರಿಸಿಕೊಂಡು, ಭಕ್ತಿಯುಕ್ತನಾಗಿ ವಿಶೇಷ ಆದರಪೂರ್ವಕವಾಗಿ ಭಕ್ತನಾದ ನಿನ್ನ ವಿಚಾರವು ಸೂಚಿತವಾಗಿರುವ ನನ್ನ ಕಥೆಯನ್ನು ಶ್ರವಣ ಮಾಡಬೇಕು.

ಇತಿಹಾಸಂ ತಥಾ ರಾಜ್ಞೋ ಭಿಲ್ಲಾನಾಂ ವಣಿಜೋಸ್ತ್ಯ ಚ ।
ಕಥಾಂತೇ ಪ್ರಣಮೇದ್ಭಕ್ತ್ಯಾ ಪ್ರಸಾದಂ ವಿಭಜೇತ್ತತಃ ॥ ೩೦ ॥

ಲಬ್ಧಂ ಪ್ರಸಾದಂ ಭುಂಜೀತ ಮಾನಯನ್ನವಿಚಾರಯೇತ್ ।
ದ್ರವ್ಯಾದಿಭಿರ್ನ ಮೇ ಶಾಂತಿರ್ಭಕ್ತ್ಯಾ ಕೇವಲಯಾ ಯಥಾ ॥ ೩೧ ॥

ವಿಧಿನಾನೇನ ವಿಪ್ರೇಂದ್ರ ಪೂಜಯಂತಿ ಚ ಯೇ ನರಾಃ ।
ಪುತ್ರಪೌತ್ರಧನೈರ್ಯುಕ್ತಾ ಭುಕ್ತ್ವಾ ಭೋಗಾನನುತ್ತಮಾನ್ ॥ ೩೨ ॥

ಅಂತೇ ಸಾನ್ನಿಧ್ಯಮಾಸಾದ್ಯ ಮೋದಂತೇ ತೇ ಮಯಾ ಸಹ ।
ಯಂಯಂ ಕಾಮಯತೇ ಕಾಮಂ ಸುವ್ರತೀ ತಂತಮಾಪ್ನುಯಾತ್ ॥ ೩೩ ॥

---

೩೦. ಹಾಗೆಯೇ ಭಿಲ್ಲರು ಸತ್ಯನಾರಾಯಣನನ್ನು ಅರ್ಚಿಸಿದ್ದು, ವೈಶ್ಯರು ಮಾಡಿದ ವ್ರತಾದಿ ಕಾರ್ಯಗಳು, ಇವುಗಳನ್ನು ವಿವರಿಸಿರುವ ಕಥಾಭಾಗಗಳನ್ನೂ, ಶ್ರವಣ ಮಾಡಬೇಕು. ಕಥೆ ಕೇಳಿ ಆದಮೇಲೆ ಭಕ್ತಿಯಿಂದ ನಮಸ್ಕಾರಮಾಡಬೇಕು.

೩೧. ಅನಂತರ ಪ್ರಸಾದವನ್ನು ವಿಭಾಗಮಾಡಿ ವಿನಿಯೋಗಮಾಡಬೇಕು. ಪ್ರಸಾದವನ್ನು ಕೈಗೆ ಇಸುಕೊಂಡವರು ಒಡನೆ ಸೇವಿಸಬೇಕು. ಆ ಸಂದರ್ಭದಲ್ಲಿ ವಿಚಾರ ಮಾಡತಕ್ಕದ್ದೇ ಅಲ್ಲ. ಕೇವಲ ಭಕ್ತಿಪೂರ್ವಕ ಪೂಜೆಮಾಡುವುದರಿಂದ ನನಗೆ ಆಗುವಷ್ಟು ಸಂತೋಷವು ಭಕ್ತಿರಹಿತವಾಗಿ ಕೇವಲ ಆಡಂಬರದ ದ್ರವ್ಯವ್ಯಯದಿಂದ ಆಗುವುದಿಲ್ಲ.

೩೨. ಅಯ್ಯಾ ವಿಪ್ರವರ್ಯನೇ! ಈ ವಿಧಾನದಿಂದ ನನ್ನನ್ನು ಪೂಜಿಸಿದ ಮನುಷ್ಯರು; ಮಕ್ಕಳು, ಮೊಮ್ಮಕ್ಕಳು ಮತ್ತು ಸಂಪತ್ಸಮೃದ್ಧಿ ಇವುಗಳುಳ್ಳವರಾಗಿ ಶ್ರೇಷ್ಠವಾದ ಸುಖವನ್ನು ಅನುಭವಿಸುವರು.

೩೩. ಅವರು ಈ ಶರೀರ ತ್ಯಾಗಮಾಡಿದಮೇಲೆ ನನ್ನ ಸನ್ನಿಧಿಯನ್ನು ಸೇರಿ ನನ್ನೊಡನೆ ಸಂತೋಷವಾಗಿರುವರು. ಈ ವ್ರತವನ್ನು ಚೆನ್ನಾಗಿ ಮಾಡಿದವನು, ಯಾವ ಯಾವ ಇಷ್ಟಗಳನ್ನು ಅಪೇಕ್ಷಿಸುವನೋ ಅವೆಲ್ಲವನ್ನೂ ಪಡೆದುಕೊಂಡು ಸುಖಿಯಾಗುತ್ತಾನೆ,

ಇತ್ಯುಕ್ತ್ವಾಂತರ್ದಧೇ ವಿಷ್ಣುರ್ವಿಪ್ರೋಽಪಿ ಸುಖಮಾಪ್ತವಾನ್ ।
ಪ್ರಣಮ್ಯಾಗಾಧ್ಯಥಾದಿಷ್ಟಂ ಮನಸಾ ಕೌತುಕಾಕುಲಃ ॥ ೩೪ ॥

ಅದ್ಯ ಭೈಕ್ಷ್ಯೇಣ ಲಭ್ಯೇನ ಪೂಜ್ಯೋ ನಾರಾಯಣೋ ಮಯಾ ।
ಇತಿ ನಿಶ್ಚಿತ್ಯ ಮನಸಾ ಭಿಕ್ಷಾರ್ಥೀ ನಗರಂ ಗತಃ ॥ ೩೫ ॥

ವಿನಾ ದೇಹೀತಿ ವಚನಂ ಲಬ್ಧ್ವಾ ಚ ವಿಪುಲಂ ಧನಂ ।
ಕೌತುಕಾಯಾಸಮನಸಾ ಜಗಾಮ ನಿಜಮಾಲಯಂ ॥ ೩೬ ॥

ವೃತ್ತಾಂತಂ ಸರ್ವಮಾಚಖ್ಯೋ ಬ್ರಾಹ್ಮಣೀ ಸಾನ್ವಮೋದತ ।
ಸಾದರಂ ದ್ರವ್ಯಸಂಭಾರಮಾಹೃತ್ಯ ಭರ್ತುರಾಜ್ಞಯಾ ॥ ೩೭ ॥

ಆಹೂಯ ಬಂಧುಮಿತ್ರಾಣಿ ತಥಾ ಸಾನ್ನಿಧ್ಯವರ್ತಿನಃ ।
ಸತ್ಯನಾರಾಯಣಂ ದೇವಂ ಯಜಾಮಿ ಸ್ವಗಣೈರ್ವೃತಃ ॥ ೩೮ ॥

---

೩೪-೩೫. ಹೀಗೆಂದು ಹೇಳಿ ವಿಷ್ಣುರೂಪಿಯಾದ ಆ ವೃದ್ಧವಿಪ್ರನು ಅಲ್ಲಿಯೇ ಅದೃಶ್ಯನಾದನು. ಈ ಶತಾನಂದವಿಪ್ರನೂ ಇದನ್ನು ಕೇಳಿ ಸುಖಿಯಾದನು. ಅನಂತರ ಆ ಮಹಾತ್ಮನಿಗೆಂದು ನಮಸ್ಕಾರನನ್ನು ಸಮರ್ಪಿಸಿ, ಮನಸ್ಸಿನಲ್ಲಿ ಕುತೂಹಲದಿಂದ ಕೂಡಿ ಅವನು ಅಪ್ಪಣೆಕೊಟ್ಟಂತೆ ಮಾಡಬೇಕೆಂದುಕೊಂಡು ಮುಂದೆ ಸಾಗುತ್ತಾ "ಈ ದಿವಸ ಭಿಕ್ಷದಲ್ಲಿ ದೊರೆತ ವಸ್ತುದ್ರವ್ಯಾದಿಗಳಿಂದ ನಾನು ಸತ್ಯನಾರಾಯಣ ವ್ರತಮಾಡಬೇಕು" ಎಂಬದಾಗಿ ಮನಸ್ಸಿನಲ್ಲಿ ನಿರ್ಧರಮಾಡಿಕೊಂಡು ಭಿಕ್ಷೆಗಾಗಿ ನಗರದೊಳಕ್ಕೆ ಹೋದನು.

೩೬. ಅಲ್ಲಿ ಬಾಯಿಬಿಟ್ಟು ದ್ರವ್ಯಸಹಾಯ ಕೊಡಿ ಎಂದು ಯಾರನ್ನೂ ಕೇಳದೆ ಇದ್ದರೂ, ಸಮೃದ್ಧಿಯಾಗಿ ದ್ರವ್ಯವು ದೊರೆಯಿತು. ಅದನ್ನು ಕಂಡು ಮನದಲ್ಲಿ ಇನ್ನೂ ಹೆಚ್ಚು ಕುತೂಹಲದಿಂದ ಕೂಡಿ ತನ್ನ ಮನೆಗೆ ಬಂದನು.

೩೭-೩೮. ಅಲ್ಲಿ ಈ ವೃತ್ತಾಂತವನ್ನೆಲ್ಲಾ ತನ್ನ ಪತ್ನಿಗೆ ತಿಳಿಸಿದನು. ಆಕೆಯೂ ಸಂತೋಷದಿಂದ ಒಪ್ಪಿದಳು. ಆಗ ಗಂಡನ ಅಪ್ಪಣೆಯಂತೆ ಆಕೆಯು ಆ ದ್ರವ್ಯದಿಂದ ವ್ರತಕ್ಕೆ ಬೇಕಾದ ಪದಾರ್ಥಗಳನ್ನೆಲ್ಲಾ ತೆಗೆದುಕೊಂಡು ಬಂದಳು. ಆ ದಂಪತಿಗಳು ತಮ್ಮ ನಂಟರಿಷ್ಟರನ್ನೂ ಮಿತ್ರರನ್ನೂ, ಸುತ್ತುಮುತ್ತಿನ ಜನರನ್ನೂ ಪೂಜಾ ಸಮಯಕ್ಕೆ ಬರುವಂತೆ ಆಹ್ವಾನಮಾಡಿದರು. ತನ್ನ ಸಂಬಂಧಿಗಳೊಡನೆ ಕೂಡಿ ಸತ್ಯ

ಭಕ್ತ್ಯಾ ತುತೋಽಷ ಭಗವಾನ್ ಸತ್ಯನಾರಾಯಣಃ ಸ್ವಯಂ ।
ಕಾಮಂ ದಿತ್ಸುಃ ಪ್ರಾದುರಾಸೀತ್ಕಥಾಂತೇ ಭಕ್ತವತ್ಸಲಃ ॥ ೩೯ ॥

ವವ್ರೇ ವಿಪ್ರೋಽಭಿಲಷಿತಮಿಹಾಮುತ್ರ ಸುಖಪ್ರದಮ್ ।
ಭಕ್ತಿಂ ಪರಾಂ ಭಗವತಿ ತಥಾ ತತ್ಸಂಗಿನಾಂ ವ್ರತಂ ॥ ೪೦ ॥

ರಥಂ ಕುಂಜರಂ ಮಂಜುಲಂ ಮಂದಿರಂ ಚ
ಹಯಂ ಚಾರು ಚಾಮೀಕರಾಲಂಕೃತಂ ಚ ।
ಧನಂ ದಾಸದಾಸೀಗಣಂ ಗಾಂ ಮಹೀಂ ಚ
ಲುಲಾಯಃ ಸದುಗ್ಧಾ ಹರೇ ದೇಹಿ ದಾಸ್ಯಂ ॥ ೪೧ ॥

---

ನಾರಾಯಣಸ್ವಾಮಿಯನ್ನು ಭಕ್ತಿಯಿಂದ ಪೂಜಿಸಿದರು. ಸತ್ಯನಾರಾಯಣಸ್ವಾಮಿಯು ಇವರ ಭಕ್ತಿಗೆ ಮೆಚ್ಚಿ, ಭಕ್ತವಾತ್ಸಲ್ಯದಿಂದ ಕೂಡಿಡವನಾಗಿ, ಇವರು ಕಥಾಶ್ರವಣ ಮಾಡಿದನಂತರ ಇವರ ಇಷ್ಟಾರ್ಥವನ್ನು ಕೊಡಬೇಕೆಂದು ತಾನೇ ಪ್ರತ್ಯಕ್ಷವಾಗಿ ಬಂದು " ಬೇಕಾದ ವರವನ್ನು ಕೇಳು, ಕೊಡುವೆನು " ಎಂದನು.

೪೦-೪೧. ಆಗ ವಿಪ್ರನು " ಇಹಲೋಕ ಪರಲೋಕ ಸುಖಪ್ರದವೆನಿಸಿದ ನಿರತಿಶಯ ಭಕ್ತಿಯನ್ನು ಅನಂತವಾಗಿ ಕೊಡೆಂದು " ತನ್ನ ಇಷ್ಟವನ್ನು ಬೇಡಿದನು. ಪೂಜ್ಯಳಾದ ಅವನ ಪತ್ನಿಯೂ ಕೂಡ ಹಾಗೆಯೇ ಪ್ರಾರ್ಥಿಸಿದ್ದಲ್ಲದೆ, ಇಲ್ಲಿ ಸೇರಿರುವ ತಮ್ಮ ಸಂಗಡಿಗರಿಗೆ ವ್ರತಫಲವನ್ನು ಕೊಡುವಂತೆ ಕೇಳಿದಳು. " ಅಲ್ಲದೆ ತಮಗೆ ರಮ್ಯವಾದ ಮಂದಿರ, ಆನೆ, ರಥ ಮತ್ತು ಸುವರ್ಣದ ಆಭರಣಗಳಿಂದ ಸುಂದರವಾಗಿ ಅಲಂಕರಿಸಿದ ಕುದುರೆ, ಸಮೃದ್ಧಿಯಾದ ಧನಸಂಪತ್ತು, ಪರಿಜನಸಮೂಹ, ಕರೆಯುವ ದನಕರುಗಳು, ಎಮ್ಮೆಗಳು, ಸಮೃದ್ಧಿಯಾದ ತೋಟ, ಗದ್ದೆ ಮುಂತಾದ ಭೂಮಿ ಕಾಣಿಗಳು ಇವೆಲ್ಲವನ್ನೂ ಕೊಡು ಸ್ವಾಮೀ " ಎಂದು ಇಬ್ಬರೂ ಬೇಡಿಕೊಂಡರು.

೪೨-೪೩. ಆಗ ಸತ್ಯನಾರಾಯಣಸ್ವಾಮಿಯು " ನಿಮ್ಮ ಇಷ್ಟದಂತೆ ಎಲ್ಲವೂ ಲಭಿಸಲಿ " ಎಂದು ಹೇಳಿ ಅಲ್ಲಿಯೇ ಅದೃಶ್ಯನಾದನು. ಬಳಿಕ ಆ ಬ್ರಾಹ್ಮಣನು ಧನ್ಯನಾದನು. ಅಲ್ಲಿ ಬಂದಿದ್ದ ಜನರೆಲ್ಲಾ ಇದನ್ನು ನೋಡಿ ಆತ್ಯಾಶ್ಚರ್ಯದಿಂದ ಕೂಡಿದವರಾದರು. ಮತ್ತು ನೆಲದಮೇಲೆ ದೀರ್ಘದಂಡನಮಸ್ಕಾರಮಾಡಿ ಆದರದಿಂದ

ತಥಾಸ್ತ್ವಿತಿ ಹರಿಃ ಪ್ರಾಹ ತತಶ್ಚಾಂತರ್ದಧೇ ಪ್ರಭುಃ ।
ವಿಪ್ರೋऽಪಿ ಕೃತಕೃತ್ಯೋऽಭೂತ್ಸರ್ವೇ ಲೋಕಾ ವಿಸಿಸ್ಮಿರೇ ॥ ೪೨ ॥

ಪ್ರಣಮ್ಯ ಭುವಿ ಕಾಯೇನ ಪ್ರಸಾದಂ ಪ್ರಾಪುರಾದರಾತ್ ।
ಸ್ವಂಸ್ವಂ ಧಾಮ ಸಮಾಜಗ್ಮುರ್ಧನ್ಯಧನ್ಯೇತಿ ವಾದಿನಃ ॥ ೪೩ ॥

ಪ್ರಚಚಾರ ತತೋ ಲೋಕೇ ಸತ್ಯನಾರಾಯಣಾರ್ಚನಂ ।
ಕಾಮಸಿದ್ಧಿಪ್ರದಂ ಮುಕ್ತಿಭುಕ್ತಿದಂ ಕಲುಷಾಪಹಂ ॥ ೪೪ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಪಂಚವಿಂಶೋಽಧ್ಯಾಯಃ.



---

ಪ್ರಸಾದವನ್ನು ಸ್ವೀಕರಿಸಿ ನಾವೂ ಧನ್ಯರಾದೆವು ಎಂದುಕೊಳ್ಳುತ್ತಾ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

೪೪ ಹೀಗೆ ಇಷ್ಟಾರ್ಥಸಿದ್ಧಿಯನ್ನುಂಟುಮಾಡತಕ್ಕುದೂ ಭೋಗವನ್ನೂ, ಮೋಕ್ಷವನ್ನೂ ಕೊಡತಕ್ಕುದೂ, ಪಾಪವನ್ನು ಧ್ವಂಸಮಾಡತಕ್ಕುದೂ ಆದ ಈ ಸತ್ಯನಾರಾಯಣ ವ್ರತವು ಅಲ್ಲಿಂದೀಚೆಗೆ ಲೋಕದಲ್ಲಿ ಪ್ರಚಾರಕ್ಕೆ ಬಂದಿತು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೇ ಖಂಡದಲ್ಲಿ
ಕಲಿಯುಗದ ಇತಿಹಾಸಸಮುದಾಯವೆಂಬ ಇಪ್ಪತ್ತೈದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ಷಡ್ವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ರಾಜಾಸೀದ್ಧಾರ್ಮಿಕಃ ಕಶ್ಚಿತ್ಕೇದಾರಮಣಿಪೂರಕೇ ।
ಚಂದ್ರಚೂಡ ಇತಿ ಖ್ಯಾತಃ ಪ್ರಜಾಪಾಲನತತ್ಪರಃ ॥ ೧ ॥

ಶಾಂತೋ ಮಧುರವಾಗ್ಧೀರೋ ನಾರಾಯಣಪರಾಯಣಃ ।
ಬಭೂವುಃ ಶತ್ರವಸ್ತಸ್ಯ ಮ್ಲೇಚ್ಛಾ ವಿಂಧ್ಯನಿವಾಸಿನಃ ॥ ೨ ॥

ತಸ್ಯ ತೈರವಭದ್ಯುದ್ಧಮತಿಪ್ರಬಲದಾರುಣೈಃ ।
ಭುಶುಂಡೀಯುದ್ಧನಿಪುಣೈಃ ಕ್ಷೇಪಣೈಃ ಪರಿಘಾಯುಧೈಃ ॥ ೩ ॥

---

## ಇಪ್ಪತ್ತಾರನೆಯ ಅಧ್ಯಾಯ

೧–೨. ಸೂತಮುನಿವರ್ಯನು ಹೇಳುತ್ತಾನೆ — ಕೇದಾರಮಣಿಪೂರಕವೆಂಬ ನಗರದಲ್ಲಿ ಚಂದ್ರಚೂಡನೆಂಬ ಹೆಸರುಳ್ಳ ಧರ್ಮಿಷ್ಟನಾದ ರಾಜನಿದ್ದನು. ಆತನು ಶಾಂತನು, ಮಧುರವಾಕ್ಕುಳ್ಳವನು, ಧೀರನು, ವಿಷ್ಣುಪೂಜೆಯಲ್ಲಿ ಆಸಕ್ತನು ಎನಿಸಿ, ಪ್ರಜೆಗಳನ್ನು ಸುಖವಾಗಿರುವಂತೆ ಪಾಲಿಸುವುದರಲ್ಲಿ ನಿರತನಾಗಿದ್ದನು. ಅವನಿಗೆ ವಿಂಧ್ಯಪರ್ವತ ನಿವಾಸಿಗಳಾದ ಮ್ಲೇಚ್ಛರು ಶತ್ರುಗಳಾಗಿದ್ದರು.

೩-೫. ರಾಜನಿಗೆ ಆ ಮ್ಲೇಚ್ಛಜನರೊಡನೆ ಭಯಂಕರವಾದ ಮಹಾಯುದ್ಧ ವೊದಗಿತು. ಭುಶುಂಡೀ ಯುದ್ಧದಲ್ಲಿ ನುರಿತವರೂ, ಪರಿಘಾಯುಧವನ್ನು ಪ್ರಯೋ

**ಚಂದ್ರಚೂಡಸ್ಯ ಮಹತೀ ಸೇನಾ ಯಮಪುರೇ ಗತಾ ।**
**ಶತಂ ರಥಾಸ್ತಥಾ ನಾಗಾ ಸಹಸ್ರಂ ತು ಹಯಾಸ್ತಥಾ ॥ ೪ ॥**

**ಪತ್ತಯಃ ಪಂಚಸಾಹಸ್ರಾ ಮೃತಾಃ ಸ್ವರ್ಗಪುರಂ ಯಯುಃ ।**
**ದಸ್ಯವಃ ಪಂಚಸಾಹಸ್ರಾ ಮೃತಾಃ ಕೈತವಯೋಧಿನಃ ॥ ೫ ॥**

**ಆಕ್ರಾಂತಃ ಸ ಮಹಾಭಾಗಸ್ತ್ವೈರ್ಮ್ಲೇಚ್ಛೈರ್ದಂಭಯೋಧಿಭಿಃ ।**
**ತ್ಯಕ್ತ್ವಾ ರಾಷ್ಟ್ರಂ ಚ ನಗರಂ ಸ್ವೈಕಾಕೀ ವನಮಾಯಯೌ ॥ ೬ ॥**

**ತೀರ್ಥವ್ಯಾಜೇನ ಸ ನೃಪಃ ಪುರೀಂ ಕಾಶೀಂ ಸಮಾಗತಃ ।**
**ತತ್ರ ನಾರಾಯಣಂ ದೇವಂ ವಂದ್ಯಂ ಸರ್ವಗೃಹೇಗೃಹೇ ॥ ೭ ॥**

**ದದರ್ಶ ನಗರೀಂ ಚೈವ ಧನಧಾನ್ಯಸಮನ್ವಿತಾಂ ।**
**ಯಥಾ ದ್ವಾರವತೀ ಜ್ಞೇಯಾ ತಥಾ ಸಾ ಚ ಪುರೀ ಶುಭಾ ॥ ೮ ॥**

---

ಗಿಸುವದರಲ್ಲಿ ಸಸುರ್ಥರೂ, ಆದ ಜನಗಳೊಡನೆ ಯುದ್ಧಮಾಡುವುದರಲ್ಲಿ ಚಂದ್ರಚೂಡರಾಜನ ದೊಡ್ಡ ಸೈನ್ಯವೆಲ್ಲವೂ ಯಮನಿಗಾಹುತಿಯಾಯಿತು. ನೂರಾರು ರಥಗಳೂ, ಆನೆಗಳೂ, ಸಹಸ್ರಕುದುರೆಗಳೂ, ಐದುಸಾವಿರ ಕಾಲಾಳುಗಳೂ ಸತ್ತು ಸ್ವರ್ಗಕ್ಕೆ ಹೋದರು.

೬. ಮೋಸದ ಯುದ್ಧದವರಾದ ಐದುಸಾವಿರ ದಸ್ಯುಗಳೂ, ಮೃತರಾದರು. ಡಂಭದಿಂದ ಯುದ್ಧಮಾಡುವ ಮ್ಲೇಚ್ಛರು, ಆ ಚಂದ್ರಚೂಡರಾಜನನ್ನು ಮುತ್ತಿಗೆ ಹಾಕಲು ಆ ರಾಜನು ತನ್ನ ರಾಜ್ಯಕೋಶಾದಿಗಳನ್ನು ತೊರೆದು ಒಬ್ಬಂಟಿಗನಾಗಿ ಕಾಡಿಗೆ ಓಡಿದನು.

೭–೮. ಬಳಿಕ ಆ ರಾಜನು ತಲೆತಪ್ಪಿಸಿಕೊಂಡು ತೀರ್ಥಕ್ಷೇತ್ರಗಳಲ್ಲಿ ಯಾತ್ರೆ ಮಾಡುವ ನೆಪದಿಂದ ಕಾಶೀಪಟ್ಟಣಕ್ಕೆ ಬಂದನು. ಅಲ್ಲಿ ಪ್ರತಿ ಮನೆಯಲ್ಲಿಯೂ ಸತ್ಯನಾರಾಯಣನ ಆರಾಧನೆ ನಡೆಯುತ್ತಿದ್ದಿತು. ಆ ಪಟ್ಟಣವು ಧನಧಾನ್ಯ ಇವುಗಳು ತುಂಬಿ ಸಮೃದ್ಧಿಯಾಗಿದ್ದಿತು. ಕೃಷ್ಣನ ನಿವಾಸಸ್ಥಳವಾದ ದ್ವಾರಕಾ ಪಟ್ಟಣದಂತೆ ಈ ಪಟ್ಟಣವೂ ಶೋಭಾಕರವಾಗಿದ್ದಿತು.

ವಿಸ್ಮಿತಶ್ಚಂದ್ರಚೂಡಶ್ಚ ದೃಷ್ಟ್ವಾಽಶ್ಚರ್ಯಮನುತ್ತಮಂ ।
ಸತ್ಯೇನ ರುದ್ಧಿತಾಂ ಲಕ್ಷ್ಮೀಂ ಶೀಲಧರ್ಮಸಮನ್ವಿತಾಂ ॥ ೯ ॥

ದೃಷ್ಟ್ವಾ ಶ್ರುತ್ವಾ ಸದಾನಂದಂ ಸತ್ಯದೇವಪ್ರಪೂಜಕಂ ।
ಪತಿತ್ವಾ ತಚ್ಚರಣಯೋಃ ಪ್ರಣನಾಮ ಮುದಾ ಯುತಃ ॥ ೧೦ ॥

ದ್ವಿಜರಾಜ ನಮಸ್ತುಭ್ಯಂ ಸದಾನಂದ ಮಹಾಮತೇ ।
ಭ್ರಷ್ಟರಾಜ್ಯಂ ಚ ಮಾಂ ಜ್ಞಾತ್ವಾ ಕೃಪಯಾ ಮಾಂ ಸಮುದ್ಧರ ॥ ೧೧ ॥

ಯಥಾ ಪ್ರಸನ್ನೋ ಭಗವಾಲ್ಲಕ್ಷ್ಮೀಕಾಂತೋ ಜನಾರ್ದನಃ ।
ತಥಾ ತದ್ವದ ಯದ್ಯೋಗ್ಯಂ ವ್ರತಂ ಪಾಪಪ್ರಣಾಶನಂ ॥ ೧೨ ॥

---

೯. ಚಂದ್ರಚೂಡರಾಜನು ಅತ್ಯಂತ ಶ್ರೇಷ್ಠವೂ, ಆಶ್ಚರ್ಯಕರವೂ ಆದ ಅದನ್ನು ನೋಡಿ ವಿಸ್ಮಯಪಟ್ಟನು. ಶೀಲದಿಂದಲೂ ಧರ್ಮದಿಂದಲೂ ಕೂಡಿದ ಲಕ್ಷ್ಮಿಯನ್ನು ಅಲ್ಲಿ ಸತ್ಯನಾರಾಯಣನು ತಡೆದು ನಿಲ್ಲಿಸಿರುವನೆಂಬುದನ್ನು ಕೇಳಿದನು.

೧೦. ಮತ್ತು ಸತ್ಯನಾರಾಯಣ ವ್ರತವನ್ನು ತಪ್ಪದೆ ಆಚರಣೆಮಾಡುತ್ತಿರುವ ಸದಾನಂದನೆಂಬ ಮಹಾತ್ಮನನ್ನು ಕಂಡು ಸಂತೋಷಯುಕ್ತನಾಗಿ ಅವನ ಚರಣ ಯುಗಗಳಿಗೆ ನಮಸ್ಕಾರಮಾಡಿ ಇಂತೆಂದನು.

೧೧. " ಬ್ರಾಹ್ಮಣ ಶ್ರೇಷ್ಠನೂ ಮಹಾಬುದ್ಧಿಶಾಲಿಯೂ ಆದ ಸದಾನಂದ ವರ್ಯಾ! ನಿಮಗೆ ನಮಸ್ಕಾರ. ನಾನು ರಾಜ್ಯವನ್ನು ಕಳೆದುಕೊಂಡ ಅದೃಷ್ಟಹೀನನು, ಇದನ್ನು ತಾವು ಅರಿತು ಕೃಪೆಮಾಡಿ ನನ್ನನ್ನು ಉದ್ಧಾರಮಾಡಿ."

೧೨. "ಷಡ್ಗುಣೈಶ್ವರ್ಯ ಸಂಪನ್ನನೂ, ಲಕ್ಷ್ಮೀಪತಿಯೂ ಆದ ನಾರಾಯಣನು ಏನು ಮಾಡಿದರೆ ಪ್ರಸನ್ನನನಾಗುತ್ತಾನೆ ? ಅವನನ್ನು ಪ್ರಸನ್ನನ್ನಾಗಿಸಬಲ್ಲುದೂ, ಪಾಪವನ್ನು ನಾಶಮಾಡುವುದೂ ಆದಂಥಾ ವ್ರತವಾವುದೆಂಬುದನ್ನು ಹೇಳಿ " ಎಂದು ಕೇಳಿಕೊಂಡನು.

॥ ಸದಾನಂದ ಉವಾಚ ॥

ದುಃಖಶೋಕಾದಿಶಮನಂ ಧನಧಾನ್ಯಪ್ರವರ್ಧನಂ ।
ಸೌಭಾಗ್ಯಸಂತತಿಕರಂ ಸರ್ವತ್ರ ವಿಜಯಪ್ರದಂ ॥ ೧೩ ॥

ಸತ್ಯನಾರಾಯಣವ್ರತಂ ಶ್ರೀಪತೇಸ್ತುಷ್ಟಿಕಾರಕಂ ।
ಯಸ್ಮಿನ್ಕಸ್ಮಿನ್ದಿನೇ ಭೂಪ ಯಜೇಚ್ಚೈವ ನಿಶಾಮುಖೇ ॥ ೧೪ ॥

ತೋರಣಾದಿ ಪ್ರಕರ್ತವ್ಯಂ ಕದಲೀಸ್ತಂಭಮಂಡಿತಮ್ ।
ಪಂಚಭಿಃ ಕಲಶೈರ್ಯುಕ್ತಂ ಧ್ವಜಪಂಚಸಮನ್ವಿತಮ್ ॥ ೧೫ ॥

ತನ್ಮಧ್ಯೇ ವೇದಿಕಾಂ ರಮ್ಯಾಂ ಕಾರಯೇತ್ಸ ವ್ರತೀ ದ್ವಿಜೈಃ ।
ತತ್ರ ಸ್ಥಾಪ್ಯ ಶಿಲಾರೂಪಂ ಕೃಷ್ಣಂ ಸ್ವರ್ಣಸಮನ್ವಿತಮ್ ॥ ೧೬ ॥

---

೧೩-೧೫. ಅದನ್ನು ಕೇಳಿ ಸದಾನಂದನು, ದುಃಖ ಶೋಕ ಮೊದಲಾದುವನ್ನು ಪರಿಹರಿಸುವುದೂ, ಧನವನ್ನೂ ಧಾನ್ಯವನ್ನೂ ಸಮೃದ್ಧಿಯಾಗುವಂತೆ ಮಾಡುವುದೂ, ಸೌಭಾಗ್ಯ ಸಂತಾನಗಳನ್ನು ಉಂಟುಮಾಡುವುದೂ ಎಲ್ಲ ಕಡೆಯಲ್ಲಿಯೂ ಜಯವನ್ನುಂಟುಮಾಡುವುದೂ, ಲಕ್ಷ್ಮೀಪತಿಯಾದ ವಿಷ್ಣುವಿಗೆ ತುಷ್ಟಿಯನ್ನುಂಟುಮಾಡತಕ್ಕದ್ದೂ ಆದ, ಸತ್ಯನಾರಾಯಣ ವ್ರತವೆಂಬುದು ಇದೆ. ಈ ವ್ರತ ಮಾಡಬೇಕೆನ್ನುವವನು, ಇಷ್ಟಬಂದ ದಿವಸ ಮನಃಪೂರ್ವಕವಾದ ಭಕ್ತಿಶ್ರದ್ಧೆಗಳಿಂದ ಕೂಡಿ, ಸಂಧ್ಯಾಕಾಲದಲ್ಲಿ ಪೂಜೆಮಾಡಬೇಕು. ವ್ರತಮಾಡುವವನು ಪೂಜಾಮಂಟಪವನ್ನು ಬಾಳೆಯ ಕಂಬ ಮಾವಿನಸೊಪ್ಪಿನ ತೋರಣ ಮುಂತಾದುವುಗಳಿಂದ ಅಲಂಕರಿಸಬೇಕು. ಆ ಮಂಟಪದ ಮಧ್ಯದಲ್ಲಿ ಸುಂದರವಾಗಿರುವಂತೆ ಜಗಲಿಯನ್ನು ಮಾಡಿಸಬೇಕು.

೧೬. ಅನಂತರ ಪುರೋಹಿತರು ಮುಂತಾದ ವಿಪ್ರರ ಸಮಕ್ಷಮ, ಅದರಲ್ಲಿ ಐದು ಕಲಶಗಳನ್ನು ಐದು ಧ್ವಜಸಮೇತವಾಗಿ ಇರಿಸಿ ಅಲ್ಲಿ ಶಿಲಾರೂಪ ವಿಷ್ಣುವೆನಿಸಿದ ಸಾಲಗ್ರಾಮವನ್ನು ಸ್ವರ್ಣಪ್ರತಿಮಾ ಸಮೇತವಾಗಿ ಇರಿಸಿ, ಪ್ರೇಮದಿಂದಲೂ ಭಕ್ತಿಯಿಂದಲೂ ಕೂಡಿ, ಗಂಧ ಪುಷ್ಪ ಮೊದಲಾದುವುಗಳಿಂದ ಪೂಜಿಸಬೇಕು

ಕುರ್ಯಾದ್ಗಂಧಾದಿಭಿಃ ಪೂಜಾಂ ಪ್ರೇಮಭಕ್ತಿಸಮನ್ವಿತಃ ।
ಭೂಮಿಶಾಯೀ ಹರಿಂ ಧ್ಯಾಯನ್ಸಪ್ತರಾತ್ರಂ ವ್ಯತೀತಯೇತ್ ॥ ೧೭ ॥

ಇತಿ ಶ್ರುತ್ವಾ ಸ ನೃಪತಿಃ ಕಾಶ್ಯಾಂ ದೇವಮಪೂಜಯತ್ ।
ರಾತ್ರೌ ಪ್ರಸನ್ನೋ ಭಗವಾಂದದೌ ರಾಜ್ಞೇಽಸಿಮುತ್ತಮಮ್ ॥ ೧೮ ॥

ಶತ್ರುಪಕ್ಷಕ್ಷಯಕರಂ ಪ್ರಾಪ್ಯ ಖಡ್ಗಂ ನೃಪೋತ್ತಮಃ ।
ಪ್ರಣಮ್ಯ ಚ ಸದಾನಂದಂ ಕೇದಾರಮಣಿಮಾಯಯೌ ॥ ೧೯ ॥

ಹತ್ವಾ ದಸ್ಯೂನ್ಷಷ್ಟಿಶತಾಂಸ್ತೇಷಾಂ ಲಬ್ಧ್ವಾ ಮಹದ್ಧನಂ ।
ಹರಿಂ ಪ್ರಪೂಜಯಾಮಾಸ ನರ್ಮದಾಯಾಸ್ತಟೇ ಶುಭೇ ॥ ೨೦ ॥

ಪೌರ್ಣಮಾಸ್ಯಾಂ ವಿಧಾನೇನ ಮಾಸಿ ಮಾಸಿ ನೃಪೋತ್ತಮಃ ।
ಅಪೂಜಯತ್ಸತ್ಯದೇವಂ ಪ್ರೇಮಭಕ್ತಿಸಮನ್ವಿತಃ ॥ ೨೧ ॥

---

೧೭. ಈರೀತಿ ಪೂಜಾದಿಗಳನ್ನು ಮಾಡಿದ ಮೇಲೆ ದೇವಸಾನ್ನಿಧ್ಯದಲ್ಲಿ ಹರಿಯನ್ನು ಧ್ಯಾನಿಸುತ್ತಾ ನೆಲದ ಮೇಲೆ ಮಲಗಿಕೊಳ್ಳಬೇಕು. ಹೀಗೆ ಏಳು ರಾತ್ರಿಗಳಲ್ಲಿ ಆಚರಿಸಬೇಕು" ಎಂದು ಹೇಳಿದನು.

೧೮. ಆ ರಾಜನು ಈ ಮಾತನ್ನು ಕೇಳಿ, ಆ ಕಾಶೀಪಟ್ಟಣದಲ್ಲೇ ತಾನೂ ಸತ್ಯದೇವನನ್ನು ಕಲ್ಪೋಕ್ತವಾಗಿ ಪೂಜಿಸಿದನು. ಏಳನೆಯದಿನ ರಾತ್ರಿ ಸತ್ಯದೇವನು ಪ್ರಸನ್ನನಾಗಿ ಶ್ರೇಷ್ಠವೂ ಶತ್ರುನಾಶಕವೂ ಆದ ಖಡ್ಗವನ್ನು ರಾಜನಿಗೆ ಕೊಟ್ಟನು.

೧೯. ರಾಜಶ್ರೇಷ್ಠನಾದ ಚಂದ್ರಚೂಡನು ಕತ್ತಿಯನ್ನು ಸ್ವೀಕರಿಸಿ; ಸ್ವಾಮಿಗೆ ನಮಸ್ಕರಿಸಿ, ವ್ರತವನ್ನು ಉಪದೇಶಿಸಿದ ಸದಾನಂದವಿಪ್ರನಿಗೂ ನಮಿಸಿ, ತನ್ನ ನಗರವಾದ ಕೇದಾರಮಣಿಪುರಕ್ಕೆ ಬಂದನು.

೨೦. ಅಲ್ಲಿದ್ದ ಆರುಸಾವಿರ ದಸ್ಯುಗಳನ್ನು ಆ ಖಡ್ಗದಿಂದ ಸಂಹರಿಸಿ, ಅವರು ಶೇಖರಿಸಿದ್ದ ಅಪಾರವಾದ ಧನವನ್ನೆಲ್ಲಾ ಕೈವಶಮಾಡಿಕೊಂಡನು.

೨೧. ಆ ರಾಜಶ್ರೇಷ್ಠನು ಅನಂತರ ನರ್ಮದಾನದಿಯ ತೀರದಲ್ಲಿ ಪವಿತ್ರವಾದ ಪ್ರದೇಶದಲ್ಲಿ ಪ್ರತಿ ತಿಂಗಳಲ್ಲಿಯೂ ಪೂರ್ಣಿಮೆಯದಿವಸ ವಿಧಿವಿಧಾನದಂತೆ ಸತ್ಯನಾರಾಯಣನ ಪೂಜೆಯನ್ನು ಪ್ರೇಮ ಭಕ್ತಿಪುರಸ್ಸರವಾಗಿ ನೆರವೇರಿಸಿದನು.

ತದ್ವ್ರತಸ್ಯ ಪ್ರಭಾವೇನ ಲಕ್ಷಗ್ರಾಮಾಧಿಪೋಽಭವತ್ ।
ರಾಜ್ಯಂ ಕೃತ್ವಾ ಸಷಷ್ಟ್ಯಬ್ದಮಂತೇ ವಿಷ್ಣುಪುರಂ ಯಯೌ ॥ ೨೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಚಂದ್ರ
ಚೂಡೋದ್ಧಾರೋ ನಾಮ ಷಡ್ವಿಂಶೋಽಧ್ಯಾಯಃ.



---

೨೨. ಹೀಗೆ ವ್ರತಾಚರಣಮಾಡಿನುವರ ಮಹಿಮೆಯಿಂದ ಒಂದುಲಕ್ಷ ಗ್ರಾಮುಗಳುಳ್ಳ ರಾಜ್ಯವೇ ಅವನ ವಶವಾಯಿತು. ಆ ರಾಜ್ಯದಲ್ಲಿ ಅವನು ಅರುವತ್ತು ವರ್ಷಗಳು ರಾಜ್ಯಭಾರಮಾಡಿ ದೇಹಾವಸಾನದಲ್ಲಿ ವಿಷ್ಣುಲೋಕವನ್ನು ಸೇರಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ ಖಂಡದಲ್ಲಿ
ಕಲಿಯುಗದ ಇತಿಹಾಸಸಮುದಾಯದಲ್ಲಿ ಚಂದ್ರಚೂಡೋದ್ಧಾರವೆಂಬ
ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ಸಪ್ತವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಅಥೇತಿಹಾಸಂ ಶೃಣುತ ಯಥಾ ಭಿಲ್ಲಾಃ ಕೃತಾರ್ಥಿನಃ ।
ವಿಚರಂತೋ ವನೇ ನಿತ್ಯಂ ನಿಷಾದಾಃ ಕಾಷ್ಠವಾಹಿನಃ ॥ ೧ ॥

ವನಾತ್ಕಾಷ್ಠಾನಿ ವಿಕ್ರೇತುಂ ಪುರೀಂ ಕಾಶೀಂ ಯಯುಃ ಕ್ವಚಿತ್ ।
ಏಕಸ್ತೃಷಾಕುಲೋ ಯಾತೋ ವಿಷ್ಣುದಾಸಾಶ್ರಮಂ ತದಾ ॥ ೨ ॥

ದದರ್ಶ ವಿಪುಲೈಶ್ವರ್ಯಂ ಸೇವಿತಂ ಚ ದ್ವಿಜೈರ್ಹರಿಂ ।
ಜಲಂ ಪೀತ್ವಾ ವಿಸ್ಮಿತೋಽಭೂದ್ಭಿಕ್ಷುಕಸ್ಯ ಕುತೋ ಧನಂ ॥ ೩ ॥

---

## ಇಪ್ಪತ್ತೇಳನೆಯ ಅಧ್ಯಾಯ

೧-೨ ಸೂತಮುನಿವರ್ಯನು ಹೇಳುತ್ತಾನೆ—ಸತ್ಯನಾರಾಯಣ ಪೂಜೆಯಿಂದ ಭಿಲ್ಲರು ಕೃತಾರ್ಥರಾದ ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳಿ. ಪೂರ್ವ ಕಾಲದಲ್ಲಿ ಸೌದೆಯನ್ನು ಸಂಗ್ರಹಿಸುವುದಕ್ಕಾಗಿ ನಿತ್ಯವೂ ಅರಣ್ಯದಲ್ಲಿ ಅಲೆಯುತ್ತಿರುವ ಬೇಡರು, ಕಾಡಿನಿಂದ ಸೌದೆಯನ್ನು ಹೊತ್ತುತಂದು ಮಾರುವುದಕ್ಕಾಗಿ ಒಂದುದಿನ ಕಾಶೀಪಟ್ಟಣಕ್ಕೆ ಹೋದರು. ಅವರಲ್ಲಿ ಒಬ್ಬನು ಬಹಳ ಬಾಯಾರಿದವನಾಗಿ ವಿಷ್ಣು ದಾಸ (ಸದಾನಂದ) ನ ಆಶ್ರಮಕ್ಕೆ ಹೋದನು.

೩-೪. ಅಲ್ಲಿ ಐಶ್ವರ್ಯ ಸಮೃದ್ಧಿಯಾಗಿರುವುದನ್ನೂ ಬ್ರಾಹ್ಮಣರು ಸತ್ಯನಾರಾಯಣನನ್ನು ಪೂಜಿಸುತ್ತಿದ್ದುದನ್ನೂ ಕಂಡನು. ಅಲ್ಲಿ ನೀರನ್ನು ಕುಡಿದು ಅವನು ಅದನ್ನೆಲ್ಲಾ ನೋಡಿ ಅತ್ಯಾಶ್ಚರ್ಯ ಹೊಂದಿದನು. ಈ ಭಿಕ್ಷುಕನಿಗೆ ಧನವೆಲ್ಲಿಂದ ಬಂತು.

ಯೋ ದೃಷ್ಟೋಽಕಿಂಚನೋ ವಿಪ್ರೋ ದೃಶ್ಯತೇಽದ್ಯ ಮಹಾಧನಃ ।
ಇತಿ ಸಂಚಿಂತ್ಯ ಹೃದಯೇ ಸ ಪಪ್ರಚ್ಛ ದ್ವಿಜೋತ್ತಮಂ ॥ ೪ ॥

ಐಶ್ವರ್ಯಂ ತೇ ಕುತೋ ಬ್ರಹ್ಮನ್ದುರ್ಗತಿಸ್ತೇ ಕುತೋ ಗತಾ ।
ಆಜ್ಞಾಪಯ ಮಹಾಭಾಗ ಶ್ರೋತುಮಿಚ್ಛಾಮಿ ತತ್ತ್ವತಃ ॥ ೫ ॥

॥ ಸದಾನಂದ ಉವಾಚ ॥

ಸತ್ಯನಾರಾಯಣಸ್ಯಾಂಗಸೇವಯಾ ಕಿಂ ನ ಲಭ್ಯತೇ ।
ನ ಕಿಂಚಿತ್ಸುಖಮಾಪ್ನೋತಿ ವಿನಾ ತಸ್ಯಾನುಕಂಪಯಾ ॥ ೬ ॥

॥ ನಿಷಾದ ಉವಾಚ ॥

ಅಹೋ ಕಿಮಿತಿ ಮಹಾತ್ಮ್ಯಂ ಸತ್ಯನಾರಾಯಣಾರ್ಚನೇ ।
ವಿಧಾನಂ ಸೋಪಚಾರಂ ಚ ಹ್ಯುಪದೇಷ್ಟುಂ ತ್ವಮರ್ಹಸಿ ॥ ೭ ॥

ಸಾಧೂನಾಂ ಸಮಚಿತ್ತಾನಾಮುಪಕಾರವತಾಂ ಸತಾಂ ।
ನ ಗೋಪ್ಯಂ ವಿದ್ಯತೇ ಕಿಂಚಿದಾರ್ತಾನಾಮಾರ್ತಿನಾಶನಮ್ ॥ ೮ ॥

---

ನಾನು ಕಂಡಹಾಗೆ ಕೇವಲ ಹೀನನಾಗಿದ್ದ ಈ ಬ್ರಾಹ್ಮಣನು ಈಗ ಮಹಾಧನಿಕನಾಗಿ ಕಾಣುತ್ತಾನೆಯಲ್ಲಾ? ಇದೇನು ಕಾರಣವಿರಬಹುದು? ಎಂದು ಮನಸ್ಸಿನಲ್ಲೇ ಆಲೋಚಿಸಿ ಆ ಬ್ರಾಹ್ಮಣನನ್ನು ಕುರಿತು "ಅಯ್ಯಾ ಪೂಜ್ಯನಾದ ದ್ವಿಜಶ್ರೇಷ್ಠ ! ನಿನ್ನ ಹೀನಸ್ಥಿತಿ ಎಲ್ಲಿ ಹೋಯ್ತು? ನಿನಗೆ ಈ ಸಂಪತ್ಸಮೃದ್ಧಿ ಎಲ್ಲಿಂದ ಬಂದಿತು ? ಇದರ ನಿಶ್ಚಯಾಂಶವನ್ನು ತಿಳಿಯಬೇಕೆಂದು ನನಗೆ ಬಹು ಕುತೂಹಲವಾಗಿದೆ. ದಯೆಯಿಟ್ಟು ಅಪ್ಪಣೆಕೊಡಿಸಬೇಕು" ಎಂಬದಾಗಿ ಕೇಳಿಕೊಂಡನು.

೬. ಆಗ ವಿಷ್ಣುದಾಸನು "ಅಯ್ಯಾ ! ಸತ್ಯನಾರಾಯಣನನ್ನು ಪೂಜಿಸಿ ಸೇವೆಗೈದರೆ ದೊರೆಯದೆ ಇರುವುದು ಯಾವುದಿದೆ? ಅವನ ಕೃಪೆಯಿಲ್ಲದೆ ಇದ್ದರೆ ಅತ್ಯಲ್ಪ ಸುಖವೂ ಲಭಿಸಲಾರದು ಕಂಡೆಯಾ" ಎಂದನು.

೭-೮. ಆಗ ಬೇಡಪವನು "ಹಾಗೋ ? ಆ ಸತ್ಯನಾರಾಯಣ ಪೂಜೆಯ ಮಹಾತ್ಮೆಯೆಂಥದು ? ಅದನ್ನು ಮಾಡುವ ಕ್ರಮವಾವುದು ? ಷೋಡಶೋಪಚಾರ ಪೂಜಾವಿಧಾನವಾವುದು ? ಇದನ್ನು ನನಗೆ ತಿಳಿಸಲು ನೀನೇ ಸಮರ್ಥನು, ಶಾಂತವಾದ ಮನಸ್ಸುಳ್ಳ, ಸಾಧುಗಳಲ್ಲಿಯೂ, ಉಪಕಾರಮಾಡುವ ಸ್ವಭಾವವುಳ್ಳ ಸತ್ಪುರು

ಇತಿ ಪೃಷ್ಟೋ ವಿಧಿಂ ವಕ್ತುಮಿತಿಹಾಸಮಥಾಬ್ರವೀತ್ ।
ಚಂದ್ರಚೂಡೋ ಮಹೀಪಾಲಃ ಕೇದಾರಮಣಿಪೂರಕೇ ॥ ೯ ॥

ಮಹಾಶ್ರಮಂ ಸಮಾಯಾತಃ ಸತ್ಯನಾರಾಯಣಾರ್ಚನೇ ।
ವಿಧಾನಂ ಶ್ರೋತುಕಾಮೋಽಸೌ ಮಾಮಾಹ ಸಾದರಂ ವಚಃ ॥ ೧೦ ॥

ಮಯಾ ಯತ್ಕಥಿತಂ ತಸ್ಮೈ ತನ್ನಿಬೋಧ ನಿಷಾದಜ ।
ಸಂಕಲ್ಪ್ಯ ಮನಸಾ ಕಾಮಂ ನಿಷ್ಕಾಮೋ ವಾ ಜನಃ ಕ್ವಚಿತ್ ॥ ೧೧ ॥

ಗೋಧೂಮಚೂರ್ಣಂ ಪಾದಾರ್ಧಂ ಸೇಟಕಾಖ್ಯೈಃ ಸುಚೂರ್ಣಕಮ್ ।
ಸಂಸ್ಕೃತಂ ಮಧುಗಂಧಾಜ್ಯೈರ್ನೈವೇದ್ಯಂ ವಿಭವೇಽರ್ಪಯೇತ್ ॥ ೧೨ ॥

ಪಂಚಾಮೃತೇನ ಸಂಸ್ನಾಪ್ಯ ಚಂದನಾದ್ಯೈಶ್ಚ ಪೂಜಯೇತ್ ।
ಪಾಯಸಾಪೂಪಸಂಯಾವದಧಿಕ್ಷೀರಮಥೋ ಹರೇತ್ ॥ ೧೩ ॥

---

ಪರಲ್ಲಿಯೂ, ದುಃಖಿತರ, ದುಃಖನಿವಾರಣಾಸಾಧನೋಪಾಯವನ್ನು ಸ್ವಲ್ಪವೂ ಗುಟ್ಟುಮಾಡಬಾರದು, ಆದುದರಿಂದ, ನೀನು ತಿಳಿಸಬೇಕು" ಎಂದು ಕೇಳಿದನು. ಬೇಡನು ಹೀಗೆ ಪ್ರಶ್ನಿಸುತ್ತಲೆ ಆ ವಿಪ್ರನು ಆ ವಿಧಾನವನ್ನು ತಿಳಿಸುವುದಕ್ಕಾಗಿ ಈ ಇತಿಹಾಸವನ್ನು ಹೇಳಿದನು.

೧೦-೧೨. ಕೇದಾರ ಮಣಿಪೂರಕ ಗ್ರಾಮದಲ್ಲಿ ಚಂದ್ರಚೂಡನೆಂಬ ಪ್ರಭು ವಿದ್ದನು. ಆತನು ಒಂದಾನೊಂದು ದಿನ ಈ ಪುಣ್ಯಾಶ್ರಮಕ್ಕೆ ಬಂದನು. ಇಲ್ಲಿ ನಡೆದ ಸತ್ಯನಾರಾಯಣ ಪೂಜೆಯ ವಿಧಾನವನ್ನು ಕೇಳಲು ಅಪೇಕ್ಷೆಯುಳ್ಳವನಾಗಿ ನನ್ನನ್ನು ಮೃದುವಾಕ್ಯಗಳಿಂದ ಪ್ರಶ್ನಿಸಿದನು. ನಾನು ಆತನಿಗೆ ಅದನ್ನು ತಿಳಿಸಿದ್ದೆನು. ಎಲೈ ವ್ಯಾಧನೇ ! ಅದನ್ನು ನೀನು ಈಗ ತಿಳಿದುಕೊ, ಮನುಷ್ಯನು ತನ್ನ ಇಷ್ಟಾರ್ಥವನ್ನು ಮನಸ್ಸಿನಲ್ಲಿ ಸಂಕಲ್ಪಮಾಡಿಕೊಂಡೋ ಅಥವಾ ನಿಷ್ಕಾಮದಿಂದಲೋ ಸ್ವಾಮಿಯನ್ನು ಪೂಜಿಸಿ, ಸೇಟಕ, ಪದಾರ್ಧಭಾಗದಷ್ಟು ಗೋಧಿಯಹಿಟ್ಟು ಇವಕ್ಕೆ ತಕ್ಕಷ್ಟು ಸಕ್ಕರೆ, ಜೇನು, ತುಪ್ಪ, ಹಾಲು ಮುಂತಾದ್ದನ್ನು ಹಾಕಿ ಪಾಕಮಾಡಿ ಸಂಸ್ಕರಿಸಿ ನೇವೇದ್ಯಕ್ಕಾಗಿ ಸಿದ್ಧಪಡಿಸಿಕೊಳ್ಳಬೇಕು.

೧೩-೧೪ ಸ್ವಾಮಿಗೆ (ಸಾಲಗ್ರಾಮಕ್ಕೆ) ಪಂಚಾಮೃತ ದ್ರವ್ಯಗಳಿಂದ ಅಭಿಷೇಕ ಮಾಡಿ, ವಸ್ತ್ರ, ಗಂಧ, ಪುಷ್ಪ ಧೂಪದೀಪ ಮೊದಲಾದುವುಗಳಿಂದ ಪೂಜಿಸಿ, ಅಪೂಪ,

**ಉಚ್ಚಾವಚೈಃ ಫಲೈಃ ಪುಷ್ಪೈರ್ಧೂಪದೀಪೈರ್ಮನೋರಮೈಃ ।**
**ಪೂಜಯೇತ್ಪರಯಾ ಭಕ್ತ್ಯಾ ವಿಭವೇ ಸತಿ ವಿಸ್ತರೈಃ ॥ ೧೪ ॥**

**ನ ತುಷ್ಯೇದ್ದ್ರವ್ಯಸಂಭಾರೈರ್ಭಕ್ತ್ಯಾ ಕೇವಲಯಾ ಯಥಾ ।**
**ಭಗವಾನ್ಪರಿತಃ ಪೂರ್ಣೋ ನ ಮಾನಂ ಶೃಣುಯಾತ್ಕ್ವಚಿತ್ ॥ ೧೫ ॥**

**ದುರ್ಯೋಧನಕೃತಾಂ ತ್ಯಕ್ತ್ವಾ ರಾಜಪೂಜಾಂ ಜನಾರ್ದನಃ ।**
**ವಿದುರಸ್ಯಾಶ್ರಮೇ ವಾಸಮಾತಿಥ್ಯಂ ಜಗೃಹೇ ವಿಭುಃ ॥ ೧೬ ॥**

**ಸುದಾಮ್ನಸ್ತಂಡುಲಕಣಾಞ್ಜಗ್ಧ್ವಾ ಮಾನುಷ್ಯದುರ್ಲಭಾಃ ।**
**ಸಂಪದೋऽದಾದ್ಧರಿಃ ಪ್ರೀತ್ಯಾ ಭಕ್ತಿಮಾತ್ರಮಪೇಕ್ಷ್ಯತೇ ॥ ೧೭ ॥**

---

ಪರಮಾನ್ನ ಸಜ್ಜಿಗೆ, ಮೊಸರು, ಹಾಲು, ಸಮೃದ್ಧಿಯಾದ ಹಣ್ಣುಗಳು, ಇವುಗಳ ತಾಂಬೂಲ, ನೀರಾಜನ, ಇವುಗಳಿಂದ ಭಕ್ತಿಪೂರ್ವಕವಾಗಿ ವೈಭವವಾಗುವಂತೆ, ಮನಸಾರ, ವಿಶದವಾಗಿ ಪೂಜಿಸಬೇಕು.

೧೫. ಆ ಸ್ವಾಮಿಯು ಕೇವಲ ಭಕ್ತಿಗೆ ಮೆಚ್ಚುವನೇ ವಿನಾ ಹೇರಳವಾದ ಪೂಜಾಸಂಭಾರಗಳಿಂದ ತೃಪ್ತನಾಗುವುದಿಲ್ಲ. ಪರಮಾತ್ಮನು ಸುತ್ತಲೂ ಎಲ್ಲೆಲ್ಲೂ ಪೂರ್ಣವಾಗಿದ್ದಾನೆ. ಅವನಿಗೆ ಕ್ಲುಪ್ತ ಪರಿಮಿತಿಯನ್ನು ನಾವು ಎಂದೂ ಅಂಗೀಕರಿಸ ಬಾರದು.

೧೬. ಹಿಂದೆ ಶ್ರೀಕೃಷ್ಣಪರಮಾತ್ಮನು ಸಂಧಾನಕ್ಕಾಗಿ ಹಸ್ತಿನಾವತಿಗೆ ಹೋದಾಗ, ದುರ್ಯೋಧನನು ಏರ್ಪಡಿಸಿಕೊಂಡಿದ್ದ ರಾಜಾರ್ಹವಾದ ಆತಿಥ್ಯವನ್ನು ಅಲಕ್ಷಿಸಿ, ವಿದುರನ ಮನೆಗೆ ಹೋಗಿ ಅಲ್ಲಿ ಇಳಿದುಕೊಂಡು ಅವನುಮಾಡಿದ ಅಲ್ಪಾ ತಿಥ್ಯವನ್ನೇ ಸ್ವೀಕರಿಸಿದನು.

೧೭. ಮತ್ತು ಸ್ನೇಹಿತನಾದ ಕುಚೇಲನು ತಂದುಕೊಟ್ಟ ಹಿಡಿ ಅವಲಕ್ಕಿಯನ್ನು ಪ್ರೀತಿಯಿಂದ ತಿಂದು, ಮನುಷ್ಯಮಾತ್ರರು ಸಂಪಾದಿಸಲು ಸಾಧ್ಯವಲ್ಲದಷ್ಟು ಸಂಪ ತ್ತನ್ನು ದಯಪಾಲಿಸಿದನು. ಆದುದರಿಂದ ಭಕ್ತಿಯನ್ನೇ ಮುಖ್ಯವಾಗಿ ಅವಲಂಬಿಸಿ ಈ ಕಾರ್ಯಮಾಡಬೇಕು.

ಗೋಪೋ ಗೃಧ್ರೋ ವಣಿಗ್ವ್ಯಾಧೋ ಹನುಮಾನ್ಸವಿಭೀಷಣಃ ।
ಯೇಽನ್ಯೇ ಪಾಪಾತ್ಮಕಾ ದೈತ್ಯಾವೃತ್ರಕಾ ಯಾಧವಾದಯಃ ॥ ೧೮ ॥

ನಾರಾಯಣಾಂತಿಕಂ ಪ್ರಾಪ್ಯ ಮೋದಂತೇಽದ್ಯಾಪಿ ಯದ್ವಶಾಃ ।
ಇತಿ ಶ್ರುತ್ವಾ ನರಪತಿಃ ಪೂಜಾಸಂಭಾರಮಾದರಾತ್ ॥ ೧೯ ॥

ಕೃತವಾನ್ಸ ಧನಂ ಲಬ್ಧ್ವಾ ಮೋದತೇ ನರ್ಮದಾತಟೇ ।
ನಿಷಾದ ತ್ವಮಪಿ ಪ್ರೀತ್ಯಾ ಸತ್ಯನಾರಾಯಣಂ ಭಜ ॥ ೨೦ ॥

ಇಹಲೋಕೇ ಸುಖಂ ಪ್ರಾಪ್ಯ ಚಾಂತೇ ಸಾನ್ನಿಧ್ಯಮಾಪ್ನುಯಾಃ ।
ಕೃತಕೃತ್ಯೋ ನಿಷಾದೋಽಭೂತ್ಪ್ರಣಮ್ಯ ದ್ವಿಜಪುಂಗವಂ ॥ ೨೧ ॥

ಸ ಗತ್ವಾ ಸ್ವಗಣಾನಾಹ ಮಾಹಾತ್ಮ್ಯಂ ಹರಿಸೇವನೇ ।
ತೇ ಹೃಷ್ಟಮನಸಃ ಸರ್ವೇ ಸಮಯಂ ಚಕ್ರುರಾದೃತಾಃ ॥ ೨೨ ॥

---

೧೮-೨೦. ನಂದಗೋಪ, ಜಟಾಯುವೆಂಬ ಹದ್ದು, ವಣಿಗ್ವರ ವ್ಯಾಧರ ಕಣ್ಣಪ್ಪ, ಹನುಮಂತ, ವಿಭೀಷಣ, ವೃತ್ರಕ, ಯಾಧವ ಮುಂತಾದವರು, ಪಾಪಾತ್ಮರಾಗಿದ್ದ ಕೆಲವರು ದೈತ್ಯರು ಇದಲು ಭಕ್ತಿಪರರಾಗಿ ವಿಷ್ಣು ಸನ್ನಿಧಿಯನ್ನು ಸೇರಿ, ಈಗಲೂ ಸಂತೋಷವಾಗಿ ಇದ್ದಾರೆ. ಎಂಬದಾಗಿ ಹೇಳಲು ಅವನ್ನು ಕೇಳಿ, ಆ ಚಂದ್ರ ಚೂಡರಾಜನು ಧನವನ್ನು ವೆಚ್ಚಮಾಡಿ, ಅದರಿಂದ ಪೂಜಾ ದ್ರವ್ಯಗಳನ್ನು, ತಂದು ನರ್ಮದೆಯ ತೀರದಲ್ಲಿ ಆದರದಿಂದ ಸತ್ಯನಾರಾಯಣನ ಪೂಜೆಮಾಡಿದನು. ಎಲೈ ವ್ಯಾಧನೇ! ನೀನೂ ಹೀಗೆಯೇ ಪ್ರೀತಿಯಿಂದ ಸತ್ಯನಾರಾಯಣನನ್ನು ಭಜಿಸಿ ಪೂಜಿಸು."

೨೧-೨೨. "ಈ ಲೋಕದಲ್ಲಿ ಬೇಕಾದ ಸುಖವನ್ನು ಅನುಭವಿಸಿ, ಶರೀರತ್ಯಾಗ ಮಾಡಿದಮೇಲೆ ಆ ನಾರಾಯಣನ ಸನ್ನಿಧಿಯನ್ನು ಪಡೆಯುವೆ" ಎಂದು ಹೇಳಿದನು. ಇದನ್ನು ಕೇಳಿ ಧನ್ಯನಾದ ಆ ವ್ಯಾಧನು ಆ ವಿಪ್ರೋತ್ತಮನಿಗೆ ನಮಸ್ಕಾರಮಾಡಿ, ಅಲ್ಲಿಂದ ಹೊರಟು ತನ್ನ ಜನರ ಗುಂಪನ್ನು ಸೇರಿ, ಸತ್ಯನಾರಾಯಣ ಪೂಜೆಯ ಮಹಿಮೆಯನ್ನು ಅವರಿಗೆ ಹೇಳಿದನು. ಅವರೆಲ್ಲಾ ಹರ್ಷಯುಕ್ತವಾದ ಮನಸ್ಸಿನಿಂದ ಕೂಡಿ ಒಂದು ನಿಬಂಧನೆ ಮಾಡಿಕೊಂಡರು.

**ಸತ್ಯನಾರಾಯಣೇ ಪೂಜಾಂ ಕಾಷ್ಠಲಬ್ಧೇನ ಯಾವತಾ ।**
**ವಯಂ ಕುರ್ಮಃ ಕರಿಷ್ಯಾಮಃ ಪುಣ್ಯವೃಕ್ಷವಿಧಾನತಃ ॥ ೨೩ ॥**

**ಇತಿ ನಿಶ್ಚಿತ್ಯ ಮನಸಾ ಕಾಷ್ಠಂ ವಿಕ್ರೇಯು ಲೇಭಿರೇ ।**
**ಚತುರ್ಗುಣಂ ಧನಂ ಹೃಷ್ಟಾಃ ಸ್ವಂಸ್ವಂ ಭವನಮಾಯಯುಃ ॥ ೨೪ ॥**

**ಮುದಾ ಸ್ತ್ರೀಭ್ಯಸ್ಸಮಾಚಖ್ಯುರ್ವೃತ್ತಾಂತಂ ಸರ್ವಮಾದಿತಃ ।**
**ತಾಃ ಶ್ರುತ್ವಾ ಹೃಷ್ಟಮನಸಃ ಪೂಜನಂ ಚಕ್ರುರಾದರಾತ್ ॥ ೨೫ ॥**

**ಕಥಾಂತೇ ಪ್ರಾಣಮನ್ಪೃಕ್ತ್ಯಾ ಪ್ರಸಾದಂ ಜಗೃಹುಸ್ತತಃ ।**
**ಸ್ವಜಾತಿಭ್ಯಃ ಪರೇಭ್ಯಶ್ಚ ದದುಸ್ತಚ್ಚೂರ್ಣಮುತ್ತಮಂ ॥ ೨೬ ॥**

---

೨೩. ಈದಿನ ಸೌದೆಯನ್ನು ಮಾರಿದುದರಿಂದ ಸಿಕ್ಕುವಷ್ಟು ದುಡ್ಡನ್ನು ವೆಚ್ಚ ಮಾಡಿ, ಪುಣ್ಯಕರವಾದ ಒಂದು ವೃಕ್ಷದ ಸಾನ್ನಿಧ್ಯದಲ್ಲಿ ನಮ್ಮ ಜನವೆಲ್ಲಾ ಸೇರಿ ಸತ್ಯ ನಾರಾಯಣ ಪೂಜೆಯನ್ನು ಮಾಡೋಣ ".

೨೪. ಹೀಗೆಂಬದಾಗಿ ಮನಸ್ಸಿನಲ್ಲಿ ನಿಶ್ಚಯಮಾಡಿ, ಸೌದೆಯನ್ನು ವಿಕ್ರಯಿಸಲು ಹೋದಾಗ ಅವರಿಗೆ ಎಂದೂ ಸಿಕ್ಕುತ್ತಿದ್ದ ದುಡ್ಡಿನ ನಾಲ್ಕರಷ್ಟು ಹಣವು ಸೌದೆಯ ಮಾರಾಟದಲ್ಲಿ ಬಂದಿತು. ಆಗ ಅವರು ಸಂತೋಷಪಡುತ್ತಾ ತಮ್ಮ ತಮ್ಮ ಮನೆಗಳಿಗೆ ಬಂದರು.

೨೫. ಮನೆಯಲ್ಲಿ ತಮ್ಮ ಹೆಂಗಸರೊಡನೆ ತಾವು ಮಾಡಿಕೊಂಡ ಉದ್ದೇಶ, ಅದರಿಂದ ಹೆಚ್ಚು ದುಡ್ಡು ಸಿಕ್ಕಿದ್ದು, ಈ ವಿಚಾರವೆಲ್ಲವನ್ನೂ ಸಂತೋಷದಿಂದ ತಿಳಿಸಿದರು. ಇದನ್ನು ಕೇಳಿ ಆ ಸ್ತ್ರೀಯರೂ ಸಂತೋಷಯುಕ್ತವಾದ ಮನಸ್ಸಿನಿಂದ ಕೂಡಿ, ಆದರದಿಂದ ಸರ್ವರೂ ಸೇರಿ ಸತ್ಯನಾರಾಯಣ ಪೂಜೆಯನ್ನು ಮಾಡಿದರು.

೨೬. ಅನಂತರ ಕಥೆಯನ್ನು ಶ್ರವಣಮಾಡಿ ಭಕ್ತಿಯಿಂದ ನಮಸ್ಕಾರ ಮಾಡಿದರು. ಬಳಿಕ ವ್ರತನಿಯಮದಲ್ಲಿ ಉಕ್ತವಾಗಿರುವ ವಸ್ತುಗಳಿಂದ ಸಿದ್ಧಪಡಿಸಿ ನೈವೇದ್ಯಮಾಡಿದ ಸಪಾದಭಕ್ಷ್ಯವೆಂಬ ಪ್ರಸಾದವನ್ನು ತಮ್ಮ ಜಾತಿಯ ಸರ್ವರಿಗೂ ಮತ್ತು ಅಲ್ಲಿ ಬಂದಿದ್ದ ಇತರರಿಗೂ ವಿನಿಯೋಗಿಸಿ ತಾವೂ ಸೇವನೆಮಾಡಿದರು.

ಪೂಜಾಪ್ರಭಾವತೋ ಭಿಲ್ಲಾಃ ಪುತ್ರದಾರಾದಿಭಿರ್ಯುತಾಃ ।
ಲಬ್ಧ್ವಾ ಭೂಮಿತಲೇ ದ್ರವ್ಯಂ ಜ್ಞಾನಚಕ್ಷುರ್ಮಹೋತ್ತಮಂ ॥ ೨೭ ॥

ಭುಕ್ತ್ವಾ ಭೋಗಾನ್ಯಥೇಷ್ಟಂ ತೇ ದರಿದ್ರಾಂಧಾದ್ವಿಜೋತ್ತಮ ।
ಜಗ್ಮುಸ್ತೇ ವೈಷ್ಣವಂ ಧಾಮ ಯೋಗಿನಾಮಪಿ ದುರ್ಲಭಮ್ ॥ ೨೮ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಸಪ್ತವಿಂಶೋಽಧ್ಯಾಯಃ.



---

೨೭. ಈರೀತಿ ಸತ್ಯನಾರಾಯಣ ಪೂಜೆಯನ್ನು ಮಾಡಿದುದರ ಪ್ರಭಾವದಿಂದ, ಆ ಬೇಡರು ಭೂಲೋಕದಲ್ಲಿ ಮಹಾಶ್ರೇಷ್ಠವಾದ ಜ್ಞಾನದೃಷ್ಟಿಯನ್ನೂ ದ್ರವ್ಯವನ್ನೂ ಪಡೆದು, ಹೆಂಡತಿ ಮಕ್ಕಳುಗಳ ಸಮೇತರಾಗಿ ಆನಂದಿಸಿದರು.

೨೮. ಅಯ್ಯಾ ಬ್ರಾಹ್ಮಣೋತ್ತಮಾ ! ಕೇಳು. ಇಹಲೋಕದಲ್ಲಿ ದಟ್ಟ ದರಿದ್ರರೂ, ಅಜ್ಞಾನದಿಂದ ಕುರುಡರ ಸಮಾನರೂ ಎನಿಸಿದ ಆ ಭಿಲ್ಲರು, ಈ ವ್ರತ ಪ್ರಭಾವದಿಂದ ಸಮೃದ್ಧಿಯಾದ ಅನುಕೂಲ್ಯಪಡೆದು ಮನಬಂದಂತೆ ಸುಖವನ್ನು ಅನುಭವಿಸಿ, ತಮ್ಮ ದೇಹಾವಸಾನದಲ್ಲಿ ಯೋಗಿಗಳಿಗೂ ದುರ್ಲಭವಾದ ವಿಷ್ಣುಲೋಕವನ್ನು ಸೇರಿದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ಅಷ್ಟಾವಿಂಶೋಽಧ್ಯಾಯಃ

---

॥ ಸೂತ ಉವಾಚ ॥

**ಅಥ ತೇ ವರ್ಣಯಿಷ್ಯಾಮಿ ಕಥಾಂ ಸಾಧೂಪಚಾರಿತಾಂ ।**
**ನೃಪೋಪದೇಶತಃ ಸಾಧುಃ ಕೃತಾರ್ಥೋಽಭೂದ್ವಣಿಗ್ಯಥಾ ॥ ೧ ॥**

**ಮಣಿಪೂರಪತೀ ರಾಜಾ ಚಂದ್ರಚೂಡೋ ಮಹಾಯಶಾಃ ।**
**ಸಹ ಪ್ರಜಾಭಿರಾನರ್ಚ ಸತ್ಯನಾರಾಯಣಂ ಪ್ರಭುಂ ॥ ೨ ॥**

---

## ಇಪ್ಪತ್ತೆಂಟನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ರಾಜನ ಉಪದೇಶದಿಂದ ಸಾಹುಕಾರನಾದ ವೈಶ್ಯನೊಬ್ಬನು ಸತ್ಯನಾರಾಯಣ ವಿಚಾರವಾಗಿ ತಿಳಿದುಕೊಂಡ ರೀತಿಗಳನ್ನೂ ಆ ವೈಶ್ಯಸಾಹುಕಾರನು ಹೇಗೆ ಕೃತಾರ್ಥನಾದನೆಂಬುದನ್ನು ಈಗ ನಿನಗೆ ಹೇಳುತ್ತೇನೆ ಕೇಳು.

೨. ಕೇದಾರದೇಶದ ಮಣಿಪುರ ನಗರದಲ್ಲಿ ಚಂದ್ರಚೂಡನೆಂಬಾತನು ರಾಜನಾಗಿದ್ದನು. ಅವನು ತುಂಬಾಯಶಸ್ವಿ, ಆತನು ಒಂದುಸಲ ಪ್ರಜೆಗಳೆಲ್ಲರೊಡನೆ ಸತ್ಯನಾರಾಯಣಸ್ವಾಮಿಯ ವ್ರತವನ್ನು ನಗರದ ಸಮೀಪದ ನದಿಯ ದಡದಲ್ಲಿ ಆಚರಿಸಿದನು.

ಅಥ ರತ್ನಪುರಸ್ಥಾಯೀ ಸಾಧುರ್ಲಕ್ಷಪತಿರ್ವಣಿಕ್ ।
ಧನೈರಾಪೂರ್ಯ ತರಣೀಃ ಸಹ ಗಚ್ಛನ್ನದೀತಟೇ ॥ ೩ ॥

ದದರ್ಶ ಬಹುಲಂ ಲೋಕಂ ನಾನಾಗ್ರಾಮವಿಲಾಸಿನಮ್ ।
ಮಣಿಮುಕ್ತಾವಿರಚಿತೈರ್ವಿತಾನೈಸ್ಸಮಲಂಕೃತಮ್ ॥ ೪ ॥

ವೇದವಾದಾಂಶ್ಚ ಶುಶ್ರಾವ ಗೀತವಾದಿತ್ರಸಂಗತಾನ್ ।
ರಮ್ಯಂ ಸ್ಥಾನಂ ಸಮಾಲೋಕ್ಯ ಕರ್ಣಧಾರಂ ಸಮಾದಿಶತ್ ॥ ೫ ॥

ವಿಶ್ರಾಮಯಾತ್ರತರಣೀರಿತಿ ಪಶ್ಯಾಮಿ ಕೌತುಕಂ ।
ಭರ್ತ್ರಾದಿಷ್ಟಸ್ತಥಾ ಚಕ್ರೇ ಕರ್ಣಧಾರಃ ಸಭೃತ್ಯಕೈಃ ॥ ೬ ॥

ತಟೇ ಸೀಮ್ನಃ ಸಮುತ್ತೀರ್ಯ ಮಲ್ಲಲೀಲಾವಿಲಾಸಿನಃ ।
ಕರ್ಣಧಾರಾ ನಗಾ ವೀರಾ ಯುಯುಧುರ್ಮಲ್ಲಲೀಲಯಾ ॥ ೭ ॥

---

೩. ರತ್ನಪುರೀ ವಾಸಸ್ಥನಾದ ಲಕ್ಷಪತಿಯೆಂಬ ಹೆಸರುಳ್ಳ ವೈಶ್ಯಸಾಹುಕಾರನು ತನ್ನ ಹಡಗುಗಳಲ್ಲಿ ಧನ, ರತ್ನ ಮೊದಲಾದ ಅನರ್ಘ್ಯವಸ್ತುಗಳನ್ನು ತೆಗೆದುಕೊಂಡು ಆ ನದಿಯಮೇಲೆ ಹಡಗು ನಡೆಸಿಕೊಂಡು ಬರುತ್ತಿದ್ದನು.

೪-೫. ಮಾರ್ಗದಲ್ಲಿ ಆ ನದೀತೀರದಲ್ಲಿ ನಾನಾ ಗ್ರಾಮದವರಾದ ಬಹು ಜನಗಳ ಗುಂಪು ಕಾಣಿಸಿತು. ಅವರು ಸಂಭ್ರಮಯುಕ್ತರಾಗಿದ್ದರು. ಮತ್ತು ರತ್ನಗಳಿಂದ ಅಲಂಕರಿಸಿದ ಚಪ್ಪರವನ್ನು ಏರ್ಪಡಿಸಿದ್ದರು. ಅಲ್ಲಿ ವೇದಘೋಷಧ್ವನಿ, ಗೀತವಾದ್ಯಗಳ ಧ್ವನಿ, ಇವೆಲ್ಲಾ ಕೇಳಬಂದುವು. ನಯನ ಮನೋಹರವಾದ ಆ ಸನ್ನಿವೇಶವನ್ನು ನೋಡಿ, ತನ್ನ ಹಡಗಿನ ನಾವಿಕನನ್ನು ಕುರಿತು "ಇಲ್ಲಿ ಹಡಗುಗಳನ್ನು ಸ್ವಲ್ಪ ನಿಲ್ಲಿಸು, ಈ ಸ್ಥಳದಲ್ಲಿ ಏನು ಕೌತುಕವೋ ನೋಡುತ್ತೇನೆ" ಎಂದನು.

೬. ಆ ನಾವಿಕನು ಯಜಮಾನನ (ಸಾಹುಕಾರನ) ಅಪ್ಪಣೆಯಂತೆ ಹಡಗನ್ನು ನಿಲ್ಲಿಸಿದನು. ಸಾಹುಕಾರನು ಭೃತ್ಯರೊಡನೆ ಹಡಗಿನಿಂದ ಇಳಿದು ನದಿಯ ದಡದ ಮೇಲಕ್ಕೆ ಹತ್ತಿ ಆ ಕೌತುಕದ ದೃಶ್ಯವನ್ನು ನೋಡಲು ಮುದದಿಂದ ಹೋದನು.

೭. ಇತ್ತ ಹಡಗಿನಲ್ಲಿದ್ದ ನಾವಿಕರೂ, ನಗರೂ, ವೀರರೂ ಜಟ್ಟಿಕಾಳಗದ ಕ್ರೀಡೆಯಲ್ಲಿ ಆಸಕ್ತರಾಗಿ ಲೀಲಾರ್ಥವಾಗಿ ಯುದ್ಧಮಾಡುತ್ತಾ ಕಾಲಕಳೆದರು.

ಸ್ವಯಮುತ್ತೀರ್ಯ ಸಾಮಾತ್ಯೋ ಲೋಕಾನ್ಸಪ್ರಚ್ಛ ಸಾದರಂ ।
ಯಜ್ಞಸ್ಥಾನಂ ಸಮಾಲೋಕ್ಯ ಪ್ರಶಸ್ತಂ ಸಮುದೋ ಯಯೌ ॥ ೮ ॥

ಕಿಮತ್ರ ಕ್ರಿಯತೇ ಸಭ್ಯಾ ಭವದ್ಭಿರ್ಲೋಕಪೂಜಿತೈಃ ।
ಸಭ್ಯಾ ಊಚುಶ್ಚ ತೇ ಸರ್ವೇ ಸತ್ಯನಾರಾಯಣೋ ವಿಭುಃ ॥ ೯ ॥

ಪೂಜ್ಯತೇ ಬಂಧುಭಿಃ ಸಾರ್ಧಂ ರಾಜ್ಞಾ ಲೋಕಾನುಕಂಪಿನಾ ।
ಪ್ರಾಪ್ತಂ ನಿಷ್ಕಂಟಕಂ ರಾಜ್ಯಂ ಸತ್ಯನಾರಾಯಣಾರ್ಚನಾತ್ ॥ ೧೦ ॥

ಧನಾರ್ಥೀ ಲಭತೇ ದ್ರವ್ಯಂ ಪುತ್ರಾರ್ಥೀ ಸುತಮುತ್ತಮಂ ।
ಜ್ಞಾನಾರ್ಥೀ ಲಭತೇ ಚಕ್ಷುರ್ನಿರ್ಭಯಃ ಸ್ಯಾದ್ಭಯಾತುರಃ ॥ ೧೧ ॥

ಸರ್ವಾನ್ಕಾಮಾನವಾಪ್ನೋತಿ ನರಃ ಸತ್ಯಸುರಾರ್ಚನಾತ್ ।
ವಿಧಾನಂ ತು ತತಃ ಶ್ರುತ್ವಾ ಚೇಲಂ ಬದ್ಧ್ವಾ ಗಲೇಽಸಕೃತ್ ॥ ೧೨ ॥

---

೮. ಇತ್ತ ಪರಿಜನ ಸಮೇತನಾದ ವೈಶ್ಯಸಾಹುಕಾರನು ದಡದಲ್ಲಿದ್ದ ಜನರಲ್ಲಿಗೆ ಬಂದು, ಆ ಜನಗಳ ಉತ್ಸಾಹವನ್ನೂ ಆದರಪುರಸ್ಸರವಾಗಿ ಅವರು ನಡೆಸುತ್ತಿರುವ ಪ್ರಶಸ್ತವಾದ ಪೂಜೆಯನ್ನೂ ನೋಡಿ ಸಂತೋಷಪಟ್ಟನು.

೯-೧೦. ಬಳಿಕ ಆ ಜನರನ್ನು ಕುರಿತು "ಎಲೈ ಲೋಕಪೂಜ್ಯರಾದ ಸಭ್ಯರೇ! ನೀವು ಇಲ್ಲಿ ಇದೇನು ಮಾಡುತ್ತಿದ್ದೀರಿ ?" ಎಂದು ಕೇಳಿದನು. ಆದಕ್ಕೆ ಆ ಸಭ್ಯರುಗಳೆಲ್ಲ ಏಕಕಂಠ್ಯದಿಂದ "ಲೋಕದಯಾಪರನಾದ ನಮ್ಮ ರಾಜನು ಬಂಧುಮಿತ್ರರೊಡನೆ ಸತ್ಯನಾರಾಯಣವ್ರತವನ್ನು ಆಚರಿಸುತ್ತಿದ್ದಾನೆ. ಈ ಸತ್ಯನಾರಾಯಣ ವ್ರತಮಾಡುವುದರಿಂದ ರಾಜ್ಯವು ತೊಂದರೆಗೀಡಾಗದೆ ಸುರಕ್ಷಿತವಾಗಿರುವುದು".

೧೧-೧೨. "ಈ ವ್ರತಮಾಡಿದರೆ ದ್ರವ್ಯಾಪೇಕ್ಷಿಗೆ ದ್ರವ್ಯಲಾಭವೂ, ಪುತ್ರಾರ್ಥಿಗೆ ಸುಪುತ್ರಾವಾಪ್ತಿಯೂ, ಜ್ಞಾನವನ್ನಪೇಕ್ಷಿಸುವನಿಗೆ ಸುಜ್ಞಾನದೃಷ್ಟಿಯೂ, ಲಭಿಸುವುದು. ಅಲ್ಲದೆ ಭಯಗ್ರಸ್ತನಾದವನ ಭಯವೆಲ್ಲಾ ಪರಿಹಾರವಾಗುವುದು. ಸತ್ಯದೇವನನ್ನು ಪೂಜಿಸಿದ ಮನುಷ್ಯನು ಸಮಸ್ತ ಇಷ್ಟಾರ್ಥಗಳನ್ನೂ ಪಡೆದು ಸುಖಿಸುತ್ತಾನೆ" ಎಂದು ಹೇಳಿದರು.

ದಂಡವತ್ಪ್ರಣಿಪತ್ಯಾಹ ಕಾಮಂ ಸಭ್ಯಾನವೋದಯತ್ ।
ಅನಪತ್ಯೋಽಸ್ಮಿ ಭಗವನ್ನೈಶ್ವರ್ಯೋ ವೃಥೋದ್ಯಮಃ ॥ ೧೩ ॥

ಪುತ್ರಂ ವಾ ಯದಿ ವಾ ಕನ್ಯಾಂ ಲಭೇಯಂ ತ್ವತ್ಪ್ರಸಾದತಃ ।
ಪತಾಕಾಂ ಕಾಂಚನೀಂ ಕೃತ್ವಾ ಪೂಜಯಿಷ್ಯೇ ಕೃಪಾನಿಧಿಂ ॥ ೧೪ ॥

ಶ್ರುತ್ವಾ ಸಭ್ಯಾ ಅಬ್ರುವಂಸ್ತೇ ಕಾಮನಾಸಿದ್ಧಿರಸ್ತು ತೇ ।
ಹರಿಂ ಪ್ರಣಮ್ಯ ಸಭ್ಯಾಂಶ್ಚ ಪ್ರಸಾದಂ ಭುಕ್ತವಾಂಸ್ತದಾ ॥ ೧೫ ॥

ಜಗಾಮ ಸ್ವಾಲಯಂ ಸಾಧುರ್ಮನಸಾ ಚಿಂತಯನ್ ಹರಿಂ ।
ಸ್ವಗೃಹೇ ಹ್ಯಾಗತೇ ತಸ್ಮಿನ್ನಾರ್ಯೋ ಮಂಗಲಪಾಣಯಃ ॥ ೧೬ ॥

ಮಂಗಲಾನಿ ವಿಚಿತ್ರಾಣಿ ಯಥೋಚಿತಮಕಾರಯನ್ ।
ವಿವೇಶಾಂತಃಪುರೇ ಸಾಧುರ್ಮಹಾಕೌತುಕಮಂಗಲಃ ॥ ೧೭ ॥

---

೧೩-೧೪. ಆಮೇಲೆ ಅವರಿಂದಲೇ ಪೂಜಾವಿಧಾನವನ್ನೂ ಕೇಳಿ ತಿಳಿದು ಕೊಂಡು ಅಂಜಲಿಬದ್ಧನಾಗಿ, ಸೊಂಟಕ್ಕೆ ವಸ್ತ್ರವನ್ನು ಕಟ್ಟಿ, ದೀರ್ಘದಂಡ ಪ್ರಣಾಮ ವನ್ನು ಅನೇಕಾವೃತ್ತಿ ಮಾಡಿ ಸಭಾಸದರನ್ನು ಸಂತೋಷಪಡಿಸಿ, ಅವರನ್ನು ಕುರಿತು "ಪೂಜ್ಯರೇ ನನಗೆ ಮಕ್ಕಳೇ ಇಲ್ಲ, ನನ್ನ ಐಶ್ವರ್ಯ ಎಷ್ಟಿದ್ದರೇನು? ನಿಷ್ಫಲ. ಹಾಗೆಯೇ ನನ್ನ ಈ ವ್ಯಾಪಾರೋದ್ಯೋಗಗಳೂ ನಿಷ್ಫಲಗಳು, ನಿಮ್ಮ ಅನುಗ್ರಹದಿಂದ ನನಗೆ ಒಬ್ಬ ಮಗನೋ, ಅಥವಾ ಒಬ್ಬ ಮಗಳೋ, ಆದರೆ, ಆ ಪರಮಾತ್ಮನಿಗೆ ಚಿನ್ನದ ಧ್ವಜವನ್ನು ಮಾಡಿಸಿ ಆ ಕೃಪಾಸಮುದ್ರನನ್ನು ಪೂಜೆಮಾಡುತ್ತೇನೆ" ಎಂದು ಹೇಳಿಕೊಂಡನು.

೧೫. ಇವನು ಹೇಳಿದುದನ್ನು ಕೇಳಿ ಆ ಸಭಾಸದರು "ನಿನ್ನ ಇಷ್ಟಾರ್ಥವು ಸಿದ್ಧಿಯಾಗುವುದು" ಎಂಬದಾಗಿ ಹೇಳಿದರು. ಅನಂತರ ಆ ಸಾಹುಕಾರನು ಸತ್ಯ ನಾರಾಯಣನನ್ನೂ ಸಭಾಸದರನ್ನೂ ವಂದಿಸಿ ಅವರು ಕೊಟ್ಟ ಪ್ರಸಾದನನ್ನು ಸೇವಿಸಿದನು.

೧೬-೧೭. ಅನಂತರ ಆ ಸಾಹುಕಾರನು ಮನದಲ್ಲಿ ಹರಿಯನ್ನೇ ಧ್ಯಾನಿಸುತ್ತಾ ತನ್ನ ಹಡಗನ್ನೇರಿ ಊರಿಗೆ ಹೊರಟನು. ಊರನ್ನು ತಲಪಿ, ಮನೆಯನ್ನು ಪ್ರವೇಶಿ ಸುವ ವೇಳೆಗೆ ಸರಿಯಾಗಿ, ಮುತ್ತೈದೆಯರು ಮಂಗಳ ದ್ರವ್ಯಗಳೊಡನೆ ಮಂಗಳ

ಋತುಸ್ನಾತಾ ಸತೀ ಲೀಲಾವತೀ ಪರ್ಯಚರತ್ಪತಿಂ ।
ಗರ್ಭಂ ಧೃತವತೀ ಸಾಧ್ವೀ ಸಮಯೇ ಸುಷುವೇ ತು ಸಾ ॥ ೧೮ ॥

ಕನ್ಯಾಂ ಕಮಲಲೋಲಾಕ್ಷೀಂ ಬಾಂಧವಾಮೋದಕಾರಿಣೀಂ ।
ಸಾಧುಃ ಪರಾಂ ಮುದಂ ಲೇಭೇ ವಿತತಾರ ಧನಂ ಬಹು ॥ ೧೯ ॥

ವಿಪ್ರಾನಾಹೂಯ ವೇದಜ್ಞಾನ್ಕಾರಯಾಮಾಸ ಮಂಗಲಂ ।
ಲೇಖಯಿತ್ವಾ ಜನ್ಮಪತ್ರೀಂ ನಾಮ ಚಕ್ರೇ ಕಲಾವತೀಂ ॥ ೨೦ ॥

ಕಲಾನಿಧಿಕಲೇವಾಸೌ ವವೃಧೇ ಸಾ ಕಲಾವತೀ ।
ಅಷ್ಟವರ್ಷಾ ಭವೇದ್ಗೌರೀ ನವವರ್ಷಾ ಚ ರೋಹಿಣೀ ॥ ೨೧ ॥

---

ಗೀತಗಳನ್ನು ಹಾಡುತ್ತಾ, ತತ್ಕಾಲೋಚಿತವಾಗಿ ಶುಭಾಶಂಸನಮಾಡಿದರು. ಸಾಹು ಕಾರನ ಅಂತಃಪುರದಲ್ಲಿ ವಿಶೇಷಪ್ರಕಾರವಾದ ಕೌತುಕಮಂಗಳಗಳೊಡನೆ ಆತನಿಗೆ ಸತ್ಕಾರವಾಯಿತು. ಆತನ ಪತ್ನಿಯಾದ ಲೀಲಾವತಿಗೆ ಅಂದೇ ಋತುಸ್ನಾನ. ಪತಿ ವ್ರತೆಯಾದ ಆಕೆ ಆದಿನ ಪತಿಯನ್ನು ಬಹು ಬಗೆಯಾಗಿ ಪರಿಚರ್ಯೆಮಾಡಿದಳು.

೧೯. ಅಂದಿನಿಂದಲೇ ಪತಿವ್ರತೆಯಾದ ಆಕೆ ಗರ್ಭವನ್ನು ಧರಿಸಿದಳು. ದಿನವಾದಮೇಲೆ ಶುಭಲಗ್ನಸಮಯದಲ್ಲಿ ಆಕೆಯು ಕಮಲಲೋಚನೆಯೂ ಚಂಚ ಲಾಕ್ಷಿಯೂ ಬಂಧುಗಳಿಗೆ ಸಂತೋಷಪ್ರದಳೂ ಆದ ಕನ್ಯೆಯನ್ನು ಪ್ರಸುವಿಸಿದಳು. ಸಾಹುಕಾರನು ಅತ್ಯಂತ ಸಂತೋಷಭರಿತನಾಗಿ ಬಹು ದ್ರವ್ಯವನ್ನು ದಾನ ಮಾಡಿದನು.

೨೦. ಉಕ್ತವಾದ ಕಾಲದಲ್ಲಿ ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರನ್ನು ಕರೆಯಿಸಿ, ಪುಣ್ಯಾಹ, ಜಾತಕರ್ಮಾದಿ ಮಂಗಳಮಹೋತ್ಸವಗಳನ್ನು ಮಾಡಿ, ಜನ್ಮ ಪತ್ರಿಕೆ (ಜಾತಕ) ಯನ್ನು ಬರೆಯಿಸಿ, ಕಲಾವತೀ ಯೆಂದು ನಾಮಕರಣ ಮಾಡಿದನು.

೨೧. ಆ ಕುಮಾರಿಯು ಶುಕ್ಲಪಕ್ಷದ ಚಂದ್ರಕಲೆಯಂತೆ ದಿನದಿನಕ್ಕೆ ಅಭಿ ವೃದ್ಧಿ ಹೊಂದಿದಳು. ಸಾಮಾನ್ಯವಾಗಿ ಕನ್ಯೆಯನ್ನು ಎಂಟುವರ್ಷಕ್ಕೆ ಗೌರೀ ಎಂಬ ದಾಗಿಯೂ, ಒಂಭತ್ತುವರ್ಷಕ್ಕೆ ರೋಹಿಣೀ ಎಂತಲೂ, ಹತ್ತುವರ್ಷವಾದಾಗ್ಯೆ ಕನ್ಯಾ ಎಂದೂ, ವ್ಯವಹರಿಸಬೇಕೆಂದು ಶಾಸ್ತ್ರವಿದೆ.

ದಶವರ್ಷಾ ಭವೇತ್ಕನ್ಯಾ ತತಃ ಪ್ರೌಢಾ ರಜಸ್ವಲಾ ।
ಪ್ರೌಢಾಂ ಕಾಲೇನ ತಾಂ ದೃಷ್ಟ್ವಾ ವಿವಾಹಾರ್ಥಮಚಿಂತಯತ್ ॥ ೨೨ ॥

ನಗರೇ ಕಾಂಚನಪುರೇ ವಣಿಕ್ಛಂಖಪತಿಃ ಶ್ರುತಃ ।
ಕುಲೀನೋ ರೂಪಸಂಪತ್ತಿಶೀಲೌದಾರ್ಯಗುಣಾನ್ವಿತಃ ॥ ೨೩ ॥

ವರಯಾಮಾಸ ತಂ ಸಾಧುರ್ದುಹಿತುಃ ಸದೃಶಂ ವರಂ ।
ಶುಭೇ ಲಗ್ನೇ ಬಹುವಿಧೈರ್ಮಂಗಲೈರಗ್ನಿಸನ್ನಿಧೌ ॥ ೨೪ ॥

ವೇದವಾದಿತ್ರನಿನದೈರ್ದದೌ ಕನ್ಯಾಂ ಯಥಾವಿಧಿ ।
ಮಣಿಮುಕ್ತಾಪ್ರವಾಲಾನಿ ವಸನಂ ಭೂಷಣಾನಿ ಚ ॥ ೨೫ ॥

ಮಹಾಮೋದಮಸಾಃ ಸಾಧುರ್ಮಂಗಲಾರ್ಥಂ ದದೌ ಚ ಹ ।
ಪ್ರೇಮ್ಣಾ ನಿವಾಸಯಾಮಾಸ ಗೃಹೇ ಜಾಮಾತರಂ ತತಃ ॥ ೨೬ ॥

---

೨೨. ಅದಕ್ಕಿಂತ ಹೆಚ್ಚಿನ ವಯಸ್ಸಿನ ಕನ್ಯೆಯು ರಜಸ್ವಲೆಯೆನಿಸುವಳು. ತನ್ನ ಮಗಳು ಪ್ರೌಢವಯಸ್ಸಿನವಳಾದುದನ್ನು ನೋಡಿ ಆ ಸಾಹುಕಾರನು ಅವಳಿಗೆ ಮದುವೆ ಮಾಡಬೇಕೆಂದು ಆಲೋಚಿಸಿದನು.

೨೩-೨೬. ಕಾಂಚನಪುರಿಯಲ್ಲಿ ಶಂಖಪತಿಯೆಂಬ ವೈಶ್ಯನು ಇದ್ದನು. ಅವನು ಸತ್ಕುಲಪ್ರಸೂತ, ರೂಪವಂತ, ಒಳ್ಳೆಯಶೀಲವಂತ, ಉದಾರಗುಣದಿಂದ ಕೂಡಿದವನು ಎನಿಸಿದ್ದನು. ಸಾಹುಕಾರನು ತನ್ನ ಮಗಳಿಗೆ ಆತನು ಅನುರೂಪನಾದ ವರನೆಂದು ನಿಶ್ಚಯಿಸಿ, ಮಹಾಹರ್ಷಯುಕ್ತವಾದ ಮನಸ್ಸಿನಿಂದ ಕೂಡಿ, ಶುಭಲಗ್ನದಲ್ಲಿ ಅಗ್ನಿಸಾಕ್ಷಿಕವಾಗಿ ನಾನಾ ಮಂಗಳ ವಾದ್ಯಧ್ವನಿ ವೇದಘೋಷಧ್ವನಿಪೂರ್ವಕವಾಗಿ ಶಾಸ್ತ್ರೋಕ್ತವಾಗಿ ಕನ್ಯಾದಾನಮಾಡಿದನು. ಆಗ ಮಂಗಳಕರವಾದ, ರತ್ನ, ಹವಳ, ಮುತ್ತು ಮುಂತಾದವುಗಳ ಒಡವೆಗಳನ್ನೂ ಅನರ್ಘ್ಯ ವಸ್ತ್ರಗಳನ್ನೂ ಕೊಟ್ಟನು. ವಿವಾಹವಾದಮೇಲೆ ಅಳಿಯನನ್ನು ಪ್ರೇಮದಿಂದ ತನ್ನ ಮನೆಯಲ್ಲೇ ಇರಿಸಿಕೊಂಡನು, ಸಾಹುಕಾರನು ಅವನನ್ನು ಪುತ್ರನನ್ನು ಕಂಡಂತೆ ಭಾವಿಸಿ ನಡೆದುಕೊಳ್ಳುತ್ತಿದ್ದನು. ಆ ಬುದ್ಧಿಶಾಲಿಯಾದ ಅಳಿಯನು ತನ್ನ ಮಾವನನ್ನು ತಂದೆಯನ್ನು ಕಂಡಂತೆ ಗೌರವಿಸುತ್ತಿದ್ದನು. ಈ ಪ್ರಕಾರ ಹಲವು ವರ್ಷಗಳು ಕಳೆದುವು.

**ತಂ ಮೇನೇ ಪುತ್ರವತ್ಸಾಧುಃ ಸ ಚ ತಂ ಪಿತೃವತ್ಸುಧೀಃ ।**
**ಅತೀತೇ ಭೂಯಸಃ ಕಾಲೇ ಸತ್ಯನಾರಾಯಣಾರ್ಚನಂ ॥ ೨೭ ॥**

**ವಿಸ್ಮೃತ್ಯ ಸಹ ಜಾಮಾತ್ರಾ ವಾಣಿಜ್ಯಾಯ ಯಯೌ ಪುನಃ ।**
**॥ ಸೂತ ಉವಾಚ ॥**
**ಅಥ ಸಾಧುಃ ಸಮಾದಾಯ ರತ್ನಾನಿ ವಿವಿಧಾನಿ ಚ ॥ ೨೮ ॥**

**ನೌಕಾಃ ಸಂಸ್ಥಾಪ್ಯ ಸ ಯಯೌ ದೇಶಾದ್ದೇಶಾಂತರಂ ಪ್ರತಿ ।**
**ನಗರಂ ನರ್ಮದಾತೀರೇ ತತ್ರ ವಾಸಂ ಚಕಾರ ಸಃ ॥ ೨೯ ॥**

**ಕುರ್ವನ್ಕ್ರಯಂ ವಿಕ್ರಯಂ ಚ ಚಿರಂ ತಸ್ಥೌ ಮಹಾಮನಾಃ ।**
**ಕರ್ಮಣಾ ಮಾನಸಾ ವಾಚಾ ನ ಕೃತಂ ಸತ್ಯಸೇವನಂ ॥ ೩೦ ॥**

**ತತಃ ಕರ್ಮವಿಪಾಕೇನ ತಾಪಮಾಪಾಚಿರಾದ್ವಣಿಕ್ ।**
**ಕಸ್ಮಿಂಶ್ಚಿದ್ದಿವಸೇ ರಾತ್ರೌ ರಾಜ್ಞೋ ಗೇಹೇ ತಮೋವೃತೇ ॥ ೩೧ ॥**

**ಜ್ಞಾತ್ವಾ ನಿದ್ರಾಗತಾನ್ಸರ್ವಾನ್ಹೃತಂ ಚೌರೈರ್ಮಹಾಧನಂ ।**
**ಪ್ರಭಾತೇ ವಾಚಿತೋ ರಾಜಾ ಸೂತಮಾಗಧವಂದಿಭಿಃ ॥ ೩೨ ॥**

---

೨೭-೩೦. ಆ ಸಾಹುಕಾರನು ಹಿಂದೆ ಸಭಾಸದರೆಮರಿಗೆ ಸತ್ಯನಾರಾಯಣ ವ್ರತ ಮಾಡುವೆನೆಂದು ಹರಸಿಕೊಂಡಿದ್ದುದನ್ನು ಮರೆತೇಬಿಟ್ಟು, ಅಳಿಯನನ್ನು ಜತೆಯಲ್ಲಿ ಕರೆದುಕೊಂಡು ಮತ್ತೆ ವ್ಯಾಪಾರಕ್ಕಾಗಿ ಹೋದನು. ಅಲ್ಲಿ ಸಾಹುಕಾರನು ವಿಧವಿಧವಾದ ರತ್ನ ಮೊದಲಾದುವುಗಳನ್ನು ಶೇಖರಿಸಿ, ಹಡಗಿನಲ್ಲಿ ತುಂಬಿಕೊಂಡು ದೇಶದಿಂದ ದೇಶಕ್ಕೆ ಹೋಗಿ ವ್ಯಾಪಾರಮಾಡುತ್ತಿದ್ದನು ನರ್ಮದಾನದಿಯ ದಡದಲ್ಲಿದ್ದ ಒಂದು ಪಟ್ಟಣದಲ್ಲಿ ಹಡಗಿನಿಂದ ಇಳಿದು ಅಲ್ಲಿ ಕ್ರಯ ವಿಕ್ರಯ ಮೊದಲಾದುವನ್ನು ಮಾಡುತ್ತಾ ಬಹುದಿವಸ ಅಲ್ಲಿಯೇ ಇದ್ದನು. ಇಷ್ಟುದಿನವಾದರೂ ಮನೋವಾಕ್ಕರ್ಮಗಳಲ್ಲಿ ಯಾವುದರಿಂದಲೂ ಸತ್ಯದೇವನ ಸೇವೆಯನ್ನು ಮಾಡಲಿಲ್ಲ.

೩೧-೩೨. ಹೀಗಿರಲು ಸ್ವಲ್ಪದಿನದೊಳಗೆ ಆ ಸಾಹುಕಾರನ ಪ್ರಾರಬ್ಧಕರ್ಮವಶದಿಂದ ಅವನಿಗೆ ಒಂದು ಸಂಕಟಪ್ರಾಪ್ತಿಯಾಯಿತು. ಒಂದು ರಾತ್ರಿಯಲ್ಲಿ ಕಗ್ಗತ್ತಲೆಯು ಕವಿದಿರುವಾಗ ಅರಮನೆಯಲ್ಲಿ ಎಲ್ಲರಿಗೂ ನಿದ್ದೆಬಂದ ಸಮಯವನ್ನು ನೋಡಿಕೊಂಡು ಕಳ್ಳರು, ಒಳಕ್ಕೆ ನುಗ್ಗಿ ಬೇಕಾದಷ್ಟು ಧನ, ಆಭರಣ ಮುಂತಾದುವನ್ನು ಕದ್ದುಕೊಂಡು ಹೋದರು.

ಪ್ರಾತಃಕೃತ್ಯಂ ನೃಪಃ ಕೃತ್ವಾ ಸದಃ ಸಂಪ್ರಾವಿಶಚ್ಚ ಸಃ ।
ತತಸ್ತತ್ರ ಸಮಾಯಾತಃ ಕಿಂಕರೋ ರಾಜವಲ್ಲಭಃ ॥ ೩೩ ॥

ಉವಾಚ ಸ ತದಾ ವಾಕ್ಯಂ ಶೃಣುಷ್ವ ತ್ವಂ ಧರಾಪತೇ ।
ಮುಕ್ತಾಮಾಲಾಶ್ಚ ಬಹುಧಾ ರತ್ನಾನಿ ವಿವಿಧಾನಿ ಚ ॥ ೩೪ ॥

ಮುಮುಷುಶ್ಚೌರಾ ಗತಾಸ್ಸರ್ವೇ ನ ಜಾನೀಮೋ ವಯಂ ನೃಪ ।
ಇತಿ ವಿಜ್ಞಾಪಿತೋ ರಾಜಾ ಪುಣ್ಯಶ್ಲೋಕಶಿಖಾಮಣಿಃ ॥ ೩೫ ॥

ಉವಾಚ ಕ್ರೋಧತಾಮ್ರಾಕ್ಷೋ ಯೂಯಂ ಸಂಯಾತ ಮಾ ಚಿರಂ ।
ಸಚೌರಂ ದ್ರವ್ಯಮಾದಾಯ ಮತ್ಪಾರ್ಶ್ವಂ ತ್ವಮುಪಾನಯ ॥ ೩೬ ॥

ನೋ ಚೇದ್ಧನಿಷ್ಯೇ ಸಗಣಾನಿತಿ ದೂತಾನ್ಸಮಾದಿಶತ್ ।
ನೃಪವಾಕ್ಯಂ ಸಮಾಕರ್ಣ್ಯ ಪ್ರಜಗ್ಮುಸ್ತೇ ಚ ಕಿಂಕರಾಃ ॥ ೩೭ ॥

---

೩೩. ಉಷಃಕಾಲದಲ್ಲಿ ಸೂತರು, ವಂದಿಗಳು, ಮಾಗಧರು, ಮೊದಲಾದವರು ಸ್ತೋತ್ರವಾಚನದಿಂದ ಎಚ್ಚರಗೊಳಿಸಲಾಗಿ, ರಾಜನು ಎದ್ದು ಪ್ರಾತಃಕಾಲದ ಕೃತ್ಯಗಳನ್ನು ನೆರವೇರಿಸಿಕೊಂಡು ಒಡ್ಡೋಲಗವನ್ನು ಪ್ರವೇಶಿಸಿದನು.

೩೪-೩೫. ಆಗ ರಾಜನಿಗೆ ಅತಿಪ್ರಿಯನಾದ ಸೇವಕನು ಅಲ್ಲಿಗೆ ಬಂದು "ಎಲೈ ಮಹಾಪ್ರಭುವೇ ! ಕೇಳು, ಮುತ್ತಿನ ಕಂಠೀಸರಗಳು, ರತ್ನಹಾರಗಳು ವಿಧವಿಧವಾದ ರತ್ನಾಭರಣಗಳು ಎಲ್ಲವನ್ನೂ ಕಳ್ಳರು ಕದ್ದುಕೊಂಡು ಹೋಗಿದ್ದಾರೆ. ಅದು ಹೇಗೆ ಕಳವಾಯಿತೋ ನಮಗೆ ತಿಳಿಯದು" ಎಂಬದಾಗಿ ವಿಜ್ಞಾಪಿಸಿದನು.

೩೬. ಪುಣ್ಯ ಚರಿತ್ರರಲ್ಲಿ ಶ್ರೇಷ್ಠನಾದ ರಾಜನು ಇದನ್ನು ಕೇಳಿ ಕೋಪದಿಂದ ಕಣ್ಣುಕೆಂಪೇರಿದವನಾಗಿ, "ನೀವು ಸಾವಕಾಶಮಾಡದೆ ಹುಡುಕಿ, ಆ ಚೋರನನ್ನು ಕಳವುಮಾಲು ಸಮೇತ ತಂದು ನನ್ನ ಸಮ್ಮುಖದಲ್ಲಿ ನಿಲ್ಲಿಸಬೇಕು,

೩೭-೩೯. "ಹಾಗೆ ಮಾಡದೆ ಹೋದರೆ ನಿಮ್ಮೆಲ್ಲರನ್ನೂ ಕೊಲ್ಲಿಸಿಬಿಡುತ್ತೇನೆ" ಎಂದು ದೂತರಿಗೆ ಅಪ್ಪಣೆಮಾಡಿದನು. ರಾಜನ ಈ ಮಾತನ್ನು ಕೇಳಿದ ಕೂಡಲೆ, ಆ ಕಿಂಕರರು ಕಳ್ಳರನ್ನು ಹುಡುಕುವುದಕ್ಕಾಗಿ ಹೊರಟು, ಬಹಳ ಪ್ರಯಾಸ ಪಟ್ಟು ಹುಡುಕಿದರೂ ದ್ರವ್ಯವೂ ಚೋರರೂ ಸಹ ಸಿಕ್ಕಲೇ ಇಲ್ಲ. ಆಗ ರಾಜ

**ಬಹುಯತ್ನೈರ್ನ ಸಂಶೋಧ್ಯ ದ್ರವ್ಯಂ ಚೌರಸಮನ್ವಿತಂ ।**
**ಏಕೀಭೂತ್ವಾ ನಿಶಿ ತದಾ ಮಹಚ್ಚಿಂತಾತುರೋಽಭವತ್ ॥ ೩೮ ॥**

**ಹಂತಾ ಮಾಂ ಸಗಣಂ ರಾಜಾ ಕಿಂ ಕರೋಮಿ ಕುತಃ ಸುಖಂ ।**
**ನೃಪದಂಡಾಚ್ಚ ಮೇ ಮೃತ್ಯುಃ ಪ್ರೇತತ್ವಾಯ ಭವೇದಿಹ ॥ ೩೯ ॥**

**ನರ್ಮದಾಯಾಂ ಚ ಮರಣಂ ಶಿವಲೋಕಪ್ರದಾಯಕಂ ।**
**ಇತ್ಯೇವಂ ಸಂಮತಂ ಕೃತ್ವಾ ನರ್ಮದಾಯಾಸ್ತಟಂ ಯಯುಃ ॥ ೪೦ ॥**

**ವಿದೇಶಿನೋಽಸ್ಯ ವಣಿಜೋ ದದರ್ಶ ವಿಪುಲಂ ಧನಂ ।**
**ಮುಕ್ತಾಹಾರಂ ಗಲೇ ತಸ್ಯ ಲುಠಿತಂ ವಣಿಜೋಽಸ್ಯ ಚ ॥ ೪೧ ॥**

**ಚೌರೋಽಯಮಿತಿ ನಿಶ್ಚಿತ್ಯ ತೌ ಬಬಂಧಾತ್ಮರಕ್ಷಣಾತ್ ।**
**ಸಧನಂ ಸಹ ಜಾಮಾತ್ರಾ ನೃಪಾಂತಿಕಮುಪಾನಯತ್ ॥ ೪೨ ॥**

---

ಕಿಂಕರರೆಲ್ಲರೂ ರಾತ್ರಿ ಒಂದುಕಡೆ ಒಟ್ಟುಗೂಡಿ, ತುಂಬಾ ಚಿಂತಾಕ್ರಾಂತರಾಗಿ "ನಮ್ಮ ಗುಂಪಿಗೇ ರಾಜನು ಶಿಕ್ಷೆ ವಿಧಿಸುವನಲ್ಲಾ ! ಏನು ಮಾಡುವುದು ? ಇನ್ನು ನಮಗೆ ಸುಖದ ಆಶೆ ಎಲ್ಲಿ ಬಂತು ? ರಾಜನ ಶಿಕ್ಷೆಗೆ ಒಳಗಾದ ನಮಗೆ ಮೃತ್ಯುಪ್ರಾಪ್ತಿಯೊದಗಿ ನಮಗೆ ಪ್ರೇತತ್ವವೇ ಗತಿ"

೪೦. "ಆದಕ್ಕಿಂತ ಈ ನರ್ಮದಾ ನದಿಯಲ್ಲಿ ಬಿದ್ದು ಪ್ರಾಣತ್ಯಾಗಮಾಡಿದರೆ ಶಿವಲೋಕ ಪ್ರಾಪ್ತಿಯಾದೀತು" ಎಂಬದಾಗಿ ಎಲ್ಲರೂ ನದಿಗೆ ಬೀಳಲು ಸಮ್ಮತಿಸಿ ಒಟ್ಟಿಗೆ ನದಿಯ ದಡಕ್ಕೆ ಬಂದರು.

೪೧. ಅಲ್ಲಿ ದೇಶಾಂತರದಿಂದ ಬಂದಿರುವ ಈ ವರ್ತಕನ ಸಮೃದ್ಧವಾದ ಧನ, ಆಭರಣ ಮುಂತಾದುವುಗಳ ರಾಶಿಯನ್ನೂ, ಆ ವರ್ತಕರ ಕಂಠದಲ್ಲಿ ಜೋಲಾಡುವ ಮುತ್ತಿನ ಕಂಠಿಯನ್ನೂ ಕಂಡು, ಇವರೇ ಕಳ್ಳರೆಂದು ನಿಶ್ಚಯಿಸಿ, ಆ ಸಾಹುಕಾರ ಮತ್ತು ಅವನ ಅಳಿಯ ಇಬ್ಬರನ್ನೂ ಹಿಡಿದು ಬಂಧಿಸಿದರು.

೪೨. ಹೀಗೆ ಬಂಧಿಸಿದ ಆ ವರ್ತಕರನ್ನು ಧನ ಆಭರಣ ಇವುಗಳ ಸಮೇತ ರಾಜಸನ್ನಿಧಿಗೆ ಎಳೆದುತಂದು ನಿಲ್ಲಿಸಿದರು.

ಪ್ರತಿಕೂಲೇ ಹರೌ ತಸ್ಮಿನ್ರಾಜ್ಞಾಪಿ ನ ವಿಚಾರಿತಂ ।
ಧನಾಗಾರೇ ಧನಂ ನೀತ್ವಾ ಬಧ್ನೀತೌ ತೌ ಸುದುರ್ಮತೀ ॥ ೪೩ ॥

ಕಾರಾಗಾರೇ ಲೋಹಮಯ್ಯೈಃ ಶೃಂಖಲೈರಂಗಪಾದಯೋಃ ।
ಇತಿ ರಾಜಾಜ್ಞಯಾ ದೂತಾಸ್ತಥಾ ಚಕ್ರುರ್ನಿಬಂಧನಂ ॥ ೪೪ ॥

ಜಾಮಾತ್ರಾ ಸಹಿತಃ ಸಾಧುರ್ವಿಲಲಾಪ ಭೃಶಂ ಮುಹುಃ ।
ಹಾ ಪುತ್ರ ತಾತ ತಾತೇತಿ ಜಾಮಾತಃ ಕ್ವ ಧನಂ ಗತಂ ॥ ೪೫ ॥

ಕ್ವ ಸ್ಥಿತಾ ಚ ಸುತಾ ಭಾರ್ಯಾ ಪಶ್ಯ ಧಾತುರ್ವಿಪರ್ಯಯಂ ।
ನಿಮಗ್ನೌ ದುಃಖಜಲಧೌ ಕೋ ವಾಂ ತ್ರಾಸ್ಯತಿ ಸಂಕಟಾತ್ ॥ ೪೬ ॥

ಮಯಾ ಬಹುತರಂ ಧಾತುರ್ವಿಪ್ರಿಯಂ ಹಿ ಪುರಾ ಕೃತಂ ।
ತತ್ಕರ್ಮಣಃ ಪ್ರಭಾವೋऽಯಂ ನ ಜಾನೇ ಕಸ್ಯ ವಾ ಫಲಂ ॥ ೪೭ ॥

---

೪೩-೪೪. ಸತ್ಯನಾರಾಯಣನ ಕೃಪೆಯು ಇವರ ಮೇಲಿರಲಿಲ್ಲವಾದುದರಿಂದ ರಾಜನೂ ಕೂಡ ಇವರನ್ನು ಸಾವಧಾನದಿಂದ ವಿಚಾರಿಸಲಿಲ್ಲ. ಅವನಿಗೆ ದುರ್ಬುದ್ಧಿ ಹುಟ್ಟಿ, ಇವರ ಹಣವನ್ನೆಲ್ಲಾ ತನ್ನ ಭಂಡಾರಕ್ಕೆ ತುಂಬಿಸಿದುದು ಮಾತ್ರವಲ್ಲದೆ ಇವರಿಬ್ಬರಿಗೂ ಕೈಕಾಲುಗಳಿಗೆ ಕಬ್ಬಿಣದ ಸಂಕೋಲೆ ತೊಡಿಸಿ ಕಾರಾಗೃಹದಲ್ಲಿ ಬಂಧನದಲ್ಲಿಡುವಂತೆ ಆಜ್ಞಾಪಿಸಿದನು. ರಾಜದೂತರು ರಾಜಾಜ್ಞೆಯಿಂದ ಆರೀತಿ ಬಂಧನಪಲ್ಲಿಟ್ಟರು.

೪೫-೪೭. ಆ ಕಾರಾಗೃಹದಲ್ಲಿ ಆ ಸಾಹುಕಾರನು ಅಳಿಯನ ಸಮೇತ ಇರುತ್ತಾ, ಪದೇ ಪದೇ ವಿಶೇಷವಾಗಿ ಗೋಳಾಡಿದನು. ಅಯ್ಯೋ ಅಪ್ಪಾ! ಹಾ ಪುತ್ರ! ಅಳಿಯ ದೇವರೇ! ನಮ್ಮ ಧನವೆಲ್ಲಾ ಎಲ್ಲಿ ಹೋಯಿತೋ! ನನ್ನ ಮಗಳೆಲ್ಲಿದ್ದಾಳೋ? ನನ್ನ ಹೆಂಡತಿ ಏನಾದಳೋ? ಅದೃಷ್ಟದ ವಿಪರ್ಯಯವನ್ನು ನೋಡು. ಈ ದುಃಖಸಮುದ್ರದಲ್ಲಿ ಮುಳುಗಿರುವ ನಮ್ಮನ್ನು ಸಂಕಟದಿಂದ ಪಾರುಮಾಡುವವರು ಯಾರು? ನಾನು ಪೂರ್ವದಲ್ಲಿ ಬ್ರಹ್ಮನಿಗೆ ಅಪ್ರಿಯವಾದ ಯಾವ ಕೃತ್ಯವನ್ನು ಮಾಡಿದ್ದೆನೋ, ಹೀಗಾದುದು ಅದರ ಪ್ರಭಾವವಿರಬಹುದೇ? ಯಾವುದರ ಫಲದಿಂದ

ಸಮಂ ಶ್ವಶುರಜಾಮಾತ್ರೌ ದ್ವಾದಶೇಷು ವಿಷಾದಿನೌ । ॥ ೪೮ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಅಷ್ಟಾವಿಂಶೋಽಧ್ಯಾಯಃ.



---

ಹೀಗಾಯಿತೋ ಕಾಣೆನಲ್ಲಾ " ಎಂದು ಚಿಂತಿಸಿ, ಮಾವ ಅಳಿಯ ಇಬ್ಬರೂ ಹನ್ನೆರಡನೆಯದಿನ ವಿಷಸೇವನೆಮಾಡಲು ಪ್ರಯತ್ನಿಸಿದರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ
ಖಂಡದಲ್ಲಿ ಇಪ್ಪತ್ತೆಂಟನೆಯ ಆಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ಏಕೋನತ್ರಿಂಶೋಽಧ್ಯಾಯಃ

---

॥ ಸೂತ ಉವಾಚ ॥

ತಾಪತ್ರಯಹರಂ ವಿಷ್ಣೋಶ್ಚರಿತಂ ತಸ್ಯ ತೇ ಶಿವಂ ।
ಶೃಣ್ವಂತಿ ಸುಧಿಯೋ ನಿತ್ಯಂ ತೇ ವಿಶಂತಿ ಹರೇಃ ಪದಂ ॥ ೧ ॥

ಪ್ರತಿಕೂಲೇ ಹರೌ ತಸ್ಮಿನ್ಯಾಸ್ಯಂತಿ ನಿರಯಾನ್ ಬಹೂನ್ ।
ತತ್ಪ್ರಿಯಾ ಕಮಲಾ ದೇವೀ ಚತ್ವಾರಸ್ತಸ್ಯ ಚಾತ್ಮಜಾಃ ॥ ೨ ॥

ಧರ್ಮೋ ಯಜ್ಞೋ ನೃಪಶ್ಚೌರಃ ಸರ್ವೇ ಲಕ್ಷ್ಮೀಪ್ರಿಯಂಕರಾಃ ।
ವಿಪ್ರೇಭ್ಯಶ್ಚಾತಿಥಿಭ್ಯಶ್ಚ ಯದ್ದಾನಂ ಧರ್ಮ ಉಚ್ಯತೇ ॥ ೩ ॥

---

## ಇಪ್ಪತ್ತೊಂಭತ್ತನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಆ ಸತ್ಯನಾರಾಯಣ ಚರಿತ್ರೆಯು ನಿನ್ನ ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ಎಂಬ ಮೂರು ಸಂತಾಪಗಳನ್ನೂ ಪರಿಹಾರ ಮಾಡುವುದೂ ಮತ್ತು ಮಂಗಳಕರವಾದುದೂ ಆಗಿದೆ.

೨. ಆದರೆ, ಜನರು ಧರ್ಮಭ್ರಷ್ಟರಾಗಿ ನಡೆದಾಗ ಮಾತ್ರ ಅವನು ಪ್ರತಿಕೂಲನಾಗುವನು. ಆಗ ಆ ಜನರು ಬಹಳ ವಿಧವಾಗಿ ನರಕಯಾತನೆಯನ್ನು ಅನುಭವಿಸುವರು. ಆ ಸತ್ಯನಾರಾಯಣಸ್ವಾಮಿಗೆ ಲಕ್ಷ್ಮೀ (ಕಮಲಾ) ದೇವಿಯು ಪ್ರಿಯೆಯು, ಅವಳಿಗೆ ನಾಲ್ವರು ಮಕ್ಕಳು.

೩. ಧರ್ಮ, ಯಜ್ಞ, ರಾಜ, ಕಳ್ಳ ಈ ನಾಲ್ವರೂ ಲಕ್ಷ್ಮಿಗೆ ಪ್ರಿಯವಾಗುವ ಕಾರ್ಯಮಾಡತಕ್ಕವರು. ಬ್ರಾಹ್ಮಣರಿಗೂ ಪರಸ್ಥಳದವರಾದ ಅತಿಥಿಗಳಿಗೂ ಮಾಡತಕ್ಕ ದಾನವೇ ಧರ್ಮವೆನಿಸುವುದು.

ಮಾತೃಭ್ಯೋ ದೇವತಾಭ್ಯಶ್ಚ ಸ್ವಧಾ ಸ್ವಾಹೇತಿ ವೈ ಮಖಃ ।
ಧರ್ಮಸ್ಯೈವ ಮಖಸ್ಯೈವ ರಕ್ಷಕೋ ನೃಪತಿಃ ಸ್ಮೃತಃ ॥ ೪ ॥

ದ್ವಯೋರ್ಹಂತಾ ಹಿ ಚೋರಃ ಸ ತೇ ಸರ್ವೇ ಧರ್ಮಕಿಂಕರಾಃ ।
ಯತ್ರ ಸತ್ಯಂ ತತೋ ಧರ್ಮಸ್ತತ್ರ ಲಕ್ಷ್ಮೀಃ ಸ್ಥಿರಾ ಭವೇತ್ ॥ ೫ ॥

ಸತ್ಯಹೀನಸ್ಯ ತತ್ಸಾಧೋರ್ಧನಂ ಯತ್ತದ್ಗೃಹೇ ಸ್ಥಿತಂ ।
ಹೃತವಾನವನೀಪಾಲಃ ಚೌರ್ಯೈರ್ಭಾರ್ಯಾತಿ ದುಃಖಿತಾ ॥ ೬ ॥

ವಾಸೋಲಂಕರಣಾದೀನಿ ವಿಕ್ರೀಯ ಬುಭುಜೇ ಕಿಲ ।
ನಾಸ್ತಿ ತತ್ಪಚ್ಯತೇ ಕಿಂಚಿತ್ತದಾ ಕಷ್ಟಮುಗಾಹತ ॥ ೭ ॥

---

೪. ದೇವತೆಗಳಿಗೆ ಸ್ವಾಹಾಕಾರಪೂರ್ವಕವಾಗಿ ಅಗ್ನಿಯಲ್ಲಿ ಆಹುತಿಕೊಡುವುದೂ, ನಾಂದೀ ಮಾತೃಗಳು ಪಿತ್ರಾದಿಗಳಿಗೆ ಸ್ವಧಾಪೂರ್ವಕವಾಗಿ ಕೊಡುವುದೂ ಸಹ ಯಜ್ಞವೆನಿಸುವುದು. ಈ ಧರ್ಮರಕ್ಷಣೆ ಮತ್ತು ಯಜ್ಞರಕ್ಷಣೆಯ ಕಾರ್ಯಗಳನ್ನು ರಾಜನು ನಿರ್ವಹಿಸುತ್ತಾನೆ.

೫. ಕಳ್ಳನು ಧರ್ಮ, ಯಜ್ಞ ಇವುಗಳನ್ನು ಧ್ವಂಸಮಾಡುತ್ತಾನೆ. ಇವರೆಲ್ಲರೂ ಧರ್ಮದ ಆಜ್ಞಾನುವರ್ತಿಗಳಾದ ಸೇವಕರು. ಸತ್ಯವು ನೆಲಸಿರುವ ಸ್ಥಳವಲ್ಲಿ, ಸಂಪತ್ತೂ ಧರ್ಮಾಚರಣೆಯೂ ಸ್ಥಿರವಾಗಿರುತ್ತವೆ.

೬. ತಾನು ಮಾಡಿದ ಹರಕೆಯಂತೆ ಆಚರಿಸದೆ ಸತ್ಯಕ್ಕೆ ತಪ್ಪಿದ ಆ ಸಾಹುಕಾರನ ಹಡಗಿನಲ್ಲಿದ್ದ ದ್ರವ್ಯಾದಿಗಳನ್ನು ರಾಜನು ವಶಪಡಿಸಿಕೊಂಡನು. ಅವನ ಊರಿನಲ್ಲಿ ಮನೆಯಲ್ಲಿದ್ದ ಧನಕನಕಾದಿಗಳನ್ನೆಲ್ಲಾ ಚೋರರು ಅಪಹರಿಸಿದರು. ಅವನ ಹೆಂಡತಿ ಅತಿ ದುಃಖಕ್ಕೊಳಗಾದಳು.

೭. ಆಕೆ ತಿನ್ನುವುದಕ್ಕಿಲ್ಲದೆ ಮೈಮೇಲಿದ್ದ ಒಡವೆಗಳು, ಮನೆಯಲ್ಲಿದ್ದ ವಸ್ತ್ರ. ಮೊದಲಾದುವನ್ನು ಮಾರಿಕೊಂಡು ಅದರಿಂದ ಹೊಟ್ಟೆ ಹೊರೆಯುತ್ತಿದ್ದಳು. ಅದೂ ಮುಗಿದು ಹೋಗಿ ಏನೂ ಇಲ್ಲದಂತಾಗಲು ಮಹಾಕಷ್ಟಕ್ಕೆ ಸಿಕ್ಕಿ ತಲ್ಲಣಿಸುತ್ತಿದ್ದಳು.

ಅಥೈಕಸ್ಮಿನ್ದಿನೇ ಕನ್ಯಾ ಭೋಜನಾಚ್ಛಾದನಂ ವಿನಾ ।
ಗತಾ ವಿಪ್ರಗೃಹೇಽಪಶ್ಯತ್ಸತ್ಯನಾರಾಯಣಾರ್ಚನಂ ॥ ೮ ॥

ಪ್ರಾರ್ಥಯಂತಂ ಜಗನ್ನಾಥಂ ದೃಷ್ಟ್ವಾ ಸಾ ಪ್ರಾರ್ಥಯದ್ಧರಿಂ ।
ಸತ್ಯನಾರಾಯಣ ಹರೇ ಪಿತಾ ಭರ್ತಾ ಚ ಮೇ ಗೃಹಂ ॥ ೯ ॥

ಆಗಚ್ಛೇತ್ತ್ವರ್ಚಯಿಷ್ಯಾಮಿ ಭವಂತಮಿತಿ ಯಾಚಯೇ ।
ತಥಾಸ್ತು ಬ್ರಾಹ್ಮಣೈರುಕ್ತಾ ತತಃ ಸಾ ಸ್ವಾಶ್ರಮಂ ಯಯೌ ॥ ೧೦ ॥

ಮಾತ್ರಾ ನಿರ್ಭರ್ತ್ಸಿತೇಯಂ ತಂ ಕಾಲಂ ಕುತ್ರ ಸ್ಥಿತಾ ಶುಭೇ ॥
ವೃತ್ತಾಂತಂ ಕಥಯಾಮಾಸ ಸತ್ಯನಾರಾಯಣಾರ್ಚನೇ ॥ ೧೧ ॥

ಕಲೌ ಪ್ರತ್ಯಕ್ಷಫಲದಃ ಸರ್ವದಾ ಕ್ರಿಯತೇ ನರೈಃ ।
ಕರ್ತುಮಿಚ್ಛಾಮ್ಯಹಂ ಮಾತರನುಜ್ಞಾತುಂ ತ್ವಮರ್ಹಸಿ ॥ ೧೨ ॥

---

೮. ಆ ವರ್ತಕನ ಮಗಳಾದ ಕಲಾವತಿಯು ಒಂದುದಿನ ಹೊಟ್ಟೆಗೆ ಅನ್ನವೂ ಹೊದೆಯುವುದಕ್ಕೆ ಬಟ್ಟೆಯೂ ಇಲ್ಲದೆ, ಬೀದಿಯಲ್ಲಿ ಹೋಗುತ್ತಿರುವಾಗ ಒಬ್ಬ ಬ್ರಾಹ್ಮಣನ ಮನೆಯಲ್ಲಿ ಸತ್ಯನಾರಾಯಣ ಪೂಜೆ ನಡೆಯುತ್ತಿದ್ದುದನ್ನು ಕಂಡು ಅಲ್ಲಿಗೆ ಹೋದಳು.

೯-೧೦ ಆ ಬ್ರಾಹ್ಮಣನು ಸತ್ಯನಾರಾಯಣನನ್ನು ಪ್ರಾರ್ಥಿಸುತ್ತಿರುವುದನ್ನು ನೋಡಿ, ಈ ಕಲಾವತಿಯು ತಾನೂ ಸತ್ಯನಾರಾಯಣನನ್ನು ಪ್ರಾರ್ಥಿಸುವಳಾಗಿ "ಓ ಸತ್ಯನಾರಾಯಣ ಸ್ವಾಮಿಯೇ ! ನನ್ನ ತಂದೆಯೂ ನನ್ನ ಗಂಡನೂ ಸುರಕ್ಷಿತವಾಗಿ ಮನೆಗೆ ಬಂದು ಸೇರಿದರೆ ನಾನೂ ನಿನ್ನನ್ನು ಪೂಜಿಸುತ್ತೇನೆ ಎಂಬದಾಗಿ ಹರಕೆಮಾಡಿ ಬೇಡಿಕೊಳ್ಳುತ್ತೇನೆ" ಎಂದಳು. ಅಲ್ಲಿದ್ದ ಬ್ರಾಹ್ಮಣರು "ಹಾಗೆಯೇ ಆಗಬಹುದು" ಎಂದು ಹೇಳಿದರು. ಅನಂತರ ಅವಳು ತನ್ನ ನಿವಾಸಕ್ಕೆ ಹೋದಳು.

೧೧-೧೨. ಈರೀತಿ ಹೊತ್ತುಮೀರಿ ಮನೆಗೆ ಬಂದ ಮಗಳನ್ನು ಕಂಡು ತಾಯಿಯು "ಇಷ್ಟುಹೊತ್ತು ಎಲ್ಲಿ ಹೋಗಿದ್ದೆ? ಯಾರ ಮನೆಯಲ್ಲಿ ಕೂತಿದ್ದೆ" ಎಂದು ಮುಂತಾಗಿ ಆಕ್ಷೇಪಿಸಿ, ಕಠಿಣವಾಗಿ ಮಾತಾಡಿದಳು, ಆಗ ಮಗಳಾದ ಕಲಾವತಿಯು ತಾನು ನೋಡಿದ ಸತ್ಯನಾರಾಯಣ ವ್ರತದ ವಿಚಾರವನ್ನು ಹೇಳಿದಳು. ಸತ್ಯನಾರಾಯಣ ಸ್ವಾಮಿಯು ಕಲಿಯುಗದಲ್ಲಿ ಪ್ರತ್ಯಕ್ಷವಾಗಿ ಫಲಕೊಡುವನು. ಜನರು ಆ ವ್ರತವನ್ನು ಯಾವಾಗಬೇಕಾದರೂ ಮಾಡಬಹುದು. ಅಮ್ಮಾ ! ನಾನೂ ಆ ವ್ರತ

**ದೇಶಮಾಯಾತು ಜನಕಃ ಸ್ವಾಮೀ ಚ ಮಮ ಕಾಮನಾ ।**
**ರಾತ್ರೌ ನಿಶ್ಚಿತ್ಯ ಮನಸಾ ಪ್ರಭಾತೇ ಸಾ ಕಲಾವತೀ ॥ ೧೩ ॥**

**ಶೀಲಪಾಲಸ್ಯ ಗುಪ್ತಸ್ಯ ಗೇಹೇ ಪ್ರಾಪ್ತಾ ಧನಾರ್ಥಿನೀ ।**
**ಬಂಧೋ ಕಿಂಚಿದ್ಧನಂ ದೇಹಿ ಯೇನ ಸತ್ಯಾರ್ಚನಂ ಭವೇತ್ ॥ ೧೪ ॥**

**ಇತಿ ಶ್ರುತ್ವಾ ಶೀಲಪಾಲಃ ಪಂಚನಿಷ್ಕಂ ಧನಂ ದದೌ ।**
**ತ್ವತ್ಪಿತುಶ್ಚ ಋಣಂ ಶೇಷಂ ಮಯೀತ್ಯೇವ ಕಲಾವತಿ ॥ ೧೫ ॥**

**ಇತ್ಯುಕ್ತ್ವಾ ಸೋಽನೃಣೋ ಭೂತ್ವಾ ಗಯಾಶ್ರಾದ್ಧಾಯ ಸಂಯಯೌ ।**
**ಸುತಾಪಿ ತೇನ ದ್ರವ್ಯೇಣ ಕೃತಂ ಸತ್ಯಾರ್ಚನಂ ಶುಭಂ ॥ ೧೬ ॥**

**ಲೀಲಾವತೀ ಸಹ ತಯಾ ಭಕ್ತ್ಯಾ ಕುರ್ಯಾತ್ಪ್ರಪೂಜನಂ ।**
**ಪೂಜನೇನ ವಿಶೇಷೇಣ ತುಷ್ಟೋ ನಾರಾಯಣೋಽಭವತ್ ॥ ೧೭ ॥**

---

ವನ್ನು ಮಾಡಬೇಕೆಂದು ಆಶೆಯಾಗಿದೆ; ನೀನು ಅನುಮತಿಕೊಡಬೇಕು. ನನ್ನ ತಂದೆಯೂ, ಮತ್ತು ನನ್ನಪತಿಯೂ ಸುಖವಾಗಿ ಊರಿಗೆ ಬರಬೇಕು ಎಂಬ ಉದ್ದೇಶಕ್ಕಾಗಿ ಈ ವ್ರತ ಮಾಡುವೆನು" ಎಂದಳು.

೧೪. ಈರೀತಿ ರಾತ್ರಿ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಮಲಗಿಕೊಂಡಳು. ಬೆಳಗ್ಗೆ ಎದ್ದು, ಎಲ್ಲಾದರೂ ದುಡ್ಡನ್ನು ಕೇಳಬೇಕೆಂದು ಶೀಲಪಾಲನೆಂಬ ವೈಶ್ಯನ ಮನೆಗೆ ಹೋದಳು. ಅಲ್ಲಿ ಹೋಗಿ "ಎಲೈ ಬಂಧುವೇ ! ಸ್ವಲ್ಪ ಹಣವನ್ನು ಕೊಡು, ಸತ್ಯನಾರಾಯಣ ಪೂಜೆ ಮಾಡಬೇಕಾಗಿದೆ" ಎಂದಳು.

೧೫–೧೬. ಶೀಲಪಾಲನು ಅದನ್ನು ಕೇಳಿ, "ಅಮ್ಮಾ ನಿನ್ನ ತಂದೆಗೆ ನಾನು ಸಾಲ ತೀರಿಸತಕ್ಕದ್ದಿತ್ತು, ತೆಗೆದುಕೋ" ಎಂದು ಹೇಳಿ ಐದು ಚಿನ್ನದ ಮೊಹರು ಗಳನ್ನು ಕೊಟ್ಟು ಅವನು ಋಣವಿಮುಕ್ತನಾಗಿ ಗಯಾಕ್ಷೇತ್ರ ಯಾತ್ರೆಗೆ ಹೋದನು.

೧೭. ವೈಶ್ಯಪುತ್ರಿಯಾದ ಕಲಾವತಿಯು ಆತನು ಕೊಟ್ಟ ಹಣದಿಂದ ಮಂಗಳ ಕರವಾದ ಸತ್ಯನಾರಾಯಣ ಪೂಜೆಯನ್ನು ಮಾಡಿದಳು. ಆಕೆಯ ತಾಯಿಯಾದ ಲೀಲಾವತಿಯೂ ಕೂಡ, ಕಲಾವತಿಯ ಜತೆಯಲ್ಲಿಯೇ ಭಕ್ತಿಯುಕ್ತಳಾಗಿ ಪೂಜೆ ಮಾಡಿದಳು. ಅವರು ಮಾಡಿದ ವಿಶೇಷ ಪ್ರಕಾರವಾದ ಪೂಜೆಯಿಂದ ಸತ್ಯನಾರಾಯಣ ಸ್ವಾಮಿಯು ಸಂತುಷ್ಟನಾದನು.

ನರ್ಮದಾತೀರನಗರೇ ನೃಪಃ ಸುಷ್ವಾಪ ಮಂದಿರೇ ।
ರಾತ್ರಿಶೇಷೇ ಸುಪರ್ಯಂಕೇ ನಿದ್ರಾಂ ಕುರ್ವತಿ ರಾಜನಿ ॥
ಉವಾಚ ವಿಪ್ರರೂಪೇಣ ಬೋಧಯಂಶ್ಲಕ್ಷ್ಣಯಾ ಗಿರಾ ॥ ೧೮ ॥

ಉತ್ತಿಷ್ಠೋತ್ತಿಷ್ಠ ರಾಜೇಂದ್ರ ತೌ ಸಾಧೂ ಪರಿಮೋಚಯ ।
ಅಪರಾಧಂ ವಿನಾ ಬದ್ಧೌ ನೋ ಚೇಚ್ಛ್ರೇಂ ನ ಭವೇತ್ತವ ॥ ೧೯ ॥

ಇತ್ಯೇವಂ ಭೂಪತಿಶ್ಚೈವ ವಿಪ್ರರೂಪೇಣ ಬೋಧಿತಃ ।
ತದಾ ಹ್ಯಂತರ್ದಧೇ ವಿಷ್ಣುರ್ವಿನಿದ್ರೋ ನೃಪತಿಸ್ತದಾ ॥ ೨೦ ॥

ವಿಸ್ಮಿತಃ ಸಹಸೋತ್ಥಾಯ ದಧ್ಯೌ ಬ್ರಹ್ಮ ಸನಾತನಂ ।
ಸಭಾಯಾಂ ಮಂತ್ರಿಣೇ ರಾಜಾ ಸ್ವಪ್ನಹೇತುಂ ನ್ಯವೇದಯತ್ ॥ ೨೧ ॥

---

೧೮-೨೦. ಇತ್ತ ನರ್ಮದಾತೀರದ ಪಟ್ಟಣದಲ್ಲಿ ಆಳುತ್ತಿದ್ದ ರಾಜನು, ವೈಶ್ಯನ ಧನ ರತ್ನಾದಿಗಳನ್ನು ಕಿತ್ತುಕೊಂಡು ಅವರನ್ನು ಸೆರೆಯಿಟ್ಟಿದ್ದನಷ್ಟೆ. ಆ ರಾಜನು ತನ್ನ ಶಯನಗೃಹದಲ್ಲಿ ಮಂಚದಮೇಲೆ ಮಲಗಿಕೊಂಡು ನಿದ್ರಿಸುತ್ತಿರಲು, ಸತ್ಯನಾರಾಯಣನು ಬ್ರಾಹ್ಮಣನ ರೂಪದಿಂದ ಬಂದು, ಅವನನ್ನು ಕೂಗಿ ಮೃದುವಾದ ವಾಕ್ಕಿನಿಂದ “ ಎಲೈ ರಾಜೇಂದ್ರನೇ ! ಏಳು ಏಳು, ಆ ಇಬ್ಬರು ಸಾಹುಕಾರರನ್ನೂ ಬಂಧನದಿಂದ ಬಿಡುಗಡೆ ಮಾಡು, ಏನೂ ತಪ್ಪಿಲ್ಲದೆ ಇದ್ದರೂ ಅವರನ್ನು ಬಂಧಿಸಿರುವೆ, ಕೂಡಲೆ ಅವರನ್ನು ಬಿಡುಗಡೆಮಾಡದೆ ಇದ್ದರೆ ನಿನಗೆ ಸುಖವಾಗುವುದಿಲ್ಲ ” ಎಂದು ಹೇಳಿದನು. ಬ್ರಾಹ್ಮಣರೂಪಿನ ಸತ್ಯನಾರಾಯಣನು ಈ ಪ್ರಕಾರ ತಿಳಿಸಿ ಎಚ್ಚರಗೊಳಿಸಿ ಕೂಡಲೆ ತಾನು ಅದೃಶ್ಯನಾದನು.

೨೧ ರಾಜನೂ ನಿದ್ರೆಯಿಂದ ಎಚ್ಚರಗೊಂಡು ಆಶ್ಚರ್ಯದಿಂದ ಕೂಡಿ ಥಟ್ಟನೆ ಎದ್ದು, ಪುರಾತನ ಬ್ರಹ್ಮಸ್ವರೂಪನಾದ ಆ ಸ್ವಾಮಿಯನ್ನು ಧ್ಯಾನಮಾಡಿದನು. ಬೆಳಗ್ಗೆ ರಾಜನು ಸಭೆಗೆ ಬಂದು, ಅಲ್ಲಿ ಮಂತ್ರಿಗೆ ತಾನು ಕಂಡ ಸ್ವಪ್ನದ ವಿಚಾರವನ್ನೆಲ್ಲಾ ತಿಳಿಸಿದನು.

ಮಹಾಮಂತ್ರೀಚ ಭೂಪಾಲಂ ಪ್ರಾಹ ಸತ್ಯೇನ ಭೋ ದ್ವಿಜ ।
ಮಯಾಪಿ ದರ್ಶಿತಂ ಸ್ವಪ್ನಂ ವೃದ್ಧವಿಪ್ರೇಣ ಬೋಧಿತಂ ॥
ಅತಸ್ತೌ ಹಿ ಸಮಾನೀಯ ಸಂಪೃಚ್ಛ ವಿಧಿವನ್ನೃಪ ॥ ೨೨ ॥

ಆನೀಯ ಸಾಧುಂ ಪಪ್ರಚ್ಛ ಸತ್ಯಮಾಲಂಬ್ಯ ಭೂಪತಿಃ ।
ಕುತ್ರತ್ಯೌ ವಾಂ ಕುಲಂ ಕಿಂ ವಾ ವಸತಿಃ ಕಸ್ಯ ವಾ ಪುರೇ ॥ ೨೩ ॥

॥ ಸಾಧುರುವಾಚ ॥

ರಮ್ಯೇ ರತ್ನಪುರೇ ವಾಸೋ ವಣಿಗ್ಜಾತೌ ಜನಿರ್ಮಮ ।
ವಾಣಿಜ್ಯಾರ್ಥಂ ಮಹಾರಾಜ ವಾಣಿಜ್ಯಂ ಜೀವಿಕಾವಯೋಃ ॥ ೨೪ ॥

ಮಣಿಮುಕ್ತಾದಿ ವಿಕ್ರೇತುಂ ಕ್ರೇತುಂ ವಾ ತವ ಪತ್ತನೇ ।
ಪ್ರಾಪ್ತೌ ದೂತೈಶ್ಚ ಬದ್ಧ್ವಾವಾಂ ತ್ವತ್ಸಮೀಪಮುಪಾಗತೌ ॥ ೨೫ ॥

ಪ್ರತಿಕೂಲೇ ವಿಧೌ ಕೋ ವಾ ದಶಾಂ ನಾಪ್ನೋತಿ ವೈ ಪುಮಾನ್ ।
ವಿನಾಪರಾಧಂ ಶ್ರೀಕೃಷ್ಣೇ ಮಣಿಚೌರಮ್ಯವಾದಯನ್ ॥ ೨೬ ॥

---

೨೨. ಆಗ ಮಂತ್ರಿಶ್ರೇಷ್ಠನು ರಾಜನನ್ನು ಕುರಿತು " ಸತ್ಯನಾರಾಯಣನೇ ಮಾಯಾದ್ವಿಜರೂಪಿನಿಂದ ಸ್ವಪ್ನದಲ್ಲಿ ನನಗೂ ತಿಳಿಸಿದ್ದಾನೆ. ಆದ್ದರಿಂದ ಆ ವರ್ತಕರಿಬ್ಬರನ್ನೂ ಕರೆತಂದು ಕ್ರಮಪ್ರಕಾರ ವಿಚಾರಿಸು " ಎಂದನು.

೨೩. ಸತ್ಯನಾರಾಯಣನ ಮಾತಿನ ಆಧಾರದಮೇಲೆ ರಾಜನು ಆಗ ಸಾಹುಕಾರನನ್ನು ಕರೆಯಿಸಿ " ನೀವಿಬ್ಬರೂ ಯಾವ ಊರಿನವರು ? ನಿಮ್ಮ ಕುಲವಾವುದು? ವಾಸವಾಗಿರುವುದು ಎಲ್ಲಿ ? " ಎಂದು ಪ್ರಶ್ನೆ ಮಾಡಿದನು.

೨೪-೨೫. ಅದಕ್ಕೆ ಆ ವರ್ತಕನು " ಎಲೈ ಮಹಾರಾಜ ! ನಮ್ಮಿಬ್ಬರಿಗೂ ವ್ಯಾಪಾರದಿಂದಲೇ ಜೀವನ; ನಮ್ಮಲ್ಲಿರುವ ಮುತ್ತು, ರತ್ನ ಮೊದಲಾದುವನ್ನು ಮಾರುವುದಕ್ಕೂ, ಬೇಕಾದ್ದನ್ನು ಕೊಳ್ಳುವುದಕ್ಕೂ, ನಿನ್ನ ಪಟ್ಟಣಕ್ಕೆ ಬಂದೆವು. ನಿನ್ನ ದೂತರು ನಮ್ಮಿಬ್ಬರನ್ನೂ ಬಂಧಿಸಿ ನಿನ್ನ ಬಳಿಗೆ ಹಿಡಿದು ತಂದಿದ್ದಾರೆ. ವಿಧಿಯು ಪ್ರತಿಕೂಲವಾದರೆ ಪುರುಷನಿಗೆ ಏನೇನು ಗತಿ ಒದಗುವುದೋ ಬಲ್ಲವರಾರು.

೨೬. ಹಿಂದೆ ದ್ವಾಪರಯುಗದಲ್ಲಿ ಶ್ರೀ ಕೃಷ್ಣಪರಮಾತ್ಮನಲ್ಲಿ ಏನೂ ತಪ್ಪಿಲ್ಲದಿದ್ದರೂ ಸ್ಯಮಂತಕರತ್ನವನ್ನು ಕದ್ದಿದಾನೆ ಎಂಬದಾಗಿ ಜನರು ಅಪವಾದ ಹೇರಿದರು.

ಆವಾಂ ನ ಚೌರೌ ರಾಜೇಂದ್ರ ತತ್ತ್ವತಸ್ತ್ವಂ ವಿಚಾರಯ ।
ಶ್ರುತ್ವಾ ತನ್ನಿಶ್ಚಯಂ ಜ್ಞಾತ್ವಾ ತಯೋರ್ಬಂಧನಕಾರಣಂ ॥ ೨೭ ॥

ಛೇದಯಿತ್ವಾ ದೃಢಂ ಪಾಶಂ ಲೋಮಶಾತಿಮಕಾರಯತ್ ।
ಕಾರಯಿತ್ವಾ ಪರಿಷ್ಕಾರಂ ಭೋಜಯಾಮಾಸ ತೌ ನೃಪಃ ॥ ೨೮ ॥

ನಗರೇ ಪೂಜಯಾಮಾಸ ವಸ್ತ್ರಭೂಷಣವಾಹನೈಃ ।
ಅಬ್ರವೀತ್ಪೂಜಿತಃ ಸಾಧುರ್ಭೂಪತಿಂ ವಿನಯಾನ್ವಿತಃ ॥ ೨೯ ॥

ಕಾರಾಗಾರೇ ಬಹುವಿಧಂ ಪ್ರಾಪ್ತಂ ದುಃಖಮತಃಪರಂ ।
ಆಜ್ಞಾಪಯ ಮಹಾರಾಜ ದೇಶಂ ಗಂತುಂ ಕೃಪಾನಿಧೇ ॥ ೩೦ ॥

ಶ್ರುತ್ವಾ ಸಾಧುವಚೋ ರಾಜಾ ಪ್ರಾಹ ಕೋಶಾಧಿಕಾರಿಣಮ್ ।
ಮುದ್ರಾಭಿಸ್ತರಣೀಃ ಸದ್ಯಃ ಪೂರಯಾಶು ಮದಾಜ್ಞಯಾ ॥ ೩೧ ॥

---

೨೭. ಎಲೈ ರಾಜನೇ! ನಾವಿಬ್ಬರೂ ಕಳ್ಳರಲ್ಲ, ನಿಜಾಂಶವನ್ನು ನೀನು ವಿಚಾರಿಸಿ ಕೇಳು'' ಎನ್ನಲು ಅಧಿಕಾರಿಗಳನ್ನು ಬರಮಾಡಿ ಅವರನ್ನು ಬಂಧಿಸಿದ ನಿಜವಾದ ಕಾರಣವನ್ನು ಕೇಳಿ ತಿಳಿದುಕೊಂಡು, ಅವರಿಗೆ ಬಿಗಿದಿದ್ದ ಗಟ್ಟಿಯಾದ ಹಗ್ಗದ ಕಟ್ಟನ್ನು ಕತ್ತರಿಸಿ, ಅವರಿಗೆ ಆಯುಷ್ಕರ್ಮ ಮಾಡಿಸಿದನು. ಅನಂತರ ಅವರನ್ನು ಅವರ ಘನತೆಗೆತಕ್ಕ ವಸ್ತ್ರಾದಿಗಳಿಂದ ಪರಿಷ್ಕಾರವಾಗಿ ಅಲಂಕರಿಸಿ, ಅವರಿಗೆ ಸುಖ ಭೋಜನ ಮಾಡಿಸಿದನು. ಅನಂತರ ಒಡವೆ, ವಸ್ತ್ರ, ವಾಹನಾದಿಗಳನ್ನು ಕೊಟ್ಟು ನಗರದೊಳಗೆಲ್ಲಾ ಗೌರವಪೂರ್ವಕವಾಗಿ ಸತ್ಕರಿಸಿ ಮೆರವಣಿಗೆ ಮಾಡಿಸಿದನು.

೩೦. ಈರೀತಿ ಗೌರವಹೊಂದಿದ ಸಾಹುಕಾರನು ವಿನಯಯುಕ್ತನಾಗಿ ರಾಜನನ್ನು ಕುರಿತು "ಸೆರೆಮನೆಯಲ್ಲಿ ನಾನಾ ಕಷ್ಟಗಳುಂಟಾಗಿತ್ತು. ಈಗ ಸುಖವಾಗಿದ್ದೇವೆ. ದಯಾನಿಧಿಯಾದ ರಾಜನೇ! ಇನ್ನು ನಮ್ಮ ಊರಿಗೆ ಹೋಗುವುದಕ್ಕೆ ಅನುಜ್ಞೆ ಕೊಡಿಸಬೇಕು" ಎಂದು ಹೇಳಿಕೊಂಡನು.

೩೧-೩೨. ಸಾಹುಕಾರನು ಹೇಳಿದ ಮಾತನ್ನು ಕೇಳಿ ರಾಜನು ತನ್ನ ಭಂಡಾರದ ಮುಖ್ಯಾಧಿಕಾರಿಯನ್ನು ಕರೆಯಿಸಿ "ಇವರ ಹಡಗಿನ ತುಂಬ ಸುವರ್ಣನಾಣ್ಯಗಳನ್ನು ಈಕ್ಷಣ ತುಂಬಿ, ಜಾಗ್ರತೆಯಾಗಿ ಇವರನ್ನು ಕಳುಹಿಸು. ಇದು ನನ್ನ ಆಜ್ಞೆ" ಎಂದು ಹೇಳಿದನು. ಅವರು ಹಾಗೆಯೇ ಮಾಡಿದರು ಆ ವೈಶ್ಯನು ಅಳಿಯನನ್ನು

ಜಾಮಾತ್ರಾ ಸಹಿತಃ ಸಾಧುರ್ಗೀತವಾದಿತ್ರಮಂಗಲೈಃ ।
ಸ್ವದೇಶಂ ಚಲಿತೋऽದ್ಯಾಪಿ ನ ಚಕ್ರೇ ಹರಿಸೇವನಂ　　　॥ ೩೨ ॥

ಸತ್ಯನಾರಾಯಣೋ ದೇವಃ ಪ್ರತ್ಯಕ್ಷಫಲದಃ ಕಲೌ ।
ಸ ಏವ ತಾಪಸೋ ಭೂತ್ವಾ ಚಕ್ರೇ ಸಾಧುವಿಡಂಬನಂ　　　॥ ೩೩ ॥

॥ ತಾಪಸ ಉವಾಚ ॥

ಧರ್ಮಃ ಕಿಂ ನೌಷು ತೇ ಸಾಧೋ ಮಾಮನಾದೃತ್ಯ ಯಾಸಿ ಭೋಃ ।
ಪ್ರತ್ಯುತ್ತರಮದಾತ್ಸಾಧುಃ ಕ್ಷಿಪ ನೌಕಾಶ್ಚ ಸತ್ವರಂ　　　॥ ೩೪ ॥

ಭೋಃ ಸ್ವಾಮಿನ್ ಮೇ ಧನಂ ನಾಸ್ತಿ ಲತಾಪತ್ರಾದಿಪೂರಿತಂ ।
ನೌಭಿರ್ಗಚ್ಛಾಮಿ ಸ್ವಸ್ಥಾನಂ ವಿರೋಧೇ ನಾತ್ರ ಕಿಂ ಫಲಂ　　　॥ ೩೫ ॥

---

ಜತೆಯಲ್ಲಿ ಕರೆದುಕೊಂಡು ಮಂಗಳವಾದ್ಯ ಮಂಗಳಗೀತ ಸಮೇತವಾಗಿ ಅಲ್ಲಿಂದ ಸಾಗಕಳುಹಿಸಿಕೊಂಡು ತನ್ನ ಊರಿಗೆ ಪ್ರಯಾಣಮಾಡಿದನು. ಇಷ್ಟಾದರೂ ಆ ವೈಶ್ಯನು ಸತ್ಯನಾರಾಯಣ ಪೂಜೆಯನ್ನು ಮಾಡಲೇ ಇಲ್ಲ.

೩೩. ಸತ್ಯನಾರಾಯಣ ಸ್ವಾಮಿಯು ಕಲಿಯುಗದಲ್ಲಿ ಆ ಕೂಡಲೆ ತಕ್ಕ ಫಲಕೊಡತಕ್ಕವನು. ಆ ಸ್ವಾಮಿಯು ಆ ವೈಶ್ಯನನ್ನು ವಿಡಂಬನ (ಕುಚೋದ್ಯ) ಮಾಡಬೇಕೆಂದು ಉದ್ದೇಶಿಸಿ, ಒಬ್ಬ ತಪಸ್ವಿಯ ರೂಪದಿಂದ ಆ ಸಾಹುಕಾರನ ದೃಷ್ಟಿಗೆ ಗೋಚರನಾದನು.

೩೪. ಋಷಿಯು ಹೇಳುತ್ತಾನೆ—“ ಅಯ್ಯಾ ಸಾಹುಕಾರರೇ! ಧನಾಢ್ಯರಾದ ನೀವು, ಹೀಗೆ ಹಡಗುಗಳಲ್ಲಿ ಬೇಕಾದ್ದನ್ನೆಲ್ಲಾ ತುಂಬಿಕೊಂಡು ಇದ್ದರೂ ತಪಸ್ವಿಯಾದ ನನ್ನನ್ನು ಹೀಗೆ ನಿರ್ಲಕ್ಷ್ಯಮಾಡಿ ಹೋಗುವುದು ಧರ್ಮವೇ ? ” ಎಂದು ಆಕ್ಷೇಪಿಸಿದನು.

೩೫. ಆಗ ಸಾಹುಕಾರನು ಹಡಗನ್ನು ಬೇಗ ನಡೆಯಿಸಿ ಎಂದು ನಾವಿಕರಿಗೆ ಸೂಚಿಸಿ, ಆ ತಪಸ್ವಿಯನ್ನು ಕುರಿತು “ ಎಲೈ ಮಹಾನುಭಾವರೇ ! ಈ ಹಡಗಿನಲ್ಲಿ ದ್ರವ್ಯವೇನೂ ಇಲ್ಲ, ಕೇವಲ ಬಳ್ಳಿಗಳೂ, ಮೂಲಿಕೆಗಳೂ, ಎಲೆಗಳೂ ಇವನ್ನು ತುಂಬಿಕೊಂಡು ಈ ಹಡಗನ್ನು ನಮ್ಮ ಊರಿಗೆ ತೆಗೆದುಕೊಂಡು ಹೋಗುತ್ತಿದ್ದೇನೆ ಅಷ್ಟೆ ! ತಮ್ಮನ್ನು ಅಲಕ್ಷ್ಯಮಾಡಿ ವಿರೋಧಮಾಡಿಕೊಳ್ಳುವುದಾದರೂ ಏಕೆ ? ಅಂಥಾದ್ದೇನೂ ಇಲ್ಲ ” ಎಂದನು.

ಇತ್ಯುಕ್ತೆಸ್ತಾಪಸಃ ಪ್ರಾಹ ತಥಾಸ್ತ್ವಿತಿ ವಚಃ ಕ್ಷಣಾತ್ ।
ಧನಮಂತರ್ದಧೇ ಸಾಧೋರ್ಲತಾಪತ್ರಾವಶೇಷಿತಂ ॥ ೩೬ ॥

ಧನಂ ನೌಕಾಸು ನಾಸ್ತೀತಿ ಸಾಧುಶ್ಚಿಂತಾತುರೋಽಭವತ್ ।
ಕಿಮಿದಂ ಕಸ್ಯ ವಾ ಹೇತೋರ್ಧನಂ ಕುತ್ರ ಗತಂ ಮಮ ॥ ೩೭ ॥

ವಜ್ರಪಾತಾಹತ ಇವ ಭೃಶಂ ದುಃಖಿತಮಾನಸಃ ।
ಕ್ವ ಯಾಸ್ಯಾಮಿ ಕ್ವ ತಿಷ್ಠಾಮಿ ಕಿಂ ಕರೋಮಿ ಧನಂ ಕುತಃ ॥ ೩೮ ॥

ಇತಿ ಮೂರ್ಛಾಗತಃ ಸಾಧುರ್ವಿಲಲಾಪ ಪುನಃಪುನಃ ।
ಜಾಮಾತ್ರಾ ಬೋಧಿತಃ ಪಶ್ಚಾತ್ತಾಪಸಂ ತಂ ಜಗಾಮ ಹ ॥ ೩೯ ॥

ಗಲೇ ವಸನಮಾದಾಯ ಪ್ರಣನಾಮ ಸ ತಾಪಸಂ ।
ಕೋ ಭವಾನಿತಿ ಪಪ್ರಚ್ಛ ದೇವೋ ಗಂಧರ್ವ ಈಶ್ವರಃ ॥ ೪೦ ॥

---

೩೬-೩೯. ವೈಶ್ಯನು ಈರೀತಿ ಉತ್ತರ ಹೇಳುತ್ತಲೆ ಆ ತಪಸ್ವಿರೂಪಿಯಾದ ಸತ್ಯನಾರಾಯಣನು "ನಿನ್ನ ಹಡಗಿನಲ್ಲಿ ಈಗ ನೀನು ಹೇಳಿದ ಹಾಗೆಯೇ ಇರಲಿ" ಎಂದು ಬಿಟ್ಟನು. ಒಂದುಗಳಿಗೆಯೊಳಗಾಗಿ ಸಾಹುಕಾರನ ದ್ರವ್ಯವೆಲ್ಲಾ ಅದೃಶ್ಯವಾಗಿ ಕೇವಲ ಲತೆಗಳು, ಪತ್ರ (ಎಲೆ) ಗಳೇ ಆಗಿ ಪರಿಣಮಿಸಿದುವು. ಈ ಪ್ರಕಾರವಾಗಿ ಹಡಗಿನಲ್ಲಿ ಧನರಾಶಿಯು ಇಲ್ಲದಂತಾಗಲು, ಆಗ ಸಾಹುಕಾರನು ತುಂಬ ಚಿಂತಾ ಕ್ರಾಂತನಾಗಿ, ಇದೇನು ಆಶ್ಚರ್ಯ? ನನ್ನ ಧನವೆಲ್ಲಾ ಎಲ್ಲಿ ಹೋಯಿತು ಏನು ಕಾರಣ ಹೀಗಾಯಿತು?" ಎಂದುಕೊಂಡು ಸಿಡಿಲು ಬಡಿದವನಂತೆ ತುಂಬಾ ವ್ಯಥೆ ಪಡುತ್ತಾ "ಎಲ್ಲಿ ಹೋಗಲಿ? ಈಗ ಏನು ಮಾಡಲಿ? ಹೇಗೆ ಸಹಿಸಲಿ? ನನ್ನ ಹಣ ಹೋಯಿತಲ್ಲಾ!" ಎಂದು ಮತ್ತೆ ಮತ್ತೆ ವಿಲಪಿಸುತ್ತಾ ಮೂರ್ಛೆ ಹೋದನು. ಅವನ ಅಳಿಯನ ಉಪಚಾರದಿಂದ ಎಚ್ಚರವಾದಮೇಲೆ ಆ ತಪಸ್ವಿಯನ್ನು ನೋಡಲು ಹೋದನು.

೪೦-೪೧. ಬಳಿಕ ತಪಸ್ವಿಯಿದ್ದ ಬಳಿಗೆ ಬಂದು ಕುತ್ತಿಗೆಯಲ್ಲಿದ್ದ ಉತ್ತರೀಯವನ್ನು ತೆಗೆದು ಸೊಂಟಕ್ಕೆ ಸುತ್ತಿಕೊಂಡು ಆ ತಪಸ್ವಿಗೆ ನಮಸ್ಕಾರಮಾಡಿ ಭಯ ಭಕ್ತಿಯಿಂದ ಆ ತಪಸ್ವಿಯನ್ನು 'ಈ ವೈಶ್ಯ ಸಾಹುಕಾರನು "ಓ ಪೂಜ್ಯರೇ! ನೀವು ದೇವತೆಯೋ, ಗಂಧರ್ವನೋ, ಅಥವಾ ದೇವದೇವನಾದ ಈಶ್ವರನೋ, ನೀವು

ದೇವದೇವೋऽಥ ವಾ ಕೋऽಪಿ ನ ಜಾನೇ ತವ ವಿಕ್ರಮಂ ।
ಆಜ್ಞಾಪಯ ಮಹಾಭಾಗ ತದ್ವಿಡಂಬನಕಾರಣಂ ॥ ೪೧ ॥

॥ ತಾಪಸ ಉವಾಚ ॥

ಆತ್ಮಾ ಚೈವಾತ್ಮನಃ ಶತ್ರುಸ್ತಥಾತ್ರ ಚ ಪ್ರಿಯೋऽಪ್ರಿಯಃ ।
ತ್ಯಜ ಮೌಢ್ಯಮತಿಂ ಸಾಧೋ ಪ್ರವಾದಂ ಮಾ ವೃಥಾ ಕೃಥಾಃ ॥ ೪೨ ॥

ಇತಿ ವಿಜ್ಞಾಪಿತಃ ಸಾಧುರ್ನ ಬುಬೋಧ ಮಹಾಧನಃ ।
ಪುನಃ ಸ ತಾಪಸಃ ಪ್ರಾಹ ಕೃಪಯಾ ಪೂರ್ವಕರ್ಮತಃ ॥ ೪೩ ॥

ಚಂದ್ರಚೂಡೋ ಯದಾನರ್ಚ ಸತ್ಯನಾರಾಯಣಂ ನೃಪಃ ।
ಅನಪತ್ಯೇನ ಸುಚಿರಂ ಪುತ್ರಕನ್ಯಾರ್ಥಿನಾ ತ್ವಯಾ ॥ ೪೪ ॥

ಪ್ರಾರ್ಥಿತಂ ನ ಸ್ಮೃತಂ ಹ್ಯೇವ ಇದಾನೀಂ ತಪ್ಯಸೇ ವೃಥಾ ।
ಸತ್ಯನಾರಾಯಣೋ ದೇವೋ ವಿಶ್ವವ್ಯಾಪೀ ಫಲಪ್ರದಃ ॥ ೪೫ ॥

---

ಯಾರು ? ನಿಮ್ಮ ಸಾಮರ್ಥ್ಯವನ್ನು ನಾನು ತಿಳಿದಿರಲಿಲ್ಲ. ಈ ಪ್ರಕಾರ ನನ್ನನ್ನು ವಿಡಂಬನಮಾಡುವುದಕ್ಕೆ ಕಾರಣವೇನು ಎಂಬುದನ್ನು ದಯೆಯಿಟ್ಟು ಅಪ್ಪಣೆ ಕೊಡಿಸಬೇಕು" ಎಂಬದಾಗಿ ಕೇಳಿಕೊಂಡನು.

೪೨. ಅದಕ್ಕೆ ಆ ತಪಸ್ವಿಯು "ಅಯ್ಯಾ ಸಾಹುಕಾರ! ಮನುಷ್ಯನು ಕೆಲವುವೇಳೆ ತಾನೇ ತನಗೆ ಶತ್ರುವಾಗುವನು. ಇಂಥ ಸನ್ನಿವೇಶದಲ್ಲಿ ಪ್ರಿಯನಾಗಿದ್ದರೂ ದ್ವೇಷಿಯಾಗಿ ಪರಿಣಮಿಸುವನು. ಆದುದರಿಂದ ಅಯ್ಯಾ ಸಾಧುವೇ! ಮೂಢತನವನ್ನು ಬಿಟ್ಟುಬಿಡು, ವ್ಯರ್ಥವಾಗಿ ನನ್ನೊಡನೆ ಚರ್ಚೆಮಾಡಬೇಡ" ಎಂದನು.

೪೩-೪೭. ಈರೀತಿ ಸೂಕ್ಷ್ಮರೀತಿಯಿಂದ ಹೇಳಿ ಎಚ್ಚರಿಸಿದರೂ. ಮಹಾಧನಿಕನಾದ ಆ ಸಾಹುಕಾರನು ತನ್ನ ಅವಿಜ್ಞತೆಯನ್ನು ತಿಳಿದುಕೊಂಡು ಜಾಗರೂಕನಾಗಲಿಲ್ಲ. ಆಗ ಆ ತಪಸ್ವಿರೂಪದ ಪರಮಾತ್ಮನಿಗೆ ದಯೆಹುಟ್ಟಿ, ವೈಶ್ಯನನ್ನು ಕುರಿತು "ಅಯ್ಯಾ ಸಾಹುಕಾರ! ಚಂದ್ರಚೂಡ ಮಹಾರಾಜನು ಪೂರ್ವಪುಣ್ಯವಶದಿಂದ ಸತ್ಯನಾರಾಯಣ ಪೂಜೆಯನ್ನು ಮಾಡುತ್ತಿದ್ದನು. ಆ ವೇಳೆಯಲ್ಲಿ ನೀನು ಅದನ್ನು ನೋಡುತ್ತಿದ್ದೆ.

ತಮನಾದೃತ್ಯ ದುರ್ಬುದ್ಧೇ ಕುತಃ ಸಮ್ಯಗ್ಭವೇತ್ತವ ।
ಪುರಾ ಲಬ್ಧವರಂ ಸ್ಮೃತ್ವಾ ಸಸ್ಮಾರ ಜಗದೀಶ್ವರಂ ॥ ೪೬ ॥

ಸತ್ಯನಾರಾಯಣಂ ದೇವಂ ತಾಪಸಂ ತಂ ದದರ್ಶ ಹ ।
ಪ್ರಣಮ್ಯ ಭುವಿ ಕಾಯೇನ ಪರಿಕ್ರಮ್ಯ ಪುನಃ ಪುನಃ ।
ತುಷ್ಟಾವ ತಾಪಸಂ ತತ್ರ ಸಾಧುರ್ಗದ್ಗದಯಾ ಗಿರಾ ॥ ೪೭ ॥

॥ ಸಾಧುರುವಾಚ ॥

ಸತ್ಯರೂಪಂ ಸತ್ಯಸಂಧಂ ಸತ್ಯನಾರಾಯಣಂ ಹರಿಂ ।
ಯತ್ಸತ್ಯತ್ವೇನ ಜಗತಸ್ತಂ ಸತ್ಯಂ ತ್ವಾಂ ನಮಾಮ್ಯಹಂ ॥ ೪೮ ॥

---

ಬಹುದಿನಗಳಿಂದ ಮಕ್ಕಳಿಲ್ಲದ ನೀನು ಆಗ ಭಕ್ತಿನಮ್ರನಾಗಿ " ಈ ದೇವರ ಕೃಪೆಯಿಂದ ನನಗೂ ಮಗನೋ ಅಥವಾ ಮಗಳೋ ಜನಿಸಲಿ, ನಾನೂ ಸತ್ಯನಾರಾಯಣ ಪೂಜೆ ಮಾಡುತ್ತೇನೆ " ಎಂಬದಾಗಿ ನೀನು ಪ್ರಾರ್ಥಿಸಿಕೊಂಡುದನ್ನು ಮರೆತೇಬಿಟ್ಟೆ. ಈಗ ಸುಮ್ಮನೆ ವ್ಯಥೆಪಡುತ್ತೀಯೆ ! ಅಯ್ಯೋ ದುರ್ಬುದ್ಧಿಯುಳ್ಳ ಮನುಷ್ಯಾ ! ಸತ್ಯನಾರಾಯಣ ಸ್ವಾಮಿಯು ಜಗತ್ತನ್ನೆಲ್ಲಾ ವ್ಯಾಪಿಸಿರತಕ್ಕವನು. ಮತ್ತು ಇಷ್ಟಾರ್ಥವನ್ನು ಕೊಡತಕ್ಕವನು, ಅವನನ್ನು ಅಲಕ್ಷ್ಯಮಾಡಿದ ನಿನಗೆ ಒಳ್ಳೆಯದಾಗುತ್ತದೆಯೇ ? ಹೇಗೆತಾನೆ ಆದೀತು " ಎಂದು ಹೇಳಿದನು. ವೈಶ್ಯನು ಆ ಮಾತನ್ನು ಕೇಳಿ, ಹಿಂದೆ ತಾನು ಪ್ರಾರ್ಥಿಸಿಕೊಂಡುದನ್ನೂ ಭಕ್ತಮಂಡಲಿಯು ತನಗೆ ಆಶೀರ್ವದಿಸಿ ಅನುಗ್ರಹಿಸಿದುದನ್ನೂ ಜ್ಞಾಪಿಸಿಕೊಂಡನು. ಕೂಡಲೆ ಎದುರಿಗೆ ಇದ್ದ ತಪಸ್ವಿಯೇ ಜಗತ್ಪತಿಯಾದ ಸತ್ಯನಾರಾಯಣ ಸ್ವರೂಪನಾಗಿ ಪ್ರತ್ಯಕ್ಷವಾಗಿ ನಿಂತಿರುವುದನ್ನು ಕಂಡನು. ಆ ಕೂಡಲೆ ವೈಶ್ಯನು ದೀರ್ಘದಂಡನಮಸ್ಕಾರಮಾಡಿ ಮತ್ತೆ ಮತ್ತೆ ಪ್ರದಕ್ಷಿಣೆ ಮಾಡುತ್ತಾ ತಪಸ್ವಿಯನ್ನು ಸಂತುಷ್ಟಿಪಡಿಸಿ, ಗದ್ಗದ ಧ್ವನಿಯಿಂದ ಕೂಡಿ ಈ ಪ್ರಕಾರ ಸ್ತುತಿಸಿದನು.

೪೮. " ಸತ್ಯಸ್ವರೂಪನೂ ಸತ್ಯವಾಗಿ ನಡೆಯುವವನೂ, ಸತ್ಯತ್ವದಿಂದ ಜಗತ್ತನ್ನು ರಕ್ಷಿಸುವವನೂ, ಸತ್ಯವಾಗಿ ಹರಿಸ್ವರೂಪನೂ ಆದ ಸತ್ಯನಾರಾಯಣ ಸ್ವಾಮಿಯೇ ! ನಿನ್ನನ್ನು ನಮಸ್ಕರಿಸುವೆನು ".

ತ್ವನ್ಮಾಯಯಾಮೋಹಿತಾತ್ಮಾನೋ ನ ಪಶ್ಯಂತ್ಯಾತ್ಮನಃ ಶುಭಂ ।
ದುಃಖಾಂಭೋಧೌ ಸದಾ ಮಗ್ನಾ ದುಃಖೇ ಚ ಸುಖಮಾನಿನಃ ॥ ೪೯ ॥

ಮೂಢೋಽಹಂ ಧನಗರ್ವೇಣ ಮದಾಂಧೀಕೃತಲೋಚನಃ ।
ನ ಜಾನೇ ಸ್ವಾತ್ಮನಃ ಕ್ಷೇಮಂ ಕಥಂ ಪಶ್ಯಾಮಿ ಮೂಢಧೀಃ ॥ ೫೦ ॥

ಕ್ಷಮಸ್ವ ಮಮ ದೌರಾತ್ಮ್ಯಂ ತಪೋಧಾಮ್ನೇ ಹರೇ ನಮಃ ।
ಆಜ್ಞಾಪಯಾತ್ಮದಾಸ್ಯಂ ಮೇ ಯೇನ ತೇ ಚರಣೌ ಸ್ಮರೇ ॥ ೫೧ ॥

ಇತಿ ಸ್ತುತ್ವಾ ಲಕ್ಷಮುದ್ರಾಃ ಸ್ಥಾಪಿತಾಃ ಸ್ವಪುರೋಽಧಸಿ ।
ಗತ್ವಾವಾಸಂ ಪೂಜಯಿಷ್ಯೇ ಸತ್ಯನಾರಾಯಣಂ ಪ್ರಭುಂ ॥ ೫೨ ॥

ತುಷ್ಟೋ ನಾರಾಯಣಃ ಪ್ರಾಹ ವಾಂಛಾ ಪೂರ್ಣಾ ಭವೇತ್ತು ತೇ ।
ಪುತ್ರಪೌತ್ರಸಮಾಯುಕ್ತೋ ಭುಕ್ತ್ವಾ ಭೋಗಾಂಸ್ತ್ವನುತ್ತಮಾನ್ ।
ಅಂತೇ ಸಾನ್ನಿಧ್ಯಮಾಸಾದ್ಯ ಮೋದಸೇ ತ್ವಂ ಮಯಾ ಸಹ ॥ ೫೩ ॥

---

೪೯. "ನಿನ್ನ ಮಾಯೆಯಿಂದ ಆವೃತವಾಗಿರುವ ಮೂಢ ಬುದ್ಧಿಯುಳ್ಳವರು, ಸದಾ ದುಃಖಸಮುದ್ರದಲ್ಲಿ ಮುಳುಗಿದವರಾಗಿ ದುಃಖವನ್ನೇ ಸುಖವೆಂದು ಭ್ರಾಂತಿ ಪಟ್ಟು ಎಂದಿಗೂ ಶುಭವನ್ನೇ ಕಾಣದೆಹೋಗುವರು"

೫೦. "ದ್ರವ್ಯಮದದಿಂದ ಕಣ್ಣಿದ್ದರೂ ಕುರುಡನಂತಾಗಿರುವ ಮೂಢನು ನಾನು. ನನಗೆ ಕ್ಷೇಮವಾಗುವ ಮಾರ್ಗವನ್ನೇ ತಿಳಿಯಲಾರದ ಮೂಢ ಬುದ್ಧಿಯುಳ್ಳ ನಾನು ನಿನ್ನ ಮಹಿಮೆಯನ್ನು ಹೇಗೆ ತಿಳಿಯಲಿ ?".

೫೧-೫೨. "ತಪಸ್ಸಿಗೆ ಪ್ರತ್ಯಕ್ಷನಾಗುವ ಹರಿಸ್ವರೂಪನೇ! ನನ್ನ ಈ ದುಷ್ಟತನವನ್ನು ಕ್ಷಮಿಸು. ನಿನಗೆ ನಮಸ್ಕಾರ, ನಿನ್ನ ಪಾದವನ್ನು ಸರ್ವದಾ ಸ್ಮರಿಸುವಂತೆಯೂ ನಿನ್ನ ಸೇವಾಸಕ್ತನಾಗುವಂತೆಯೂ ನನ್ನನ್ನು ಅನುಗ್ರಹಿಸು" ಎಂದು ಸ್ತೋತ್ರ ಮಾಡಲಾಗಿ ಪರಮಾತ್ಮನ ಕೃಪೆಯಿಂದ ಅವನ ಧನವು ಅಲ್ಲೇ ಇತ್ತು. ಕೂಡಲೆ ಒಂದು ಲಕ್ಷ ಸ್ವರ್ಣಮುದ್ರಿಕೆಗಳನ್ನು ಮುಡುಪಾಗಿರಿಸಿ "ಊರು ತಲಪಿದನಂತರ ಪುರೋಹಿತರ ನೇತೃತ್ವದಲ್ಲಿ ಸತ್ಯನಾರಾಯಣ ವ್ರತವನ್ನು ಮಾಡುತ್ತೇನೆ" ಎಂದು ಹೇಳಿದನು.

೫೩. ಇದರಿಂದ ಸಂತೋಷ ಹೊಂದಿದ ಸತ್ಯನಾರಾಯಣ ಸ್ವಾಮಿಯು ಅವನನ್ನು ಕುರಿತು "ನೀನು ಹಾಗೆ ಮಾಡಿದರೆ ನಿನ್ನ ಇಷ್ಟವು ಸಫಲವಾದೀತು. ಮಕ್ಕಳು, ಮಮ್ಮಕ್ಕಳು ಸಮೇತವಾಗಿ ನೀನು ಶ್ರೇಷ್ಠವಾದ ಸುಖಗಳನ್ನು ಅನುಭ

ಇತ್ಯುಕ್ತ್ವಾಂತರ್ದಧೇ ವಿಷ್ಣುಃ ಸಾಧುಶ್ಚ ಸ್ವಾಶ್ರಮಂ ಯಯೌ ।
ಸಪ್ತಾಹೇನ ಗೃಹಂ ಪ್ರಾಪ್ತಃ ಸತ್ಯದೇವೇನ ರಕ್ಷಿತಃ ॥ ೫೪ ॥

ಆಗತ್ಯ ನಗರಾಭ್ಯಾಶೇ ಪ್ರಾಹಿಣೋದ್ದೂತಮಾಶ್ರಮಂ ।
ಗೃಹಮಾಗತ್ಯ ದೂತೋಽಪಿ ಪ್ರಾಹ ಲೀಲಾವತೀಂ ಪ್ರತಿ ॥ ೫೫ ॥

ಜಾಮಾತ್ರಾ ಸಹಿತಃ ಸಾಧುಃ ಕೃತಕೃತ್ಯಃ ಸಮಾಗತಃ ।
ಸತ್ಯನಾರಾಯಣಾರ್ಚಾಯಾಂ ಸ್ಥಿತಾ ಸಾಧ್ವೀ ಸಕನ್ಯಕಾ ॥ ೫೬ ॥

ಪೂಜಾಭಾರಂ ಸುತಾಯೈ ಸಾ ದತ್ವಾ ನೌಕಾಂತಿಕಂ ಯಯೌ ।
ಸಖೀಗಣೈಃ ಪರಿವೃತಾ ಕೃತಕೌತುಕಮಂಗಲಾ ॥ ೫೭ ॥

---

ವಿಸಿ, ದೇಹಾವಸಾನದಲ್ಲಿ ನನ್ನ ಸನ್ನಿಧಿಯನ್ನು ಸೇರಿ, ನನ್ನೊಡನೆ ಇದ್ದು ಸಂತೋಷ ಹೊಂದುವೆ " ಎಂಬದಾಗಿ ಹೇಳಿ ಅಂತರ್ಧಾನನಾದನು.

೫೪. ಸಾಹುಕಾರನು ಹಡಗುಗಳೊಡನೆ ತನ್ನ ಊರಿಗೆ ಹೊರಟು, ಏಳು ದಿನಗಳಲ್ಲಿ ಸತ್ಯನಾರಾಯಣ ಕೃಪೆಯಿಂದ ಸುರಕ್ಷಿತವಾಗಿ ತನ್ನ ಊರಬಳಿಗೆ ಬಂದು ಒಬ್ಬ ದೂತನ ಮೂಲಕ ತನ್ನ ಮನೆಗೆ ವರ್ತಮಾನ ಹೇಳಿ ಕಳುಹಿಸಿದನು.

೫೫. ಆ ದೂತನು ಯಜಮಾನನ ಮನೆಗೆ ಬಂದು, ಅವನ ಪತ್ನಿಯಾದ ಲೀಲಾವತಿಯನ್ನು ಕಂಡು " ನಿಮ್ಮ ಪತಿಯು ವಾಣಿಜ್ಯಕಾರ್ಯವನ್ನು ಯಶಸ್ವಿಯಾಗಿ ನೆರವೇರಿಸಿಕೊಂಡು ತಮ್ಮ ಅಳಿಯನೊಡನೆ ಬಂದು ಹಡಗಿನಲ್ಲಿ ಇದ್ದಾರೆ " ಎಂದು ಹೇಳಿದನು.

೫೬-೫೮. ದೂತನು ಬಂದು ಈ ವೃತ್ತಾಂತವನ್ನು ಹೇಳಿದ ಸಮಯದಲ್ಲಿ ಸಾಧ್ವಿಯಾದ ಆ ವೈಶ್ಯಪತ್ನಿಯು, ತನ್ನ ಪುತ್ರಿಯೊಡನೆ ಸತ್ಯನಾರಾಯಣ ವ್ರತ ಮಾಡುತ್ತಾ ಇದ್ದಳು. ಆಕೆಯು ಈ ವರ್ತಮಾನ ತಿಳಿದೊಡನೆ ಪೂಜಾಕಾರ್ಯವನ್ನು ಮುಂದುವರಿಸುವ ಭಾರವನ್ನು ತನ್ನ ಮಗಳಿಗೆ ವಹಿಸಿ, ತಾನು ದಡದಡನೆ ಹಡಗಿನ ಸಮೀಪಕ್ಕೆ ಹೋಗುವುದಕ್ಕಾಗಿ ಮಂಗಳ ದ್ರವ್ಯಗಳನ್ನು ತೆಗೆಸಿಕೊಂಡು ಸ್ನೇಹಿತೆಯರನ್ನು ಗುಂಪುಕಟ್ಟಿಕೊಂಡು ಸಡಗರದಿಂದ ಹೊರಟಳು. ಈ ಕಲಾವತಿಯು ಪೂಜೆಯನ್ನು

ಕಲಾವತೀ ತ್ವವಜ್ಞಾಯ ಪ್ರಸಾದಂ ಸತ್ವರಾ ಯಯೌ ।
ಪಾತುಂ ಪತಿಮುಖಾಂಭೋಜಂ ಚಕೋರೀವ ದಿನಾತ್ಯಯೇ ॥ ೫೮ ॥

ಅವಜ್ಞಾನಾತ್ಪ್ರಸಾದಸ್ಯ ನೌಕಾ ಶಂಖಪತೇರಥ ।
ನಿಮಗ್ನಾ ಜಲಮಧ್ಯೇ ತು ಜಾಮಾತ್ರಾ ಸಹ ತತ್‌ಕ್ಷಣಾತ್ ॥ ೫೯ ॥

ಮಗ್ನಂ ಜಾಮಾತರಂ ಪಶ್ಯನ್ ವಿಲಲಾಪ ಸ ಮೂರ್ಛಿತಃ ।
ಲೀಲಾವತೀ ತು ತದ್ದೃಷ್ಟ್ವಾ ಮೂರ್ಛಿತಾ ವಿಲಲಾಪ ಹ ॥ ೬೦ ॥

ತತಃ ಕಲಾವತೀ ದೃಷ್ಟ್ವಾ ಪಪಾತ ಭುವಿ ಮೂರ್ಛಿತಾ ।
ರಂಭೇವ ವಾತವಿಹತಾ ಕಾಂತಕಾಂತೇತಿ ವಾದಿನೀ ॥ ೬೧ ॥

---

ಮುಗಿಸಿ ಪ್ರಸಾದಸೇವಿಸುವುದನ್ನು ಅಲಕ್ಷಿಸಿ ಹೊರಟಳು. ಹಗಲು ಮುಗಿದೀತೇ ! ಚಂದ್ರನನ್ನು ಎಂದಿಗೆ ಕಂಡೇನು ? ಎಂದು ತವಕಪಡುವ ಚಕೋರಿ ಪಕ್ಷಿಯಂತೆ ಇದ್ದಿತು ಆಕೆಯ ಮನಸ್ಸು.

೫೯. ಆಕೆಯು ಗಂಡನ ಮುಖಕಮಲವನ್ನು ನೋಡುವ ಆತುರದಲ್ಲಿ ಸ್ವಾಮಿಯ ಪ್ರಸಾದ ಸೇವಿಸುವುದನ್ನು ಅಲಕ್ಷ್ಯಮಾಡಿದುದರಿಂದ ಆ ಕೋಟ್ಯಧೀಶ್ವರ ನಾದ ಆ ವೈಶ್ಯನೂ, ಅವನ ಅಳಿಯನೂ ಇದ್ದ ಹಡಗು, ಕ್ಷಣಮಾತ್ರದಲ್ಲಿ ನೀರಿನೊಳಗೆ ಮುಳುಗಿತು.

೬೦. ಅಳಿಯನು ಮುಳುಗುತ್ತಿದ್ದುದನ್ನು ನೋಡಿ ಆ ವರ್ತಕನು ಬಹು ದುಃಖದಿಂದ ಮೂರ್ಛೆ ಹೋದನು. ಆತನ ಪತ್ನಿ ಲೀಲಾವತಿಯೂ ಅಲ್ಲಿಗೆ ಬಂದು ಆ ದೃಶ್ಯವನ್ನು ನೋಡಿ ಗೋಳಾಡುತ್ತಾ ಮೂರ್ಛೆ ಹೊಂದಿದಳು.

೬೧. ಅಷ್ಟುಹೊತ್ತಿಗೆ ವೈಶ್ಯಪುತ್ರಿಯಾದ ಕಲಾವತಿಯೂ ಅಲ್ಲಿಗೆ ಬಂದು ಇದನ್ನೆಲ್ಲಾ ಕಂಡು, ಅಯ್ಯೋ, ಪತಿದೇವಾ ! ಪ್ರಿಯ ಪತಿಯೇ ! ಎಂದು ಗೋಳಾಡುತ್ತಾ ಮೂರ್ಛೆ ಹೊಂದಿ, ಬಿರುಗಾಳಿಯ ಹೊಡೆತದಿಂದ ಬಾಳೆಯಮರವು ಮುರಿದು ಬೀಳುವಂತೆ ದೊಪ್ಪನೆ ನೆಲದಮೇಲೆ ಬಿದ್ದಳು.

ಹಾ ನಾಥ ಪ್ರಿಯ ಧರ್ಮಜ್ಞ ಕರುಣಾಕರ ಕೌಶಲ ।
ತ್ವಯಾ ವಿರಹಿತಾಪತ್ಯಾ ನಿರಾಶಾ ವಿಧಿನಾ ಕೃತಾ ।
ಪತ್ಯುರರ್ಧಂ ಗತಂ ಕಸ್ಮಾದರ್ಧಾಂಗಂ ಜೀವನಂ ಕಥಂ ॥ ೬೨ ॥

॥ ಸೂತ ಉವಾಚ ॥

ಕಲಾವತೀ ಚಾರುಕಲಾಸು ಕೌಶಲಾ
ಪ್ರವಾಲರಕ್ತಾಂಘ್ರಿತಲಾತಿ ಕೋಮಲಾ ।
ಸರೋಜನೇತ್ರಾಂಬುಕಣಾನ್ವಿಮುಂಚತೀ
ಮುಕ್ತಾವಲೀಭಿಸ್ತನಕುಡ್ಮಲಾಂಚಿತಾ ॥ ೬೩ ॥

ಹಾ ಸತ್ಯನಾರಾಯಣ ಸತ್ಯಸಿಂಧೋ
ಮಗ್ನಂ ಹಿ ಮಾಮುದ್ಧರ ತದ್ವಿಯೋಗೇ
ಶ್ರುತ್ವಾರ್ತಶಬ್ದಂ ಭಗವಾನುವಾಚ
ವಚಸ್ತದಾಕಾಶಸಮುದ್ಭವಂ ಚ ॥ ೬೪ ॥

---

೬೨. ಪುನಃ ಚೇತರಿಸಿಕೊಂಡು ಹಾ ! ಪ್ರಿಯಪತಿಯೇ, ಧರ್ಮಜ್ಞನೇ, ದಯಾವಂತನೇ, ಪ್ರಾಜ್ಞನೇ! ನನ್ನ ಭಾಗದ ವಿಧಿಯು ಪತಿಯಾದ ನಿನ್ನಿಂದ ನನ್ನನ್ನು ಅಗಲುವಂತೆ ಮಾಡಿ ನಿರಾಶಳನ್ನಾಗಿಮಾಡಿದೆ. ಪತ್ನಿಯು ಪತಿಯ ಅರ್ಧಾಂಗಿ, ಪತ್ನಿ ಮಾತ್ರ ಬದುಕಿದರೆ ಅರ್ಧ ಶರೀರವುಳಿದಂತೆ. ಅರ್ಧಶರೀರವು ಜೀವಿಸುವುದು ಹೇಗೆ ? ಎಂದು ಪ್ರಲಾಪಿಸಿದಳು.

೬೩. ಸೂತಮುನಿವರ್ಯನು ಹೇಳುತ್ತಾನೆ—ಸೊಗಸಾದ ಕುಶಲವಿದ್ಯೆಯಲ್ಲಿ ಜಾಣೆಯೂ, ಹವಳದಂತೆ ಕೆಂಬಣ್ಣವೂ, ಕೋಮಲವೂ ಆದ ಪಾದಗಳುಳ್ಳವಳೂ, ಕಮಲದಂತೆ ಕಣ್ಣುಳ್ಳವಳೂ ಆದ ಆಕೆ, ಆಗ ಕಣ್ಣಿನಿಂದ ಉದುರುವ ಹನಿಗಳೆಂಬ ಮುತ್ತಿನಸರದಿಂದ ಅಲಂಕೃತವಾದ ಮೊಗ್ಗಿನಂತಿರುವ ಸ್ತನಗಳುಳ್ಳವಳಾಗಿದ್ದಳು.

೬೪. ಹೀಗಿದ್ದ ಆ ಕಲಾವತಿಯು, “ ಹಾ ಸತ್ಯನಾರಾಯಣಾ, ಸತ್ಯನಿಧೀ, ಪತಿವಿಯೋಗ ದುಃಖಸಮುದ್ರದಲ್ಲಿ ಮುಳುಗಿ ಹೋಗುತ್ತಿರುವ ನನ್ನನ್ನು ಉದ್ಧಾರ ಮಾಡು ” ಎಂದು ಪ್ರಾರ್ಥನೆಮಾಡಿದಳು. ಈರೀತಿಯಾದ ಈಕೆಯ ದೀನಧ್ವನಿಯನ್ನು ಕೇಳಿ, ಸತ್ಯನಾರಾಯಣ ಸ್ವಾಮಿಯು ಅಶರೀರವಾಣಿಯಿಂದ ಇಂತು ನುಡಿದನು.

ಸಾಧೋ ಕಲಾವತೀ ಕ್ಷಿಪ್ರಂ ಮತ್ಪ್ರಸಾದಂ ಹಿ ಭೋಜಯೇತ್ ।
ತತ್ಪಶ್ಚಾದಿಹ ಸಂಪ್ರಾಪ್ಯ ಪತಿಂ ಪ್ರಾಪ್ಸ್ಯತಿ ಮಾ ಶುಚಃ ॥ ೬೫ ॥

ಇತ್ಯಾಕಾಶೇ ವಚಃ ಶ್ರುತ್ವಾ ವಿಸ್ಮಿತಾ ತಚ್ಚಕಾರ ಸಾ ।
ನಾರಾಯಣಸ್ಯ ಕೃಪಯಾ ಪತಿಂ ಪ್ರಾಪ್ತಾ ಕಲಾವತೀ ॥ ೬೬ ॥

ತತ್ರೈವ ಸಾಧುಃ ಸಾಹ್ಲಾದೋ ಭಕ್ತ್ಯಾ ಪರಮಯಾ ಯುತಃ ।
ಪೂಜನಂ ಲಕ್ಷಮುದ್ರಾಭಿಃ ಸತ್ಯದೇವಸ್ಯ ಚಾಕರೋತ್ ॥ ೬೭ ॥

ತೇನ ವ್ರತಪ್ರಭಾವೇನ ಪುತ್ರಪೌತ್ರಸಮನ್ವಿತಃ ।
ಭುಕ್ತ್ವಾ ಭೋಗಾನ್ ಮುದಾ ಯುಕ್ತೋ ಮೃತಃ ಸ್ವರ್ಗಪುರಂ ಯಯೌ॥

---

೬೫. "ಅಯ್ಯಾ ಸಾಧುವೇ! ಕಲಾವತಿಯು ಮನೆಗೆ ಹೋಗಿ, ನನ್ನ ಪ್ರಸಾದವನ್ನು ಜಾಗ್ರತೆ ಸೇವಿಸಲಿ, ಹಾಗೆ ಸೇವನೆಮಾಡಿದ ಮೇಲೆ ಇಲ್ಲಿಗೆ ಬಂದರೆ ಅವಳು ಪತಿಸಮಾಗಮವನ್ನು ಪಡೆಯುತ್ತಾಳೆ, ದುಃಖಪಡಬೇಕಾಗಿಲ್ಲ" ಎಂದಹಾಗೆ ಕೇಳಿಸಿತು.

೬೬. ಈರೀತಿ ನುಡಿದ ಅಶರೀರವಾಣಿಯನ್ನು ಕೇಳಿ, ಆ ಕಲಾವತಿಯು ಆಶ್ಚರ್ಯಪಟ್ಟು ಅದೇರೀತಿ ಸತ್ಯನಾರಾಯಣ ಪ್ರಸಾದವನ್ನು ಸೇವಿಸಿ ಮತ್ತೆ ಬರಲು, ಸತ್ಯನಾರಾಯಣ ಕೃಪೆಯಿಂದ ಜೀವಿತನಾದ ತನ್ನ ಪತಿಯನ್ನು ಕಂಡಳು. ಅನಂತರ ಎಲ್ಲರೂ ತಮ್ಮ ನಿವಾಸವನ್ನು ಸೇರಿದರು.

೬೭. ಈರೀತಿ ಶುಭಕರವಾದುದರಿಂದ ಸಂತೋಷಗೊಂಡ ಸಾಹುಕಾರನು ಪರಮಭಕ್ತಿಯಿಂದ ಕೂಡಿ, ಹಿಂದೆ ಮೀಸಲಾಗಿರಿಸಿದ ಒಂದುಲಕ್ಷ ಮೊಹರಗಳನ್ನು ವೆಚ್ಚಮಾಡಿ ಸತ್ಯನಾರಾಯಣ ವ್ರತವನ್ನು ಬಹು ವೈಭವದಿಂದ ನೆರವೇರಿಸಿದನು.

೬೮. ಆ ಪ್ರಕಾರ ವ್ರತವನ್ನಾಚರಿಸಿದುದರ ಮಹಿಮೆಯಿಂದ ಮಕ್ಕಳು ಮೊಮ್ಮಕ್ಕಳು ಮುಂತಾದವರನ್ನೆಲ್ಲಾ ಪಡೆದು, ಸಂತೋಷಯುಕ್ತನಾಗಿ ಬೇಕಾದ ಭೋಗಗಳನ್ನು ಅನುಭವಿಸಿ, ದೇಹಾವಸಾನದಲ್ಲಿ ಸ್ವರ್ಗಲೋಕವನ್ನು ಸೇರಿದನು.

ಇತಿಹಾಸಮಿಮಂ ಭಕ್ತ್ಯಾ ಶೃಣುಯಾದ್ಯೋ ಹಿ ಮಾನವಃ ।
ಸೋಽಪಿ ವಿಷ್ಣುಪ್ರಿಯತರಃ ಕಾಮಸಿದ್ಧಿಮವಾಪ್ನುಯಾತ್ ॥ ೬೯ ॥

ಇತಿ ತೇ ಕಥಿತಂ ವಿಪ್ರ ವ್ರತಾನಾಮುತ್ತಮಂ ವ್ರತಂ ।
ಕಲಿಕಾಲೇ ಪರಂ ಪುಣ್ಯಂ ಬ್ರಾಹ್ಮಣಸ್ಯ ಮುಖೋದ್ಭವಂ ॥ ೭೦ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಸತ್ಯನಾರಾಯಣ ವ್ರತಮಾಹಾತ್ಮ್ಯ ವರ್ಣನಂ
ನಾಮ್ನೈಕೋನತ್ರಿಂಶೋಽಧ್ಯಾಯಃ.



---

೬೯. ಈ ಇತಿಹಾಸವನ್ನು ಭಕ್ತಿಯಿಂದ ಆಲಿಸಿದ ಮನುಷ್ಯನು, ಮಹಾವಿಷ್ಣುವಿಗೆ ಅತ್ಯಂತ ಪ್ರೀತಿಪಾತ್ರನಾಗಿ ತನ್ನ ಇಷ್ಟಾರ್ಥಗಳನ್ನೆಲ್ಲಾ ಹೊಂದುವನು.

೭೦. " ಅಯ್ಯಾ ವಿಪ್ರವರ್ಯನೇ ! ಕಲಿಯುಗದಲ್ಲಿ ಶ್ರೇಷ್ಠವಾದುದೂ, ಪುಣ್ಯಪ್ರದವಾದುದೂ, ಬ್ರಾಹ್ಮಣನ ಮೂಲಕ ಉಕ್ತವಾದುದೂ, ಮತ್ತು ವ್ರತಗಳಲ್ಲೆಲ್ಲಾ ಶ್ರೇಷ್ಠ ವ್ರತವೆಂದು ಪ್ರಸಿದ್ಧವಾದುದೂ ಆದ ಈ ಸತ್ಯನಾರಾಯಣ ವ್ರತವನ್ನು ನಿನಗೆ ಹೇಳಿದ್ದೇನೆ " ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯದಲ್ಲಿ
ಸತ್ಯನಾರಾಯಣ ವ್ರತ ಮಹಾತ್ಮ್ಯ ವರ್ಣನೆಯೆಂಬ
ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ತ್ರಿಂಶೋಽಧ್ಯಾಯಃ

---

॥ ಋಷಯಃ ಊಚುಃ ॥

ಭಗವನ್ ಗುಹ್ಯಜಂ ಕರ್ಮ ವೃತ್ತಂ ಪ್ರೋಕ್ತಂ ಪುರಾತನೈಃ ।
ವ್ರತಾನಾಂ ಚೈವ ಸರ್ವೇಷಾಂ ಶ್ರೇಷ್ಠಂ ನಾರಾಯಣವ್ರತಂ ॥ ೧ ॥

ತ್ವನ್ಮುಖೇನ ಶ್ರುತಂ ಸೂತ ತಾಪತ್ರಯವಿನಾಶನಂ ।
ಇದಾನೀಂ ಶ್ರೋತುಮಿಚ್ಛಾಮಿ ಲಿಂಗಜಂ ಕರ್ಮ ಚೋತ್ತಮಂ ॥ ೨ ॥

ಸರ್ವೇಷಾಂ ಬ್ರಹ್ಮಚರ್ಯಾಣಾಂ ಬ್ರಹ್ಮಚರ್ಯೋ ಹಿ ಕಿಂ ಪರಂ ।
ತನ್ಮೇ ವದ ಮಹಾಪ್ರಾಜ್ಞ ಸರ್ವಜ್ಞೋಽಸಿ ಮತೌ ಮಮ ॥ ೩ ॥

---

## ಮೂವತ್ತನೆಯ ಅಧ್ಯಾಯ

೧-೩. ಆ ಋಷಿಗಳು ಸೂತಮುನಿವರ್ಯನನ್ನು ಕೇಳುತ್ತಾರೆ—"ಪೂಜ್ಯನಾದ ಸೂತಮಹರ್ಷಿಯೇ ! ಪುರಾತನರು ಗುಹ್ಯೇಂದ್ರಿಯಜನ್ಯವಾದ ಅನೇಕ ಕರ್ಮಗಳಿವೆ ಯೆಂದು ಹೇಳಿದ್ದಾರೆ. ವ್ರತಗಳೊಳಗೆ ಸತ್ಯನಾರಾಯಣ ವ್ರತವು ಶ್ರೇಷ್ಠವಾದುದೇ ಸರಿ. ತಾಪತ್ರಯ ನಿವಾರಕವಾದ ಈ ವ್ರತವನ್ನು ನಿನ್ನ ಬಾಯಿಂದ ಕೇಳಿದೆವು. ಈಗ ಲಿಂಗಜನ್ಯವಾದ ಉತ್ತಮ ಕರ್ಮವನ್ನು ಕೇಳಲು ನಮಗೆ ಕುತೂಹಲವಿದೆ. ವಿಧವಿಧವಾದ ಬ್ರಹ್ಮಚರ್ಯಗಳಲ್ಲಿ ಯಾವ ಬ್ರಹ್ಮಚರ್ಯವು ಶ್ರೇಷ್ಠ ? ನೀನು ಸರ್ವಜ್ಞನೆಂದು ನಾವು ತಿಳಿದುಕೊಂಡಿದ್ದೇವೆ. ಆದುದರಿಂದ ಪ್ರಾಜ್ಞನಾದ ನೀನು ಯಾವ ಬ್ರಹ್ಮಚರ್ಯ ಶ್ರೇಷ್ಠ ಎಂಬ ವಿಚಾರವನ್ನು ನಮಗೆ ಹೇಳಬೇಕು" ಎಂದು ಕೇಳಿದರು

॥ ಸೂತ ಉವಾಚ ॥

ಆಸೀತ್ಪುರಾ ಕಲಿಯುಗೇ ಪಿತೃಶರ್ಮಾ ದ್ವಿಜೋತ್ತಮಃ ।
ವೇದವೇದಾಂಗತತ್ತ್ವಜ್ಞೋ ಯಮಲೋಕಭಯಾನ್ವಿತಃ ॥ ೪ ॥

ಜ್ಞಾತ್ವಾ ಘೋರತಮಂ ಕಾಲಂ ಕಲಿಕಾಲಮಧರ್ಮಜಂ ।
ವಾರ್ಧನಂ ಯಮರಾಷ್ಟ್ರಸ್ಯ ತದಾ ಚಿಂತಾತುರೋಽಭವತ್ ॥ ೫ ॥

ಕೇನಾಶ್ರಮೇಣ ವರ್ಣೇನ ಮಮ ಶ್ರೇಯೋ ಭವೇದಿಹ ।
ಕಲೌ ಸಂನ್ಯಾಸಮಾರ್ಗೋ ಹಿ ದಂಭಪಾಖಂಡಖಂಡಿತಃ ॥ ೬ ॥

ವಾನಪ್ರಸ್ಥಃ ಕಲೌ ನಾಸ್ತಿ ಬ್ರಹ್ಮಚರ್ಯಂ ಕ್ವಚಿತ್ಕ್ವಚಿತ್ ।
ಗಾರ್ಹಸ್ಥ್ಯಂ ಕರ್ಮ ಸರ್ವೇಷಾಂ ಕರ್ಮಣಾಂ ಶ್ರೇಷ್ಠಮುಚ್ಯತೇ ॥ ೭ ॥

---

೪. ಅದನ್ನು ಕೇಳಿ ಸೂತಮುನಿವರ್ಯನು ಹೇಳುತ್ತಾನೆ—ಕಲಿಯುಗದಲ್ಲಿ ಬಹುಹಿಂದೆ ಪಿತೃಶರ್ಮನೆಂಬ ಬ್ರಾಹ್ಮಣೋತ್ತಮನಿದ್ದನು. ಅವನು ವೇದವೇದಾಂಗಗಳ ಸ್ವರೂಪವನ್ನು ಚೆನ್ನಾಗಿ ತಿಳಿದವನಾಗಿ ನರಕಕ್ಕೆ ಭೀತಿಪಡುತ್ತಿದ್ದನು.

೫. ಈ ಕಲಿಗಾಲವು ಅಧರ್ಮಯುಕ್ತವಾಗಿ ಮಹಾಭಯಂಕರವಾದುದೆಂದೂ ಇದರಿಂದ ಯಮಲೋಕವು ಅಭಿವೃದ್ಧಿ ಹೊಂದುವುದೆಂದೂ ತಿಳಿದು ಚಿಂತಾಯುಕ್ತನಾದನು.

೬ ಅವನು ತನ್ನ ಮನದಲ್ಲಿ ಈ ಲೋಕದಲ್ಲಿ ಯಾವ ವರ್ಣಾಶ್ರಮದಿಂದ ನನಗೆ ಶ್ರೇಯಸ್ಸಾದೀತು ? ಕಲಿಯುಗದಲ್ಲಿ ಸಂನ್ಯಾಸಾಶ್ರಮವು ಕೇವಲ ದಂಭವೆನಿಸಿ ನೀಚರಿಂದ ಖಂಡನೆ ಹೊಂದತಕ್ಕದ್ದಾಗಿದೆ.

೭, ವಾನಪ್ರಸ್ಥಾಶ್ರಮವೆಂಬುದು ಈ ಕಲಿಯುಗದಲ್ಲಿ ರೂಢಿಗೇ ಬರಲಿಲ್ಲ. ಬ್ರಹ್ಮಚರ್ಯಾಶ್ರಮವು ಅಲ್ಲಲ್ಲಿ ಸ್ವಲ್ಪಮಟ್ಟಿಗೆ ನೆಲಸಿದೆ. ಗೃಹಸ್ಥಾಶ್ರಮವೇ ಎಲ್ಲರಿಗೂ ಎಲ್ಲ ಕರ್ಮಗಳ ಆಚರಣೆಗೂ ಶ್ರೇಷ್ಠವಾದುದೆಂದು ಹೇಳಬೇಕು.

**ಅತಃ ಸ್ತ್ರೀಸಂಗ್ರಹೋ ಗ್ರಾಹ್ಯೋ ಮಯಾ ಘೋರೇ ಕಲೌ ಯುಗೇ ।**
**ಯದಿ ಮೇ ಚ ಭವೇನ್ನಾರೀ ಮನೋವೃತ್ತ್ಯನುಸಾರಿಣೀ ।**
**ತರ್ಹಿ ಮೇ ಸಫಲಂ ಜನ್ಮ ಮಮ ಶ್ರೇಯೋ ಭವೇದಿಹ ॥ ೮ ॥**

**ಇತ್ಯೇವಂ ಸಮ್ಮತಂ ಕೃತ್ವಾ ಶಿವಾಂ ಮಂಗಲದಾಯಿನೀಂ ।**
**ಚಂದನಾದ್ಯೈಶ್ಚ ಸಂಪೂಜ್ಯ ತುಷ್ಟಾವ ಮನಸಾ ಪರಾಂ ।**
**ವಿಶ್ವೇಶ್ವರೀಂ ಜಗನ್ಮೂರ್ತಿಂ ಸಚ್ಚಿದಾನಂದರೂಪಿಣೀಂ ॥ ೯ ॥**

**॥ ಪಿತೃಶರ್ಮೋವಾಚ ॥**

**ನಮಃ ಪ್ರಕೃತ್ಯೈ ಸರ್ವಾಯೈ ಕೈವಲ್ಯಾಯೈ ನಮೋನಮಃ ।**
**ತ್ರಿಗುಣೈಕ್ಯಸ್ವರೂಪಾಯೈ ತುರೀಯಾಯೈ ನಮೋನಮಃ ॥ ೧೦ ॥**

---

೮. "ಆದುದರಿಂದ ಘೋರವಾದ ಈ ಕಲಿಯುಗದಲ್ಲಿ ನಾನೂ ಗೃಹಸ್ಥಾಶ್ರಮಿಯೇ ಆಗಬೇಕು. ಅದಕ್ಕಾಗಿ ಸ್ತ್ರೀಯನ್ನು ಪರಿಗ್ರಹಿಸಬೇಕು. ನನ್ನ ಮನೋವೃತ್ತಿಗೆ ಅನುಸಾರಿಣಿಯಾದ ಸ್ತ್ರೀಯು ದೊರೆತರೆ ನನ್ನ ಜನ್ಮ ಸಾರ್ಥಕವಾಗುವುದು. ಇಹ ಲೋಕದಲ್ಲೂ ಶ್ರೇಯಸ್ಸು ಲಭಿಸುವುದು."

೯. "ಆದುದರಿಂದ ನನಗೆ ಅನುರೂಪಿಣಿಯಾದ ಉತ್ತಮ ಸ್ತ್ರೀಯನ್ನು ಪಡೆಯಬೇಕು." ಹೀಗೆಂಬದಾಗಿ ಮನಸ್ಸುಮಾಡಿ ಸರ್ವಮಂಗಳಗಳನ್ನು ಕೊಡತಕ್ಕವಳೂ, ಶ್ರೇಷ್ಠಳೂ, ಜಗದೀಶ್ವರಿಯೂ, ಜಗತ್ಸ್ವರೂಪಿಣಿಯೂ, ಸಚ್ಚಿದಾನಂದರೂಪಿಣಿಯೂ ಆದ ಪಾರ್ವತೀದೇವಿಯನ್ನು ಗಂಧಪುಷ್ಪಾದಿಗಳಿಂದ ಪೂಜಿಸಿ ಮನಃಪೂರ್ವಕವಾಗಿ ಸ್ತುತಿಸಿದನು.

೧೦. ಪಿತೃಶರ್ಮನು ಭಕ್ತಿಯುಕ್ತನಾಗಿ "ಜಗಜ್ಜನನಿಯೇ ! ಪ್ರಕೃತಿಯೆನಿಸಿದವಳೂ ಪರಮೇಶ್ವರನ ಅರ್ಧಾಂಗಿಯೂ ಕೈವಲ್ಯ (ಮೋಕ್ಷ) ಸ್ವರೂಪಿಣಿಯೂ ಆದ ನಿನಗೆ ನಮಸ್ಕಾರ. ಸತ್ವರಜಸ್ತಮೋಗುಣ ಸ್ವರೂಪಿಣಿಯೂ ಅವುಗಳಿಂದ ಅತೀತವಾದ ಬೇರೊಂದು ಗುಣರೂಪಿಣಿಯೂ ಆದ ನಿನಗೆ ನಮಸ್ಕಾರ.

ಮಹತ್ತತ್ತ್ವಜನನ್ಯೈ ಚ ದ್ವಂದ್ವಕರ್ತ್ರ್ಯೈ ನಮೋನಮಃ ।
ಬ್ರಹ್ಮಮಾತರ್ನಮಸ್ತುಭ್ಯಂ ಸಾಹಂಕಾರಪಿತಾಮಹಿ ॥ ೧೧ ॥

ಪೃಥಗ್ಗುಣಾಯೈ ಶುದ್ಧಾಯೈ ನಮೋ ಮಾತರ್ನಮೋನಮಃ ।
ವಿದ್ಯಾಯೈ ಶುದ್ಧಸತ್ವಾಯೈ ಲಕ್ಷ್ಮ್ಯೈ ಸತ್ತ್ವರಜೋಮಯಿ ॥ ೧೨ ॥

ನಮೋ ಮಾತರವಿದ್ಯಾಯೈ ತತಃ ಶುದ್ಧ್ಯೈ ನಮೋನಮಃ ।
ಕಾಲ್ಯೈ ಸತ್ವತಮೋಭೂತ್ಯೈ ನಮೋ ಮಾತರ್ನಮೋನಮಃ ॥ ೧೩ ॥

ಸ್ತ್ರಿಯೈ ಶುದ್ಧರಜೋಮೂರ್ತ್ಯೈ ನಮಸ್ತ್ರೈಲೋಕ್ಯವಾಸಿನಿ ।
ನಮೋ ರಜಸ್ತಮೋಮೂರ್ತ್ಯೈ ದುರ್ಗಾಯೈ ಚ ನಮೋನಮಃ ॥ ೧೪ ॥

ಇತಿ ಶ್ರುತ್ವಾ ಸ್ತವಂ ದೇವ್ಯಾ ಪ್ರಸಾದಃ ಸ್ಥಾಪಿತಸ್ತಯಾ ।
ಸುತಾಯಾಂ ವಿಷ್ಣುಯಶಸೋ ಬ್ರಾಹ್ಮಣಸ್ಯ ತದಾ ಸ್ವಯಂ ॥ ೧೫ ॥

---

೧೧. ಮಹತ್ತತ್ತ್ವವನ್ನುಂಟುಮಾಡುವವಳೂ, ಲೋಕದಲ್ಲಿ ಸ್ತ್ರೀಪುರುಷ ದ್ವಂದ್ವದ ಸೃಷ್ಟಿಕರ್ತಳೂ ಆದ ನಿನಗೆ ನಮಸ್ಕಾರ. ಬ್ರಹ್ಮಜನನಿಯಾದ ಮಾತೃಸ್ವರೂಪಳೇ ! ಅಹಂಕಾರ ವಿಶಿಷ್ಟನಾದ ಪಿತಾಮಹನ ಪತ್ನಿಯೇ ನಿನಗೆ ನಮಸ್ಕಾರ.

೧೨. ಪ್ರತ್ಯೇಕವಾಗಿ ಸತ್ವರಜಸ್ತಮೋಗುಣ ಸ್ವರೂಪಿಣಿಯೂ ಪರಿಶುದ್ಧಳೂ ಆದ ಮಾತೆಯೇ ! ನಿನಗೆ ನಮಸ್ಕಾರ. ಜ್ಞಾನಸ್ವರೂಪಳೂ ಪರಿಶುದ್ಧ ಸತ್ವಸ್ವರೂಪಳೂ ಮಹಾಲಕ್ಷ್ಮಿಯೂ, ಸತ್ವರಜೋಗುಣಗಳಿಂದ ಕೂಡಿದವಳೂ ಆದ ನಿನಗೆ ನಮಸ್ಕಾರ.

೧೩. ಜಗನ್ಮಾತೆಯೇ ! ಅವಿದ್ಯಾಸ್ವರೂಪಿಣಿಯೂ ಮತ್ತು ಶುದ್ಧ ಚೈತನ್ಯ ಸ್ವರೂಪಳೂ ಆದ ನಿನಗೆ ನಮಸ್ಕಾರ. ಸತ್ತ್ವಗುಣ ತಮೋಗುಣಗಳ ಸಂಪತ್ತಿನಿಂದ ಕೂಡಿದ ಮಹಾಕಾಳಿಯೇ ! ಜಗಜ್ಜನನಿಯಾದ ನಿನಗೆ ನಮಸ್ಕಾರ.

೧೪. ರಜೋಗುಣ ತಮೋಗುಣದ ಮೂರ್ತಿಯುಳ್ಳವಳೂ ದುರ್ಗಾದೇವಿಯೂ ಆದ ನಿನಗೆ ಸಾಷ್ಟಾಂಗ ನಮಸ್ಕಾರ " ಎಂದು ಸ್ತುತಿಸಿದನು.

೧೫-೧೬. ಆ ಬ್ರಾಹ್ಮಣನು ಈರೀತಿ ಸ್ತುತಿಮಾಡಿದುದನ್ನು ಕೇಳಿ, ದೇವಿಯು ಆತನಲ್ಲಿ ಅನುಗ್ರಹಮಾಡಿ ವಿಷ್ಣುಯಶನೆಂಬ ಬ್ರಾಹ್ಮಣನ ಮಗಳಲ್ಲಿ ಆತನಿಗೆ ಮನಃ

ತಾಮುದ್ವಾಹ್ಯ ದ್ವಿಜೋ ದೇವೀಂ ನಾಮ್ನಾ ವೈ ಬ್ರಹ್ಮಚಾರಿಣೀಂ ।
ನ್ಯವಸನ್ಮಧುರಾಯಾಂ ಸ ಕೃತ್ವಾ ಧರ್ಮಂ ಸ್ವಯಂ ಹೃದಿ ॥ ೧೬ ॥

ಪ್ರಿಯಾಯೈ ಸ ರಜೋವತ್ಯೈ ಋತುದಾನಂ ಕರೋತಿ ಹಿ ।
ಚತ್ವಾರಶ್ಚಾತ್ಮಜಾಶ್ಚಾಸಂಶ್ಚತುರ್ವೇದೈಕ್ಯಧಾರಿಣಃ ॥ ೧೭ ॥

ಋಗ್ಯಜುಶ್ಚ ತಥಾ ಸಾಮ ತುರ್ಯಶ್ಚಾಸೀದಥರ್ವಣಃ ।
ಋಚಶ್ಚ ತನಯೋ ವ್ಯಾಡಿನ್ಯಾಯಶಾಸ್ತ್ರವಿಶಾರದಃ ॥ ೧೮ ॥

ಯಜುಷಸ್ತು ಸುತೋ ಜಾತೋ ಮೀಮಾಂಸೋ ಲೋಕವಿಶ್ರುತಃ ।
ಪಾಣಿನಿಃ ಸಾಮನಸ್ಯೈವ ಸುತೋಽಭೂಚ್ಛಬ್ದಪಾರಗಃ ॥ ೧೯ ॥

ಪುತ್ರೋ ವರರುಚಿಃ ಶ್ರೇಷ್ಠೋಽಥರ್ವಣಸ್ಯ ನೃಪಪ್ರಿಯಃ ।
ತೇ ಗತಾ ಮಾಗಧೇಶಸ್ಯ ಚಂದ್ರಗುಪ್ತಸ್ಯ ವೈ ಸಭಾಂ ॥ ೨೦ ॥

---

ಪ್ರೀತಿ ಹುಟ್ಟುವಂತೆ ಮಾಡಿದಳು. ಆಗ ಆ ಬ್ರಾಹ್ಮಣನು ದೈವೇಚ್ಛೆಯಂತೆ ಬ್ರಹ್ಮಚಾರಿಣೀ ದೇವಿಯೆಂಬ ಹೆಸರುಳ್ಳ ಆಕೆಯನ್ನು ವಿವಾಹವಾಗಿ ಸ್ವಧರ್ಮದಲ್ಲಿ ಮನಸ್ಸನ್ನಿಟ್ಟವನಾಗಿ ಮಧುರಾಪಟ್ಟಣದಲ್ಲಿ ವಾಸಮಾಡಿಕೊಂಡು ಇದ್ದನು.

೧೭-೧೮. ಆ ಬ್ರಹ್ಮಚಾರಿಣೀದೇವಿಯು ಪುಷ್ಪವತಿಯಾದಮೇಲೆ ಉಕ್ತದಿನದಲ್ಲಿ ಆತನು ಪ್ರಿಯೆಯೊಡನೆ ಸಂಗಮಮಾಡಿ ಗರ್ಭಾಧಾನಮಾಡಿದನು. ಋಗ್ಯಜುಸ್ಸಾಮಾಥರ್ವಣವೆಂಬ ಚತುರ್ವೇದಗಳೂ ಆಕಾರವನ್ನು ಧರಿಸಿ ಅವತರಿಸಿದುವೋ ಎಂಬಂತೆ ಕಾಲಕ್ರಮದಲ್ಲಿ ನಾಲ್ವರು ಮಕ್ಕಳು ಜನಿಸಿದರು.

೧೯. ಋಗ್ವೇದ ಪುತ್ರನಾದ ವ್ಯಾಡಿಯು ನ್ಯಾಯಶಾಸ್ತ್ರದಲ್ಲಿ ನಿಪುಣನಾದನು. ಯಜುರ್ವೇದ ಪುತ್ರನು ಮೀಮಾಂಸಕನೆಂದು ಲೋಕವಿಖ್ಯಾತನಾದನು. ಸಾಮವೇದ ಸುತನು ಶಬ್ದಶಾಸ್ತ್ರನಿಪುಣನಾದ ಪಾಣಿನಿಯೆನಿಸಿದನು.

೨೦. ಅಥರ್ವಣವೇದ ಪುತ್ರನು ಶ್ರೇಷ್ಠನಾದ ವರರುಚಿಯಾಗಿ ಜನಿಸಿ ರಾಜನಿಗೆ ಪ್ರಿಯನಾದನು. ಅವರೆಲ್ಲರೂ ಒಂದುಸಲ ಮಗಧರಾಜ್ಯಾಧಿಪತಿಯಾದ ಚಂದ್ರಗುಪ್ತನ ಸಭೆಗೆ ಹೋದರು.

ನೃಪಸ್ತಾನ್ ಪೂಜಯಾಮಾಸ ಬಹುಮಾನಪುರಃಸರಂ ।
ಅಬ್ರವೀತ್ತಾಂಸ್ತತೋ ರಾಜಾ ಬ್ರಹ್ಮಚರ್ಯಂ ಹಿ ಕಿಂ ಪರಂ ॥ ೨೧ ॥

ವ್ಯಾಡಿರಾಹ ಮಹಾರಾಜ ಯಃ ಸ್ತುತೌ ತತ್ಪರಃ ಪುಮಾನ್ ।
ನ್ಯಾಯತೋಽಖಿಲದೇವಾನಾಂ ಬ್ರಹ್ಮಚಾರೀ ಹಿ ಮೇ ಮತಃ ॥ ೨೨ ॥

ಮೀಮಾಂಸಶ್ಚಾಹ ಭೋ ರಾಜನ್ ಯಜ್ಞೇ ಯೋ ಹಿ ಪುಮಾನ್ ಪರಃ ।
ಕರ್ಮಣಾ ಯಜತೇ ದೇವಾನ್ ರೋಚನಾದಿಭಿರರ್ಚಯೇತ್ ॥ ೨೩ ॥

ಹವನಂ ತರ್ಪಣಂ ಕೃತ್ವಾ ಬ್ರಹ್ಮಾದಿಕಸುರಾನ್ ಪ್ರತಿ ।
ತತ್ಪ್ರಸಾದಂ ಹಿ ಗೃಹ್ಣೀಯಾದ್ಬ್ರಹ್ಮಚಾರೀ ಚ ಸ ಸ್ಮೃತಃ ॥ ೨೪ ॥

ಶ್ರುತ್ವೇದಂ ಪಾಣಿನಿಶ್ಚಾಹ ಚಂದ್ರಗುಪ್ತ ಶೃಣುಷ್ವ ಭೋಃ ।
ತ್ರಿಧಾ ಸ್ವರೈಃ ಪರಂ ಬ್ರಹ್ಮ ಶುದ್ಧಶಬ್ದಮಯೈಃ ಪರೈಃ ॥ ೨೫ ॥

---

೨೧. ಆ ರಾಜನು ಅವರನ್ನು ಗೌರವದಿಂದ ಸತ್ಕರಿಸಿ ಪೂಜಿಸಿದನು. ಅನಂತರ ರಾಜನು ಅವರನ್ನು ಕುರಿತು " ಪೂಜ್ಯರೇ ! ಯಾವ ಬ್ರಹ್ಮಚರ್ಯವು ಶ್ರೇಷ್ಠ ಎಂಬುದನ್ನು ನಿರೂಪಿಸಬೇಕು " ಎಂದು ಕೇಳಿದನು.

೨೨. ಆಗ ವ್ಯಾಡಿಯು " ಕೇಳು ಮಹಾರಾಜಾ ! ಸಮಸ್ತ ದೇವತೆಗಳನ್ನು ಸ್ತುತಿಮಾಡುವುದರಲ್ಲಿ ನ್ಯಾಯರೀತಿಯಿಂದ ಸರ್ವದಾ ಆಸಕ್ತನಾಗಿರುವ ಪುರುಷನೇ ಬ್ರಹ್ಮಚಾರಿಯೆನಿಸುವನೆಬುಂದು ನನ್ನ ಅಭಿಪ್ರಾಯ " ಎಂದು ಹೇಳಿದನು.

೨೩-೨೪. ಬಳಿಕ ಮೀಮಾಂಸಕನು " ಯಾವನು ಯಜ್ಞದಲ್ಲಿ ಅಸಕ್ತನೋ ಯಾವನು ಕರ್ಮಾಚರಣತತ್ಪರನಾಗಿ ಗಂಧಾದಿಗಳಿಂದ ದೇವರನ್ನು ಅರ್ಚಿಸುವನೋ ಯಾವನು ಬ್ರಹ್ಮಾದಿ ದೇವತೆಗಳನ್ನುದ್ದೇಶಿಸಿ ಹೋಮ ತರ್ಪಣ ಮೊದಲಾದುವನ್ನು ಮಾಡಿ ಆ ಪ್ರಸಾದವನ್ನು ಸೇವಿಸುವನೋ ಅವನೇ ಬ್ರಹ್ಮಚಾರಿಯೆಂದು ತಿಳಿಯಬೇಕು " ಎಂದನು.

೨೫-೨೬. ಇದನ್ನು ಕೇಳಿ ಪಾಣಿನಿಯು " ಎಲೈ ಚಂದ್ರಗುಪ್ತನೇ ! ಕೇಳು, ಶುದ್ಧವಾದ ಶಬ್ದದಿಂದ ಕೂಡಿ, ಉದಾತ್ತ ಅನುದಾತ್ತ ಸ್ವರಿತ ಎಂಬ ಶ್ರೇಷ್ಠವಾದ ಮೂರು ಸ್ವರಗಳುಳ್ಳದ್ದಾಗಿ, ಶ್ರೇಷ್ಠವೂ ಪರಿಶುದ್ಧವೂ ಆದ ಶಬ್ದಸಮೂಹದಿಂದಲೂ

ತಥೈವ ಸೂತ್ರಪಾಠೈಶ್ಚ ಲಿಂಗಧಾತುಗಣಾವೃತೈಃ ।
ಯೋ ಯಜೇದ್ಬ್ರಹ್ಮಚಾರೀ ಸ ಪರಂ ಬ್ರಹ್ಮಾಧಿಗಚ್ಛತಿ ॥ ೨೬ ॥

ಶ್ರುತ್ವಾ ವರರುಚಿಶ್ಚಾಹ ಶೃಣು ಮಾಗಧಭೂಪತೇ ।
ಗೃಹೀತ್ವಾ ಯಜ್ಞಸೂತ್ರಂ ಯಃ ಪ್ರಾಪ್ತೋ ಗುರುಕುಲೇ ವಸನ್ ॥ ೨೭ ॥

ದಂಡಲೋಮನಖಾಧಾರೀ ಭಿಕ್ಷಾರ್ಥೀ ವೇದತತ್ಪರಃ ।
ಆಜ್ಞಯಾ ಚ ಗುರೋರ್ವರ್ತೇದ್ಬ್ರಹ್ಮಚಾರೀ ಹಿ ಸ ಸ್ಮೃತಃ ॥ ೨೮ ॥

ಇತಿ ತೇಷಾಂ ವಚಃ ಶ್ರುತ್ವಾ ಪಿತೃಶರ್ಮಾಬ್ರವೀದಿದಂ ।
ಯೋ ಗೃಹಸ್ಥೋ ವಸನ್ ವಿಪ್ರಃ ಪಿತೃದೇವಾತಿಥಿಪ್ರಿಯಃ ॥ ೨೯ ॥

ಗಾಮೀ ಪಾಣಿಗೃಹೀತಾಯಾಮೃತುಕಾಲೇ ಯತೇಂದ್ರಿಯಃ ।
ಬ್ರಹ್ಮಚಾರೀ ಹಿ ಮುಖ್ಯಸ್ಸ ಶ್ರುತ್ವಾ ರಾಜಾಬ್ರವೀದಿದಂ ॥ ೩೦ ॥

---

ಅದೇರೀತಿ ಪುಂಸ್ತ್ರೀನಪುಂಸಕಾದಿ ಲಿಂಗ, ಧಾತು, ಗಣ, ಎಂಬ ಮೂರು ಸೂತ್ರಪಾಠಗಳಿಂದಲೂ ಯಾವನು ಪರಬ್ರಹ್ಮವನ್ನು ಸೇವಿಸುವನೋ ಅವನೇ ಬ್ರಹ್ಮಚಾರಿಯೆನಿಸಿ ಪರಬ್ರಹ್ಮಸ್ವರೂಪವನ್ನು ಹೊಂದುವನು " ಎಂದನು

೨೭-೨೮. ಇದನ್ನು ಕೇಳಿ ವರರುಚಿಯು " ಅಯ್ಯಾ ಮಗಧೇಶನೇ ! ಕೇಳು; ಯಾವನು ಉಪನೀತನಾಗಿ ಗುರುಸಾನ್ನಿಧ್ಯದಲ್ಲಿ ವಾಸಿಸುತ್ತಾ ದಂಡ, ಅಜಿನ, ನಖ ಮೊದಲಾದ್ದನ್ನು ಧರಿಸಿ, ಭಿಕ್ಷಾನ್ನವನ್ನು ಸೇವಿಸಿಕೊಂಡು, ವೇದಾಧ್ಯಯನ ಮಾಡುತ್ತಾ ಗುರುವಿನ ಅಪ್ಪಣೆಯಂತೆ ನಡೆದುಕೊಳ್ಳುವನೋ ಅಂಥವನನ್ನು ಬ್ರಹ್ಮಚಾರಿಯೆಂದು ತಿಳಿಯಬೇಕು " ಎಂದು ಹೇಳಿದನು.

೨೯-೩೦. ಅವರುಗಳು ತಮ್ಮ ಅಭಿಪ್ರಾಯವನ್ನು ಹೇಳಿದ ಅನಂತರ ಪಿತೃಶರ್ಮನು " ಯಾವ ಬ್ರಾಹ್ಮಣನು ಗೃಹಸ್ಥಾಶ್ರಮದಲ್ಲಿ ಇದ್ದುಕೊಂಡು ಪಿತೃ, ದೇವತೆ, ಅತಿಥಿ ಇವರ ಪೂಜೆಯನ್ನು ನಡೆಯಿಸಿಕೊಂಡು ಸ್ವಪತ್ನಿಯಲ್ಲಿ ಗಮನ ಮಾಡುತ್ತಾ ಆಕೆ ರಜಸ್ವಲೆಯಾದಾಗ ಜಿತೇಂದ್ರಿಯನಾಗಿರುವನೋ ಅವನೇ ಶ್ರೇಷ್ಠನಾದ ಬ್ರಹ್ಮಚಾರಿ " ಎಂದು ಹೇಳಿದನು.

ಸ್ವಾಮಿನ್ ಯದ್ಭವತಾ ಚೋಕ್ತಂ ಧರ್ಮಜ್ಞೇನ ಯಶಸ್ವಿನಾ ।
ಕಲೌ ಭಯಂಕರೇ ಪ್ರಾಪ್ತೇ ಸ ಧರ್ಮೋ ಹಿ ಮತೋ ಮಮ ॥ ೩೧ ॥

ಇತ್ಯುಕ್ತ್ವಾ ತಸ್ಯ ಶಿಷ್ಯೋಽಭೂದ್ಗುರುವಾಕ್ಯಪರಾಯಣಃ ।
ತಥಾಂತೇ ಮರಣಂ ಪ್ರಾಪ್ಯ ಸ್ವರ್ಗಲೋಕಂ ನೃಪೋ ಯಯೌ ॥ ೩೨ ॥

ಪಿತೃಶರ್ಮಾಪಿ ಮನಸಾ ಧ್ಯಾತ್ವಾ ದಾಮೋದರಂ ಹರಿಂ ।
ಹಿಮಾಲಯಂ ಗಿರಿಂ ಪ್ರಾಪ್ಯ ಯೋಗಧ್ಯಾನಪರೋಽಭವತ್ ॥ ೩೩ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ತ್ರಿಂಶೋಽಧ್ಯಾಯಃ.



---

೩೧-೩೨. ರಾಜನು ಇದನ್ನು ಕೇಳಿ “ಸ್ವಾಮಿ! ಧರ್ಮಜ್ಞನೂ ಯಶೋವಂತನೂ ಆದ ನೀನು ಹೇಳಿದುದೇ ಸಾಧು, ಭಯಂಕರವಾದ ಈ ಕಲಿಯುಗದಲ್ಲಿ ಈ ಧರ್ಮವೇ ಸರಿ ಎಂದು ನನಗೆ ತೋರುವುದು ಎಂದು ಹೇಳಿ ತಾನೂ ಅವರ ಶಿಷ್ಯನಾಗಿ ಗುರುವಿನ ವಾಕ್ಯವನ್ನು ನಡೆಸುವುದರಲ್ಲಿ ಆಸಕ್ತನಾಗಿದ್ದುಕೊಂಡು ದೇಹಾವಸಾನದಲ್ಲಿ ಸ್ವರ್ಗಕ್ಕೆ ತೆರಳಿದನು.

೩೩. ಪಿತೃಶರ್ಮನೂ ಮನಸ್ಸಿನಲ್ಲಿ ಶ್ರೀಹರಿಯನ್ನು ಧ್ಯಾನಿಸುತ್ತಾ ಹಿಮಾಲಯ ಪರ್ವತಕ್ಕೆ ಹೋಗಿ ಯೋಗಧ್ಯಾನದಲ್ಲಿ ನಿರತನಾದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ
ಮೂವತ್ತನೆಯ ಅಧ್ಯಾಯವು ಮುಗಿದುದು.



"ಶ್ರೀ:"

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ಏಕತ್ರಿಂಶೋಽಧ್ಯಾಯಃ

॥ ಋಷಯ ಊಚುಃ ॥

ಭಗವನ್ ಸರ್ವತೀರ್ಥಾನಾಂ ದಾನಾನಾಂ ಕಿಂ ಪರಂ ಸ್ಮೃತಂ ।
ಯತ್ಕೃತ್ವಾ ಚ ಕಲೌ ಘೋರೇ ಪರಾಂ ನಿರ್ವೃತಿಮಾಪ್ನುಯಾತ್ ॥ ೧ ॥

॥ ಸೂತ ಉವಾಚ ॥

ಸಾಮನಸ್ಯ ಸುತಃ ಶ್ರೇಷ್ಠಃ ಪಾಣಿನಿರ್ನಾಮ ವಿಶ್ರುತಃ ।
ಕಣಭುಗ್ವರಶಿಷ್ಯೈಶ್ಚ ಶಾಸ್ತ್ರಜ್ಞೈಃ ಸ ಪರಾಜಿತಃ ॥ ೨ ॥

ಲಜ್ಜಿತಃ ಪಾಣಿನಿಸ್ತತ್ರ ಗತಸ್ತೀರ್ಥಾಂತರಂ ಪ್ರತಿ ।
ಸ್ನಾತ್ವಾ ಸರ್ವಾಣಿ ತೀರ್ಥಾನಿ ಸಂತರ್ಪ್ಯ ಪಿತೃದೇವತಾಃ ॥ ೩ ॥

---

## ಮೂವತ್ತೊಂದನೆಯ ಅಧ್ಯಾಯ

೧-೨. ಋಷಿಗಳು ಸೂತಮುನಿವರ್ಯನನ್ನು ಪ್ರಶ್ನಿಸುತ್ತಾರೆ—"ಅಯ್ಯಾ ಪೂಜ್ಯನೇ! ಪುಣ್ಯತೀರ್ಥಗಳಲ್ಲಿ ಉತ್ತಮವಾದುದು ಯಾವುದು? ಘೋರವಾದ ಈ ಕಲಿಯುಗದಲ್ಲಿ ಯಾವ ತೀರ್ಥಯಾತ್ರೆ ಮಾಡಿದರೆ ಶ್ರೇಷ್ಠವಾದ ಸುಖವನ್ನು ಹೊಂದುತ್ತಾನೆ. ಮತ್ತು ಯಾವ ದಾನವು ಶ್ರೇಷ್ಠವಾದುದು?" ಎಂದು ಕೇಳಿದರು.

೩. ಸೂತಮುನಿವರ್ಯನು ಹೇಳುತ್ತಾನೆ—ಸಾಮವೇದಾತ್ಮಕ ಸುತನು ಪಾಣಿನಿ ಎಂಬ ಹೆಸರುಳ್ಳವನಾಗಿ ಪ್ರಸಿದ್ಧನೆನಿಸಿದನಷ್ಟೆ. ವೈಶೇಷಿಕ ಶಾಸ್ತ್ರಜ್ಞರಾದ ಕಣಾದ ಮುನಿಗಳ ಶಿಷ್ಯರು ವಾದದಲ್ಲಿ ಆ ಪಾಣಿನಿಯನ್ನು ಸೋಲಿಸಿದರು.

ಕೇದಾರಮುದಕಂ ಪೀತ್ವಾ ಶಿವಧ್ಯಾನಪರೋಽಭವತ್ ।
ಪರ್ಣಾಶೀ ಸಪ್ತದಿವಸಾಞ್ಜಲಭಕ್ಷಸ್ತತೋಽಭವತ್ ॥ ೪ ॥

ತತೋ ದಶದಿನಾಂತೇ ಸ ವಾಯುಭಕ್ಷೋ ದಶಾಹನಿ ।
ಅಷ್ಟಾವಿಂಶದ್ದಿನೇ ರುದ್ರೋ ವರಂ ಬ್ರೂಹಿ ವಚೋಽಬ್ರವೀತ್ ॥ ೫ ॥

ಶ್ರುತ್ವಾಮೃತಮಯಂ ವಾಕ್ಯಮುಸ್ತೌದ್ಗದ್ಗದಯಾ ಗಿರಾ ।
ಸರ್ವೇಶಂ ಸರ್ವಲಿಂಗೇಶಂ ಗಿರಿಜಾವಲ್ಲಭಂ ಹರಂ ॥ ೬ ॥

॥ ಪಾಣಿನಿರುವಾಚ ॥

ನಮೋ ರುದ್ರಾಯ ಮಹತೇ ಸರ್ವೇಶಾಯ ಹಿತೈಷಿಣೇ ।
ನಂದೀಸಂಸ್ಥಾಯ ದೇವಾಯ ವಿದ್ಯಾಭಯಕರಾಯ ಚ ॥ ೭ ॥

ಪಾಪಾಂತಕಾಯ ಭರ್ಗಾಯ ನಮೋಽನಂತಾಯ ವೇಧಸೇ ।
ನಮೋ ಮಾಯಾಹರೇಶಾಯ ನಮಸ್ತೇ ಲೋಕಶಂಕರ ॥ ೮ ॥

---

೪. ಇದರಿಂದ ನಾಚಿಕೆಹೊಂದಿ ಪಾಣಿನಿಯು, ಅಲ್ಲಿ ನಿಲ್ಲದೆ ತೀರ್ಥಯಾತ್ರೆಗೆ ಹೋದನು. ಎಲ್ಲ ಪುಣ್ಯತೀರ್ಥಗಳಲ್ಲಿಯೂ ಸ್ನಾನಮಾಡಿ ಪಿತೃಗಳಿಗೂ ದೇವತೆಗಳಿಗೂ ತೃಪ್ತಿಯಾಗುವಂತೆ ಕರ್ಮವನ್ನಾಚರಿಸಿ ಕೇದಾರಕ್ಷೇತ್ರಕ್ಕೆ ಹೋಗಿ ಅಲ್ಲಿ ಕೇವಲ ತೀರ್ಥಪ್ರಾಶನಮಾಡಿಕೊಂಡು ಶಿವಧ್ಯಾನ ಮಾಡುತ್ತಾ ತಪೋನಿರತನಾದನು.

೫. ಆ ಕಾಲದಲ್ಲಿ ಏಳುದಿನಗಳು ಪರ್ಣಾಹಾರ, ಅನಂತರ ಹತ್ತುದಿನ ಜಲಪಾನ, ಅದಾದಮೇಲೆ ಹತ್ತುದಿನ ವಾತಾಹಾರ, ಈ ಪ್ರಕಾರ ಇಪ್ಪತ್ತೇಳು ದಿನ ಭಕ್ತಿಯಿಂದ ತಪಸ್ಸುಮಾಡಿದನು, ಇಪ್ಪತ್ತೆಂಟನೆಯ ದಿವಸ ಈಶ್ವರನು ಪ್ರತ್ಯಕ್ಷನಾಗಿ " ನಿನಗೆ ಬೇಕಾದ ವರವನ್ನು ಕೇಳು " ಎಂದನು.

೬-೯. ಅಮೃತಸದೃಶವಾದ ಈ ನುಡಿಯನ್ನು ಕೇಳಿ, ಪಾಣಿನಿಯು ಗದ್ಗದ ಧ್ವನಿಯಿಂದ ಕೂಡಿ; ಸರ್ವೇಶನೂ, ಸರ್ವಲಿಂಗೇಶನೂ, ಪಾರ್ವತೀನಾಥನೂ ಆದ ಹರನನ್ನು ಸ್ತುತಿಸತೊಡಗಿದನು. "ದೇವದೇವಾ! ಮಹಾತ್ಮನೂ, ಸರ್ವೇಶ್ವರನೂ, ಸರ್ವರಿಗೂ ಹಿತವನ್ನಾಶಿಸುವವನೂ, ನಂದಿವಾಹನನೂ; ಜ್ಞಾನಪ್ರದನೂ,ಅಭಯ ಹಸ್ತವುಳ್ಳವನೂ ಪಾಪಧ್ವಂಸಿಯೂ ಭರ್ಗನೂ, ಅನಂತನೂ, ವೇದಸಂಭವನೂ ಆದ ನಿನಗೆ ನಮಸ್ಕಾರ ಮಾಯೆಯನ್ನು ಹೋಗಲಾಡಿಸುವವನೂ, ಲೋಕಕ್ಕೆ ಸುಖವುಂಟು

**ಯದಿ ಪ್ರಸನ್ನೋ ದೇವೇಶ ವಿದ್ಯಾಮೂಲಪ್ರದೋ ಭವ ।**
**ಪರಂ ತೀರ್ಥಂ ಹಿ ಮೇ ದೇಹಿ ದ್ವೈಮಾತರಪಿತರ್ನಮಃ ॥ ೯ ॥**

**॥ ಸೂತ ಉವಾಚ ॥**

**ಇತಿ ಶ್ರುತ್ವಾ ಮಹಾದೇವಃ ಸೂತ್ರಾಣಿ ಪ್ರದದೌ ಮುದಾ ।**
**ಸರ್ವವರ್ಣಮಯಾನ್ಯೇವ ಅಇಉಣಾದಿ ಶುಭಾನಿ ವೈ ॥ ೧೦ ॥**

**ಜ್ಞಾನಹ್ರದೇ ಸತ್ಯಜಲೇ ರಾಗದ್ವೇಷಮಲಾಪಹೇ ।**
**ಯಃ ಸ್ನಾತೋ ಮಾನಸೇ ತೀರ್ಥೇ ಸರ್ವತೀರ್ಥಫಲಂ ಭಜೇತ್ ॥ ೧೧ ॥**

**ಮಾನಸಂ ಹಿ ಮಹತ್ತೀರ್ಥಂ ಬ್ರಹ್ಮದರ್ಶನಕಾರಕಂ ।**
**ಪಾಣಿನೇ ತೇ ದದೌ ವಿಪ್ರ ಕೃತಕೃತ್ಯೋ ಭವಾನ್ ಭವ ॥ ೧೨ ॥**

---

ಮಾಡತಕ್ಕವನೂ ಆದ ನಿನಗೆ ನಮಸ್ಕಾರ. ವಿಘ್ನೇಶಜನಕನೇ ! ದೇವೇಶನೇ ! ನಿನಗೆ ನನ್ನಲ್ಲಿ ಕೃಪೆಯಿದ್ದರೆ ವಿದ್ಯಾಮೂಲವನ್ನು ಕೊಡು. ಮತ್ತು ಉತ್ಕೃಷ್ಟವಾದ ತೀರ್ಥವನ್ನು ಕೊಡು " ಎಂದು ಪ್ರಾರ್ಥಿಸಿದನು.

೧೦. ಸೂತಮುನಿವರ್ಯನು ಹೇಳುತ್ತಾನೆ—ಈರೀತಿ ಸ್ತುತಿಮಾಡಿದದುದನ್ನು ಕೇಳಿ ಮಹಾದೇವನು ಸಂತೋಷದಿಂದ ಕೂಡಿ " ಅಇಉಣ್ " ಮೊದಲಾಗಿ ವರ್ಣಮಾಲೆಯ ಸಮಸ್ತ ಅಕ್ಷರಗಳನ್ನೂ ನಿರೂಪಿಸತಕ್ಕ ಶುಭಕರವಾದ ಮಾಹೇಶ್ವರೀ ಸೂತ್ರಗಳನ್ನು ಬೋಧಿಸಿದನು.

೧೧. ಅದಲ್ಲದೆ ಜ್ಞಾನವೆಂಬ ಮಡುವಿನಲ್ಲಿರುವ ಸತ್ಯವೆಂಬ ಜಲದಿಂದ, ರಾಗದ್ವೇಷವೆಂಬ ಕಶ್ಮಲವನ್ನು ತೊಳೆದು ಹೋಗಲಾಡಿಸಿಕೊಳ್ಳತಕ್ಕ ಶುದ್ಧಮನಸ್ಸೆಂಬ ಪುಣ್ಯತೀರ್ಥವನ್ನು ಪಡೆದ ಮನುಷ್ಯನು ಸಮಸ್ತತೀರ್ಥಯಾತ್ರೆಮಾಡಿದ ಫಲವನ್ನೂ ಹೊಂದಿದಂತೆಯೇ (ಎಂದರೆ ರಾಗದ್ವೇಷರಹಿತವಾದ ನಿರ್ಮಲಾಂತಃಕರಣದಿಂದ ತತ್ವಜ್ಞಾನಹೊಂದಿ ಸತ್ಯವಾದ ನಡವಳಿಕೆಯುಳ್ಳವರಾಗಿದ್ದರೆ ಅದೇ ಸಮಸ್ತ ಯಾತ್ರಾಫಲಪ್ರದವು) ನಿರ್ಮಲಾಂತಃಕರಣವೆಂಬುದೇ ಬ್ರಹ್ಮಸಾಕ್ಷಾತ್ಕಾರಮಾಡಿಸುವ ಮಹಾತೀರ್ಥಯಾತ್ರೆ. ಅಯ್ಯಾ ಪಾಣಿನಿವಿಪ್ರವರ್ಯನೇ ! ನಿನಗೆ ಆ ತೀರ್ಥವನ್ನು ಕೊಟ್ಟಿದ್ದೇನೆ. ಅದರಿಂದ ನೀನು ಧನ್ಯನಾಗು " ಎಂಬವಾಗಿ ಪರಮೇಶ್ವರನು ಪಾಣಿನಿಗೆ ಹೇಳಿ ಅದೃಶ್ಯನಾದನು. ಬಳಿಕ ಪಾಣಿನಿಯು ತನ್ನ ಊರಿಗೆ ಬಂದನು.

ಇತ್ಯುಕ್ತ್ವಾಂತರ್ದಧೇ ರುದ್ರಃ ಪಾಣಿನಿಃ ಸ್ವಗೃಹಂ ಯಯೌ ।
ಸೂತ್ರಪಾಠಂ ಧಾತುಪಾಠಂ ಗಣಪಾಠಂ ತಥೈವ ಚ ॥ ೧೩ ॥

ಲಿಂಗಸೂತ್ರಂ ತಥಾ ಕೃತ್ವಾ ಪರಂ ನಿರ್ವಾಣಮಾಪ್ತವಾನ್ ।
ತಸ್ಮಾತ್ತ್ವಂ ಭಾರ್ಗವಶ್ರೇಷ್ಠ ಮಾನಸಂ ತೀರ್ಥಮಾಚರ ॥ ೧೪ ॥

ಯತೋ ಯಾತಾ ಸ್ವಯಂ ಗಂಗಾ ಸರ್ವತೀರ್ಥಮಯೀ ಶಿವಾ ।
ಗಂಗಾತೀರ್ಥಾತ್ಪರಂ ತೀರ್ಥಂ ನ ಭೂತಂ ನ ಭವಿಷ್ಯತಿ ॥ ೧೫ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯ
ಏಕತ್ರಿಂಶೋಽಧ್ಯಾಯಃ.



---

೧೩-೧೫. ಬಳಿಕ ಸೂತ್ರಪಾಠ, ಧಾತುಪಾಠ, ಗಣಪಾಠ, ಲಿಂಗಸೂತ್ರ ಮುಂತಾದ್ದೆಲ್ಲವನ್ನೂ ಸಮಗ್ರವಾಗಿ ರಚಿಸಿ, ಶ್ರೇಷ್ಠವಾದ ಮುಕ್ತಿಯನ್ನು ಪಡೆದನು. ಆದುದರಿಂದ " ಎಲೈ ಭೃಗುವಂಶೋತ್ಪನ್ನನೇ ! ನೀನೂ ಮಾನಸತೀರ್ಥವನ್ನು ಪಡೆಯಬೇಕು. ಯಾವಕಾರಣದಿಂದ ಗಂಗೆಯು ಸರ್ವತೀರ್ಥಸ್ವರೂಪಿಣಿಯೂ ಪರಮಪಾವನೆಯೂ ಶುಭಕರೆಯೂ ಎನಿಸಿದಳೋ, ಅಂಥಾ ಗಂಗಾತೀರ್ಥಕ್ಕಿಂತ ಶ್ರೇಷ್ಠವಾದ ತೀರ್ಥವು ಹಿಂದೆ ಯಾವುದೂ ಇರಲಿಲ್ಲ, ಮುಂದೆ ಇನ್ನಾವುದೂ ಬರುವುದಿಲ್ಲ " ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಪ್ರತಿಸರ್ಗಪರ್ವದ ದ್ವಿತೀಯ ಖಂಡದಲ್ಲಿ
ಕಲಿಯುಗದ ಇತಿಹಾಸಸಮುದಾಯವೆಂಬ ಮೂವತ್ತೊಂದನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ

## ದ್ವಾತ್ರಿಂಶೋಽಧ್ಯಾಯಃ

---

॥ ಸೂತ ಉವಾಚ ॥

ತೋತಾದರ್ಯಾಂ ದ್ವಿಜಃ ಕಶ್ಚಿದ್ಬೋಪದೇವ ಇತಿ ಶ್ರುತಃ ।
ಬಭೂವ ಕೃಷ್ಣಭಕ್ತಶ್ಚ ವೇದವೇದಾಂಗಪಾರಗಃ ॥ ೧ ॥

ಗತ್ವಾ ವೃಂದಾವನಂ ರಮ್ಯಂ ಗೋಪಗೋಪೀನಿಷೇವಿತಂ ।
ಮನಸಾ ಪೂಜಯಾಮಾಸ ದೇವದೇವಂ ಜನಾರ್ದನಂ ॥ ೨ ॥

ವರ್ಷಾಂತೇ ಚ ಹರಿಃ ಸಾಕ್ಷಾದ್ದದೌ ಜ್ಞಾನಮನುತ್ತಮಂ ।
ತೇನ ಜ್ಞಾನೇನ ಸಂಪ್ರಾಪ್ತಾ ಹೃದಿ ಭಾಗವತೀ ಕಥಾ ॥ ೩ ॥

---

### ಮೂವತ್ತೆರಡನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ತೋತಾದರಿಯಲ್ಲಿ ಬೋಪದೇವನೆಂಬ ಬ್ರಾಹ್ಮಣನಿದ್ದನು. ಅವನು ವೇದವೇದಾಂಗಪಾರಂಗತನೂ ಶ್ರೀಕೃಷ್ಣಭಕ್ತನೂ ಆಗಿದ್ದನು.

೨. ಗೋಪಗೋಪಿಯರ ಆವಾಸವೆನಿಸಿ ರಮ್ಯವಾದ ಬೃಂದಾವನ ಕ್ಷೇತ್ರಕ್ಕೆ ಆತನು ಒಂದುಸಾರಿ ಹೋದನು. ಅಲ್ಲಿ ದೇವದೇವನಾದ ಶ್ರೀಕೃಷ್ಣನನ್ನು ಶುದ್ಧಾಂತಃಕರಣದಿಂದ ನಿತ್ಯವೂ ಪೂಜಿಸುತ್ತಿದ್ದನು.

೩. ಹೀಗೆ ಒಂದುವರ್ಷವಾದಮೇಲೆ ಶ್ರೀಕೃಷ್ಣನು ಬೋಪದೇವನಿಗೆ ಪ್ರತ್ಯಕ್ಷನಾಗಿ ದಿವ್ಯಜ್ಞಾನವನ್ನು ಕೊಟ್ಟನು. ಆ ದಿವ್ಯಜ್ಞಾನದಿಂದ ಪೂರ್ವದಲ್ಲಿ ಶುಕನು ಬುದ್ಧಿಶಾಲಿಯಾದ ವಿಷ್ಣುರಾತನಿಗೆ ಹೇಳಿದ ಭಾಗವತದ ಕಥೆಯೆಲ್ಲವೂ ಗೋಚರವಾಯಿತು.

ಶುಕೇನ ವರ್ಣಿತಾ ಯಾ ವೈ ವಿಷ್ಣುರಾತಾಯ ಧೀಮತೇ ।
ತಾಂ ಕಥಾಂ ವರ್ಣಯಾಮಾಸ ಮೋಕ್ಷಮೂರ್ತಿಂ ಸನಾತನೀಂ ॥ ೪ ॥

ಕಥಾಂತೇ ಭಗವಾನ್ ವಿಷ್ಣುಃ ಪ್ರಾದುರಾಸೀಜ್ಜನಾರ್ದನಃ ।
ಉವಾಚ ಸ್ನಿಗ್ಧಯಾ ವಾಚಾ ವರಂ ಬ್ರೂಹಿ ಮಹಾಮತೇ ॥ ೫ ॥

॥ ಬೋಪದೇವ ಉವಾಚ ॥

ನಮಸ್ತೇ ಭಗವನ್ ವಿಷ್ಣೋ ಲೋಕಾನುಗ್ರಹಕಾರಕ ।
ತ್ವಯಾ ತತಮಿದಂ ವಿಶ್ವಂ ದೇವತಿರ್ಯಙ್ನರಾದಿಕಂ ॥ ೬ ॥

ತ್ವನ್ನಾಮ್ನಾ ನರಕಾರ್ತಾಶ್ಚ ತೇ ಕೃತಾರ್ಥಾಃ ಕಲೌ ಯುಗೇ ।
ತ್ವಯಾ ದತ್ತಂ ಭಾಗವತಂ ಶ್ರೀಮದ್ವ್ಯಾಸೇನ ನಿರ್ಮಿತಂ ।
ಮಾಹಾತ್ಮ್ಯಂ ತಸ್ಯ ಮೇ ಬ್ರೂಹಿ ಯದಿ ದತ್ತೋ ವರಸ್ತ್ವಯಾ ॥ ೭ ॥

---

೪-೫ ಮೋಕ್ಷಪ್ರದವೂ ಪುರಾತನವೂ ಆದ ಆ ಭಾಗವತ ಕಥೆಯನ್ನು ಬೋಪದೇವನು ತನ್ನ ದಿವ್ಯಜ್ಞಾನದಿಂದ ಪಠಿಸಲು ಕಥೆಯನ್ನೋದಿ ಮುಗಿಸಿದಾಗ ವಿಷ್ಣುಸ್ವರೂಪನೂ ಷಡ್ಗುಣೈಶ್ವರ್ಯ ಸಂಪನ್ನನೂ ಆದ ಶ್ರೀಕೃಷ್ಣನು, ಪ್ರತ್ಯಕ್ಷನಾಗಿ, ಸವಿಯಾದ ವಾಕ್ಕಿನಿಂದ "ಅಯ್ಯಾ ಮಹಾಬುದ್ಧಿಶಾಲಿಯೇ! ನಿನಗೆ ಬೇಕಾದ ವರವನ್ನು ಕೇಳಿಕೊ" ಎಂದು ಹೇಳಿದನು.

೬-೭. ಆಗ ಬೋಪದೇವನು ಸ್ತುತಿಮಾಡುವನಾಗಿ "ಲೋಕಗಳಿಗೆ ಅನುಗ್ರಹಮಾಡತಕ್ಕವನೂ, ಷಡ್ಗುಣೈಶ್ವರ್ಯ ಸಂಪನ್ನನೂ ಆದ ವಿಷ್ಣುವೇ! ನಿನಗೆ ನಮಸ್ಕಾರ. ದೇವತೆಗಳು, ಮನುಷ್ಯರು, ತಿರ್ಯಗ್ಜಂತುಗಳು ಮೊದಲಾದುವುಗಳಿಂದ ಕೂಡಿದ ಪ್ರಪಂಚವು ನಿನ್ನಿಂದ ವ್ಯಾಪ್ತವಾಗಿದೆ. ಕಲಿಯುಗದಲ್ಲಿ ನರಕಯಾತನೆಯನ್ನು ಅನುಭವಿಸುವ ಜನರು ನಿನ್ನ ನಾಮಸ್ಮರಣೆಮಾಡಿದರೆ ಯಾತನೆಯಿಂದ ವಿಮುಕ್ತರಾಗಿ ಧನ್ಯರೆನಿಸುವರು. ವ್ಯಾಸರು ರಚಿಸಿದ ಭಾಗವತವನ್ನು ನೀನು ನನಗೆ ಕರುಣಿಸಿರುವೆ. ನನಗೆ ವರಕೊಡುವುದಾದರೆ ಆ ಭಾಗವತದ ಮಹಾತ್ಮೆಯನ್ನು ನನಗೆ ಹೇಳು" ಎಂದನು.

॥ ಶ್ರೀ ಭಗವಾನುವಾಚ ॥

ಏಕದಾ ಭಗವಾನ್ ರುದ್ರೋ ಭವಾನ್ಯಾ ಸಹ ಶಂಕರಃ ॥ ೮ ॥

ಬೌದ್ಧರಾಜ್ಯೇ ಜಗತ್ಪ್ರಾಪ್ತೇ ದಂಭಪಾಖಂಡನಿರ್ಮಿತೇ ।
ದೃಷ್ಟ್ವಾ ಕಾಶ್ಯಾಂ ಭೂಮಿತುಂಗಂ ಪ್ರಣನಾಮ ಮುದಾ ಯುತಃ ।
ಜಯ ಸಚ್ಚಿದಾನಂದ ವಿಭೋ ಜಗದಾನಂದಕಾರಕ ॥ ೯ ॥

ಇತಿ ಶ್ರುತ್ವಾ ಶಿವಾ ಪ್ರಾಹ ಕೋ ದೇವೋಽಸ್ತಿ ತವೋತ್ತಮಃ ।
ಸ ಹೋವಾಚ ಮಹಾದೇವಿ ಯಜ್ಞಃ ಸಪ್ತಾಹಮತ್ರ ವೈ ॥ ೧೦ ॥

ತಸ್ಮಾದ್ಭೂಮಿ ಪವಿತ್ರತ್ವಮಿಹ ಪ್ರಾಪ್ತಂ ವರಾನನೇ ।
ಸರ್ವತೀರ್ಥಾಧಿಕತ್ವಂ ಚ ಸ್ವಯಂ ಬ್ರಹ್ಮ ಸನಾತನಂ ॥ ೧೧ ॥

ಇತಿ ಶ್ರುತ್ವಾ ಶಿವಾದೇವೀ ಪ್ರಾಪ್ತಾಸೀದ್ಗುಹ್ಯಕಾಲಯಂ ।
ರುದ್ರೇಣ ಸಹಿತಾ ತತ್ರ ಭೂಮಿಶುದ್ಧಿಮಕಾರಯತ್ ॥ ೧೨ ॥

---

೮-೯. ಆಗ ಕೃಷ್ಣಪರಮಾತ್ಮನು ಹೇಳುತ್ತಾನೆ—“ ಅಹಂಕಾರಿಗಳೂ, ಪಾಖಂಡರೂ ಆದ ಬೌದ್ಧರಿಂದ ಏರ್ಪಡಿಸಲ್ಪಟ್ಟ ರಾಜ್ಯಭಾರ ನಡೆಯುತ್ತಿರುವಾಗ ಒಂದುಸಲ ಪರಮೇಶ್ವರನು ಪಾರ್ವತಿಯೊಡನೆ ಸಂಚರಿಸುತ್ತಾ, ಒಂದು ಸ್ಥಳದಲ್ಲಿ ಭೂಮಿಯು ಉಬ್ಬಿಕೊಂಡಿದ್ದುದನ್ನು ಕಂಡು ಸಂತೋಷಯುಕ್ತನಾಗಿ ನಮಸ್ಕರಿಸಿ “ ಸಚ್ಚಿದಾನಂದ ಸ್ವರೂಪನೇ ! ಜಗತ್ತಿಗೆ ಆನಂದಕರನಾದ ವಿಭುವೇ ! ಸರ್ವೋತ್ಕೃಷ್ಟನಾಗು ” ಎಂದನು.

೧೦. ಈ ಮಾತನ್ನು ಕೇಳಿ ಪಾರ್ವತಿಯು “ ಲೋಕೇಶ್ವರನಾದ ನಿನಗೂ ದೇವರೆನಿಸುವ ಉತ್ತಮವಾದ ದೇವರು ಬೇರೆ ಯಾವನಿದ್ದಾನೆ ? ” ಎಂಬದಾಗಿ ಕೇಳಿದಳು, ಆಗ ಶಿವನು “ ಎಲೌ ಸುಂದರಿಯಾದ ದೇವೀ ! ಇಲ್ಲಿ ಏಳುದಿನಗಳಿಂದ ಯಜ್ಞ ನಡೆಯುತ್ತಿದೆ, ಆದುದರಿಂದ ಇಲ್ಲಿ ಭೂಮಿ ಪರಿಶುದ್ಧವಾಗಿದೆ. ಇದು ಸನಾತನವಾದ ಪರಬ್ರಹ್ಮಸ್ವರೂಪವು ಸಮಸ್ತಪುಣ್ಯತೀರ್ಥಗಳಿಗಿಂತಲೂ ಅಧಿಕವಾದುದು ” ಎಂದನು.

೧೧-೧೨. ಅಯ್ಯಾ ವಿಪ್ರನೇ ! ಕೇಳು, ಶಿವನು ಹೀಗೆಂದುದನ್ನು ಕೇಳಿ ಪಾರ್ವತಿಯು ಶಿವನೊಡನೆ ಗುಪ್ತವಾದ ಒಂದು ಸ್ಥಳಕ್ಕೆ ಹೋದಳು. ಅಲ್ಲಿ ಭೂಶುದ್ಧಿ

ಚಂಡೀಶಶ್ಚ ಗಣೇಶಶ್ಚ ನಂದಿನೋ ಗುಹ ಏವ ಚ ।
ರಕ್ಷಾರ್ಥೇ ಸ್ಥಾಪಿತಾಸ್ತತ್ರ ದೇವದೇವೇನ ಭೋ ದ್ವಿಜ ॥ ೧೩ ॥

ಶೃಣು ದೇವಿ ಕಥಾಂ ರಮ್ಯಾಂ ಮಮ ಮಾನಸಸಂಸ್ಥಿತಾಂ ।
ಇತ್ಯುಕ್ತ್ವಾ ಧ್ಯಾನಮಾಸ್ಥಾಯ ಸಪ್ತಾಹೇನ ಸ್ವವರ್ಣಯತ್ ॥ ೧೪ ॥

ಅಷ್ಟಾಹೇ ನೇತ್ರ ಉನ್ಮೀಲ್ಯ ದೃಷ್ಟ್ವಾ ನಿದ್ರಾಗತಾಂ ಶಿವಾಂ ।
ಬೋಧಯಾಮಾಸ ಭಗವಾನ್ ಕಥಾಂತೇ ಲೋಕಶಂಕರಃ ॥ ೧೫ ॥

ಕಿಯತೀ ತೇ ಶ್ರುತಾ ಗಾಥಾ ಶ್ರುತ್ವಾಹ ಜಗದಂಬಿಕಾ ।
ಸುಧಾಮಂಥನಪರ್ಯಂತಂ ಚರಿತ್ರಂ ಶಿವಯೋರಿತಂ ॥ ೧೬ ॥

---

ಯನ್ನು ಮಾಡಿಸಿದಳು. ಶಿವನು ಅಲ್ಲಿಗೆ ನಂದೀಶ, ಚಂಡಿಕೇಶ್ವರ, ಗಣಪತಿ, ಗುಹ (ಷಣ್ಮುಖ) ಇವರನ್ನು ಕಾವಲಿಗೆ ನೇಮಿಸಿದನು.

೧೪. ದೇವನು ಅಲ್ಲಿ ಕುಳಿತು "ಎಲೌ ದೇವಿಯೇ ! ನನ್ನ ಅಂತರಂಗದಲ್ಲಿರುವ ರಮ್ಯವಾದ ಈ ಕಥೆಯನ್ನು ಕೇಳು" ಎಂದು ಹೇಳಿ, ಧ್ಯಾನಯೋಗನಿರತನಾಗಿ ಕುಳಿತು, ಏಳು ದಿನಗಳವರೆಗೂ ಭಾಗವತದ ಕಥೆಯನ್ನು ಚೆನ್ನಾಗಿ ತಿಳಿಸಿದನು.

೧೫. ಎಂಟನೆಯದಿನ ಅವನು ಕಣ್ಣುಬಿಟ್ಟು ನೋಡಿದಾಗ ಪಾರ್ವತೀದೇವಿಗೆ ನಿದ್ದೆ ಬಂದಿತ್ತು. ಕಥೆಯನ್ನು ಹೇಳಿದುದು ಮುಗಿಯಿತು. ಆದುದರಿಂದ ಲೋಕ ಶಂಕರನಾದ ಶಿವನು ಆಕೆಯನ್ನು ಎಚ್ಚರಗೊಳಿಸಿದನು.

೧೬. ಆಮೇಲೆ ಶಿವನು "ನೀನು ಕಥೆಯನ್ನು ಎಲ್ಲಿಯವರೆಗೆ ಕೇಳಿದೆ" ಎಂದು ಶಿವೆಯನ್ನು ಪ್ರಶ್ನೆಮಾಡಲಾಗಿ ಲೋಕಜನನಿಯಾದ ಪಾರ್ವತೀದೇವಿಯು "ಅಮೃತಕ್ಕಾಗಿ ಸಮುದ್ರಮಥನಮಾಡಿದವರೆಗಿನ ಕಥೆಯನ್ನು ಕೇಳಿದೆನು" ಎಂದು ಹೇಳಿದಳು.

ಕೋಟರಸ್ಥಃ ಶುಕಃ ಶ್ರುತ್ವಾ ಚಿರಂಜೀವತ್ವಮಾಗತಃ ।
ಪಾರ್ವತ್ಯಾ ರಕ್ಷಿತೋಽಸೌ ವೈ ಶುಕಃ ಪರಮಸುಂದರಃ ॥ ೧೭ ॥

ಸ್ಥಿತ್ವಾ ಶಿವಸ್ಯ ಸದನೇ ಮಮ ಧ್ಯಾನಪರೋಽಭವತ್ ।
ಮಮಾಜ್ಞಯಾ ಶುಕಃ ಸಾಕ್ಷಾತ್ತ್ವದೀಯಹೃದಯಸ್ಥಿತಃ ॥ ೧೮ ॥

ತೇನ ಪ್ರಾಪ್ತಂ ಭಾಗವತಂ ಮಹಾತ್ಮ್ಯಂ ಚಾಸ್ಯ ದುರ್ಲಭಂ ।
ತ್ವಂ ವೈ ಗಂಧರ್ವಸೇನಾಯ ಪಿತ್ರೇ ವಿಕ್ರಮಭೂಪತೇಃ ॥ ೧೯ ॥

ನರ್ಮದಾಕೂಲಮಾಸಾದ್ಯ ಶ್ರಾವಯಸ್ವಂ ಕಥಾಂ ಶುಭಾಂ ।
ಹರಿಮಾಹಾತ್ಮ್ಯದಾನಂ ಹಿ ಸರ್ವದಾನಪರಂ ಸ್ಮೃತಂ ॥ ೨೦ ॥

ಸತ್ಪಾತ್ರಾಯ ಪ್ರದಾತವ್ಯಂ ವಿಷ್ಣುಭಕ್ತಾಯ ಧೀಮತೇ ।
ಬುಭುಕ್ಷಿತಾನ್ನದಾನಂ ಚ ತದ್ದಾನಸ್ಯ ಸಮಂ ನ ಹಿ ॥ ೨೧ ॥

---

೧೭. ಅಲ್ಲಿಲ್ಲೋ ಮರದ ಪೊಟ್ಟರೆಯಲ್ಲಿದ್ದ ಒಂದುಗಿಳಿ, ಈ ಕಥೆಯನ್ನು ಆದ್ಯಂತವಾಗಿ ಕೇಳಿತು. ಈ ಮಹಿಮೆಯಿಂದ ಅದಕ್ಕೆ ದೀರ್ಘಾಯುಸ್ಸು ಲಭಿಸಿತು. ಬಹು ಸುಂದರವಾಗಿದ್ದ ಆ ಗಿಳಿಯನ್ನು ಪಾರ್ವತೀದೇವಿಯು ತಾನೇ ಸಾಕುತ್ತಿದ್ದಳು.

೧೮. ಅದು ಶಿವಮಂದಿರದಲ್ಲಿಯೇ ಇರುತ್ತ ನನ್ನ ಧ್ಯಾನಾಸಕ್ತಿಯುಳ್ಳದ್ದಾಗಿತ್ತು. ನನ್ನ ಅಪ್ಪಣೆಯ ಪ್ರಕಾರ ಆ ಗಿಳಿಯೇ ಸಾಕ್ಷಾತ್ತಾಗಿ ನಿನ್ನ ಹೃದಯದಲ್ಲಿದೆ.

೧೯-೨೦. ಆದಕಾರಣ ದುರ್ಲಭವಾದ ಮಹಿಮೆಯುಳ್ಳ ಭಾಗವತವು ನಿನಗೆ ತಾನಾಗಿ ಹೊಳೆಯಿತು. ಈಗ ನೀನು ನರ್ಮದಾತೀರದ ರಾಜ್ಯಕ್ಕೆ ಅರಸಾಗಿರುವ ವಿಕ್ರಮಾದಿತ್ಯನ ತಂದೆಯಾದ ಗಂಧರ್ವಸೇನನಿಗೆ, ನಿನಗೆ ತಿಳಿದಿರುವ ಶುಭಕರವಾದ ಈ ಕಥೆಯನ್ನು ಶ್ರವಣಮಾಡಿಸು. ವಿಷ್ಣುಮಹಿಮೆಯ ಜ್ಞಾನವನ್ನು ದಾನಮಾಡುವುದು, ಎಲ್ಲ ದಾನಗಳಿಗಿಂತ ಶ್ರೇಷ್ಠವೆಂದು ತಿಳಿ.

೨೧. ಮತ್ತು ಈ ಜ್ಞಾನವನ್ನು ವಿಷ್ಣುಭಕ್ತನೂ, ಬುದ್ಧಿಶಾಲಿಯೂ ಸತ್ಪಾತ್ರನೂ ಆದವನಿಗೇ ದಾನಮಾಡಬೇಕು. ಇಂಥವನಿಗೆ ಮಾಡಿದ ಜ್ಞಾನೋಪದೇಶವು ಹಸಿದು ಬಂದವರಿಗೆ ಮಾಡಿದ ಅನ್ನದಾನಕ್ಕಿಂತ ಉತ್ತಮವೆನಿಸುವುದು.

ಇತ್ಯುಕ್ತ್ವಾಂತರ್ದಧೇ ದೇವೋ ಬೋಪದೇವಃ ಪ್ರಸನ್ನಧೀಃ ॥ ೨೨ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ದ್ವಾತ್ರಿಂಶತ್ತಮೋಽಧ್ಯಾಯಃ.



---

೨೨. ಹೀಗೆಂದು ಹೇಳಿ ಸ್ವಾಮಿಯು ಅಲ್ಲಿಯೇ ಅದೃಶ್ಯನಾದನು. ಇದನ್ನು ಕೇಳಿ ಬೋಪದೇವನೂ ನಿರ್ಮಲಾಂತಃಕರಣನಾದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದೊಳಗಿನ ಎರಡನೆಯ
ಖಂಡದಲ್ಲಿ ಕಲಿಯುಗದ ಇತಿಹಾಸಸಮುದಾಯವೆಂಬ ಮೂವತ್ತೆರಡನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ತ್ರಯಸ್ತ್ರಿಂಶೋಽಧ್ಯಾಯಃ

---

॥ ಋಷಯ ಊಚುಃ ॥

ವಾಗ್ಜಂ ಕರ್ಮ ಸ್ಮೃತಂ ಸೂತ ವೇದಪಾಠಃ ಸನಾತನಃ ।
ಬಹುತ್ವಾತ್ ಸರ್ವದೇವಾನಾಂ ಶ್ರೋತುಮಿಚ್ಛಾಮಹೇ ವಯಂ ॥ ೧ ॥

ಕೇನ ಸ್ತೋತ್ರೇಣ ವೇದಾನಾಂ ಪಾಠಸ್ಯ ಫಲಮಾಪ್ನುಯಾತ್ ।
ಪಾಪಾನಿ ವಿಲಯಂ ಯಾಂತಿ ತನ್ಮೇ ವದ ವಿಚಕ್ಷಣ ॥ ೨ ॥

॥ ಸೂತ ಉವಾಚ ॥

ವಿಕ್ರಮಾದಿತ್ಯರಾಜ್ಯೇ ತು ದ್ವಿಜಃ ಕಶ್ಚಿದಭೂದ್ಭುವಿ ।
ವ್ಯಾಧಕರ್ಮೇತಿ ವಿಖ್ಯಾತೋ ಬ್ರಾಹ್ಮಣ್ಯಾಂ ಶೂದ್ರತೋಽಭವತ್ ॥ ೩ ॥

---

## ಮೂವತ್ತಮೂರನೆಯ ಅಧ್ಯಾಯ

೧-೨. ಆಗ ಋಷಿಗಳು ಸೂತಮುನಿವರ್ಯನನ್ನು ಕೇಳುತ್ತಾರೆ—ಅನಾದಿಯಾಗಿ ಬಂದಿರುವ ವೇದಾಧ್ಯಯನವು ವಾಕ್ಕಿನಿಂದ ಆಚರಿಸುವ ಕರ್ಮವೆನಿಸುವುದು. ವೇದಗಳು ಅನೇಕವಾದುದರಿಂದ ಅವುಗಳೆಲ್ಲವನ್ನೂ ಅಧ್ಯಯನಮಾಡಿ ಫಲಹೊಂದುವುದು ಅಸಾಧ್ಯ. ಆದುದರಿಂದ ಯಾವ ಸ್ತೋತ್ರಮಾಡಿದರೆ ವೇದಾಧ್ಯಯನ ಮಾಡಿದಷ್ಟು ಫಲ ಲಭಿಸಿ, ಪಾಪಗಳೆಲ್ಲವೂ ಧ್ವಂಸವಾಗುವುವು ಎಂಬುದನ್ನು ಬುದ್ಧಿಶಾಲಿಯಾದ ನೀನು ತಿಳಿಸು" ಎಂದರು.

೩. ಆಗ ಸೂತಮುನಿವರ್ಯನು ಹೇಳುತ್ತಾನೆ—ವಿಕ್ರಮಾದಿತ್ಯನ ರಾಜ್ಯದಲ್ಲಿ ತ್ರಿವೇದಿಯಾದ ಬ್ರಾಹ್ಮಣನೊಬ್ಬನಿದ್ದನು. ಆತನ ಪತ್ನಿಯಲ್ಲಿ ಶೂದ್ರನಿಂದ ಉತ್ಪನ್ನನಾದ ಪುತ್ರನು ವ್ಯಾಧಕರ್ಮನೆಂದು ಪ್ರಸಿದ್ಧನಾಗಿದ್ದನು.

ತ್ರಿವೇದಿನೋ ದ್ವಿಜಸ್ಯೈವ ಭಾರ್ಯಾ ನಾಮ್ನಾ ಹಿ ಕಾಮಿನೀ ।
ಮೈಥುನೇಚ್ಛಾವತೀ ನಿತ್ಯಂ ಮದಘೂರ್ಣಿತಲೋಚನಾ ॥ ೪ ॥

ದ್ವಿಜಸ್ಸಪ್ತಶತೀಪಾಠೇ ವೃತ್ತ್ಯರ್ಥೀ ಕರ್ಹಿಚಿದ್ಗತಃ ।
ಗ್ರಾಮೇ ದೇವಲಕೇ ರಮ್ಯೇ ಬಹುವೈಶ್ಯನಿಷೇವಿತೇ ॥ ೫ ॥

ತತ್ರ ಮಾಸೋ ಗತಃ ಕಾಲೋ ನಾಯಯೌ ಸ ಸ್ವಮಂದಿರಂ ।
ತದಾ ತು ಕಾಮಿನೀ ದುಷ್ಟಾ ರೂಪಯೌವನಸಂಯುತಾ ॥ ೬ ॥

ದೃಷ್ಟ್ವಾ ನಿಷಾದಂ ಸಬಲಂ ಕಾಷ್ಠಭಾರೋಪಜೀವಿನಂ ।
ತಸ್ಮೈ ದತ್ವಾ ಪಂಚ ಮುದ್ರಾ ಬುಭುಜೇ ಕಾಮಪೀಡಿತಾ ॥ ೭ ॥

ತದಾ ಗರ್ಭಂ ದಧೌ ಸಾ ಚ ವ್ಯಾಧವೀರ್ಯೇಣ ಸಂಚಿತಂ ।
ಪುತ್ರೋಽಭೂದ್ದಶಮಾಸಾಂತೇ ಜಾತಕರ್ಮ ಪಿತಾಕರೋತ್ ॥ ೮ ॥

---

೪. ಆ ತ್ರಿವೇದಿ ಬ್ರಾಹ್ಮಣನ ಹೆಂಡತಿಯ ಹೆಸರು ಕಾಮಿನಿ. ಅವಳು ನಿತ್ಯವೂ ಪುರುಷ ಸಂಗಮದಲ್ಲಿ ಆಶೆಯುಳ್ಳವಳಾಗಿ ಕಾಮಮದದಿಂದ ಚಂಚಲವಾದ ದೃಷ್ಟಿಯುಳ್ಳವಳಾಗಿದ್ದಳು.

೫. ಆ ಬ್ರಾಹ್ಮಣನು ಜೀವನಾರ್ಥವಾಗಿ ಸಪ್ತಶತೀಪಠನ (ಪಾರಾಯಣ) ಮಾಡುವುದಕ್ಕಾಗಿ ಎಲ್ಲೆಲ್ಲೋ ಹೋಗುತ್ತಿದ್ದನು. ಬಹು ಸುಂದರವಾದ ದೇವಲಕ ವೆಂಬ ನಗರದಲ್ಲಿ ವೈಶ್ಯಧನಿಕರು ಹೇರಳವಾಗಿ ವಾಸಿಸುತ್ತಿದ್ದರು. ಈ ತ್ರಿವೇದಿಯು ಒಂದುಸಲ ಅಲ್ಲಿಗೆ ಹೋದನು. ಅಲ್ಲಿ ಪುರಾಣ ಶ್ರವಣಮಾಡಿಸಲು ತೊಡಗಿದ ಆತನು ಒಂದು ತಿಂಗಳು ಕಳೆದರೂ ತನ್ನ ಊರಿಗೆ ಬರಲೇ ಇಲ್ಲ.

೬-೭. ರೂಪವತಿಯೂ, ಯುವತಿಯೂ ಕೆಟ್ಟಚಾಳಿಯವಳೂ ಆದ ಆ ಕಾಮಿನಿಯು, ಒಂದುದಿನ ಸೌದೆಯ ಹೊರೆಯನ್ನು ಮಾರುವುದಕ್ಕೆ ಬಂದ ದೃಢಾಂಗನಾದ ಒಬ್ಬ ವ್ಯಾಧನನ್ನು ನೋಡಿ, ಕಾಮವಶೆಯಾಗಿ ಅವನಿಗೆ ತಾನೇ ಐದು ಸ್ವರ್ಣನಾಣ್ಯಗಳನ್ನು ಕೊಟ್ಟು ಅವನೊಡನೆ ಭೋಗಪಟ್ಟಳು.

೮. ಆ ವ್ಯಾಧನ ವೀರ್ಯದಿಂದ ಅವಳು ಆಗಲೇ ಗರ್ಭವನ್ನು ಧರಿಸಿದಳು. ಗರ್ಭವು ಕ್ರಮವಾಗಿ ಬೆಳೆದು ಹತ್ತುತಿಂಗಳಾಗುತ್ತಲೆ ಗಂಡು ಮಗುವನ್ನು ಹೆತ್ತಳು. ತಂದೆ ಎನಿಸಿದ ತ್ರಿವೇದಿ ಬ್ರಾಹ್ಮಣನು ಅದಕ್ಕೆ ಜಾತಕರ್ಮಾದಿಗಳನ್ನು ಮಾಡಿದನು.

ದ್ವಾದಶಾಬ್ದೇ ಗತೇ ಕಾಲೇ ಸ ಧೂರ್ತೋ ವೇದವರ್ಜಿತಃ ।
ವ್ಯಾಧಕರ್ಮಕರೋ ನಿತ್ಯಂ ವ್ಯಾಧಕರ್ಮಾ ಹ್ಯತೋಭವತ್ ॥ ೯ ॥

ನಿಷ್ಕಾಸಿತೌ ದ್ವಿಜೇನೈವ ಮಾತೃಪುತ್ರೌ ದ್ವಿಜಾಧಮೌ ।
ತ್ರಿಪಾಠೀ ಬ್ರಹ್ಮಚರ್ಯಂ ತು ಕೃತವಾನ್ ಧರ್ಮತತ್ಪರಃ ॥ ೧೦ ॥

ಪ್ರತ್ಯಹಂ ಚಂಡಿಕಾಪಾಠಂ ಕೃತ್ವಾ ವಿಂಧ್ಯಗಿರೌ ವಸನ್ ।
ಜೀವನ್ಮುಕ್ತೋಭವಚ್ಛೀಘ್ರಂ ಜಗದಂಬಾಪ್ರಸಾದತಃ ॥ ೧೧ ॥

ನಿಷಾದಸ್ಯ ಗೃಹೇ ಚೋಭೌ ವನೇ ಗತ್ವೋಷತುರ್ಮುದಾ ।
ಪ್ರತ್ಯಹಂ ಜಾರಭಾವೇನ ಬಹುದ್ರವ್ಯಮುಪಾರ್ಜಿತಂ ॥ ೧೨ ॥

---

೯. ಹನ್ನೆರಡು ವರ್ಷ ವಯಸ್ಸಾದರೂ ಆ ಬಾಲಕನು ವೇದಾಧ್ಯಯನ ಮಾಡಲು ಒಪ್ಪದೆ, ತುಂಟನಾಗಿ ಬೇಟೆಗಾರರಂತೆ ನಿತ್ಯವೂ ಪ್ರಾಣಿಹಿಂಸಾ ನಿರತನಾಗಿದ್ದುದರಿಂದ ಅವನಿಗೆ ವ್ಯಾಧಕರ್ಮನೆಂದೇ ಹೆಸರಾಯಿತು.

೧೦. ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದ್ದರೂ, ಅಧಮರಾದ ಆ ತಾಯಿ ಮಗ ಇಬ್ಬರನ್ನೂ ಆ ಬ್ರಾಹ್ಮಣನು ತನ್ನ ಮನೆಯಿಂದ ಹೊರಡಿಸಿ, ತಾನು ಧರ್ಮಾಸಕ್ತನಾಗಿ ಬ್ರಹ್ಮಚರ್ಯವನ್ನು ಅವಲಂಬಿಸಿದನು.

೧೧. ಹೀಗೆ ಬ್ರಹ್ಮಚರ್ಯನಿರತನಾಗಿ ವಿಂಧ್ಯಪರ್ವತದಲ್ಲಿ ವಾಸಿಸುತ್ತಾ ಪ್ರತಿನಿತ್ಯವೂ (ವಿಂಧ್ಯವಾಸಿನಿ) ಚಂಡಿಕಾಂಬೆಯನ್ನು ಸ್ತುತಿಸುತ್ತಿದ್ದನು. ಕೆಲವು ದಿನಗಳಲ್ಲಿಯೇ ಆತನಿಗೆ ದೇವಿಯ ಅನುಗ್ರಹವು ಲಭಿಸಿ ಜೀವನ್ಮುಕ್ತಿಯನ್ನು ಹೊಂದಿದನು.

೧೨. ಇತ್ತ ಮನೆಯಿಂದ ಹೊರಡಿಸಲ್ಪಟ್ಟ ತಾಯಿ ಮಗ ಇಬ್ಬರೂ ಕಾಡಿಗೆ ಹೋಗಿ, ಆ ವ್ಯಾಧನ ಮನೆಯಲ್ಲಿಯೇ ಸೇರಿಕೊಂಡು ಆನಂದದಿಂದ ಇರಹತ್ತಿದರು. ಅವಳು ತನ್ನ ಕುಲಟಾವೃತ್ತಿಯಿಂದ ನಿತ್ಯವೂ ತುಂಬ ಧನವನ್ನು ಗಳಿಸುವಳು.

ವ್ಯಾಧಕರ್ಮಾ ತು ಚೌರ್ಯೇಣ ಪಿತೃಮಾತೃಪ್ರಿಯಂಕರಃ ।
ಏಕದಾ ದೈವಯೋಗೇನ ಶಿವಾಮಂದಿರಮಾಯಯೌ ॥ ೧೩ ॥

ಚೌರವೃತ್ತಿಪರೋ ಧೂರ್ತಃ ಸ್ತ್ರಿಯಾ ಭೂಷಣಮಾಹರತ್ ।
ಕೈಶ್ಚಿತ್ ಜ್ಞಾತಃ ಸ ನೋ ಧೂರ್ತೋ ಬಹುಮಾಯಾವಿಶಾರದಃ ॥ ೧೪ ॥

ಕದಾಚಿತ್ಪ್ರಾಪ್ತವಾಂಸ್ತತ್ರ ದ್ವಿಜವಸ್ತ್ರಸಮುದ್ಗತಂ ।
ಶ್ರುತಮಾದಿಚರಿತ್ರಂ ಹಿ ತೇನ ಶಬ್ದಪ್ರಿಯೇಣ ವೈ ॥ ೧೩ ॥

ಪಾಠಪುಣ್ಯಪ್ರಭಾವೇಣ ಧರ್ಮಬುದ್ಧಿಸ್ತತೋಽಭವತ್ ।
ದತ್ವಾ ಚೌರ್ಯಧನಂ ಸರ್ವಂ ತಸ್ಮೈ ವಿಪ್ರಾಯ ಪಾಠಿನೇ ॥ ೧೬ ॥

ಶಿಷ್ಯತ್ವಮಗಮತ್ತತ್ರಾಕ್ಷರಮೈಶಂ ಜಜಾಪ ಹ ।
ಬೀಜಮಂತ್ರಪ್ರಭಾವೇಣ ತದಂಗಾತ್ಪಾಪಮುಲ್ಬಣಂ ॥ ೧೭ ॥

---

೧೩. ಮಗನಾದ ವ್ಯಾಧಕರ್ಮನು ಕಳ್ಳತನಮಾಡಿ ದ್ರವ್ಯಸಂಪಾದಿಸಿ, ಆ ವ್ಯಾಧನಿಗೂ ತಾಯಿಗೂ ಅಚ್ಚುಮೆಚ್ಚಾಗಿದ್ದನು. ಅವನು ಒಂದುದಿನ ಅದೃಷ್ಟ ವಶದಿಂದ ಚಂಡಿಕಾದೇವಾಲಯಕ್ಕೆ ಹೋದನು.

೧೪-೧೫. ಕಳ್ಳತನದಲ್ಲಿ ಆಸಕ್ತನೂ ಮೋಸಗಾರನೂ ಆದ ಆ ವ್ಯಾಧಕರ್ಮನು ಅಲ್ಲಿ ಒಬ್ಬ ಹೆಂಗಸಿನ ಒಡವೆಗಳನ್ನು ಅಪಹರಿಸಿದನು. ಅವನು ಮೋಸಗಾರನೆಂಬುದು ಕೆಲವರಿಗೆ ಗೊತ್ತಾಯಿತು. ಮಾಯಾಮೋಸಗಳಲ್ಲಿ ಚತುರನಾದ ಅವನು ಹೇಗೋ ತಪ್ಪಿಸಿಕೊಂಡನು. ಮತ್ತೆ ಯಾವಾಗಲೋ ಒಂದುಸಾರಿ ಒಬ್ಬ ಬ್ರಾಹ್ಮಣನು ಬಟ್ಟೆಯಲ್ಲಿ ಸುತ್ತಿ ಇಟ್ಟಿದ್ದ ಆದಿಚರಿತ್ರೆ ಎಂಬ ಶಾಸ್ತ್ರಗ್ರಂಥವನ್ನು ಅವನು ಅಪಹರಿಸಿದನು.

೧೬. ಶಬ್ದಪ್ರಿಯನಾದ ಇವನು ಅದನ್ನು ಕ್ರಮವಾಗಿ ಪಠಿಸಲಾಗಿ, ಅದರ ಮಹಿಮೆಯಿಂದ ಅವನಿಗೆ ಧರ್ಮಬುದ್ಧಿಯು ಉತ್ಪನ್ನವಾಯಿತು. ಆಗ ಅವನು ತಾನು ಕದ್ದಿದ್ದ ಹಣವೆಲ್ಲವನ್ನೂ ಆ ಗ್ರಂಥದ ಯಜಮಾನನಾದ ಬ್ರಾಹ್ಮಣನಿಗೆ ಕೊಟ್ಟನು.

೧೭. ಅನಂತರ ತಾನೂ ಅವನ ಶಿಷ್ಯವೃತ್ತಿಯನ್ನು ಅವಲಂಬಿಸಿದನು. ಅಲ್ಲಿಯೇ ಇದ್ದು ಈಶ್ವರ ಸಂಬಂಧವಾದ ಅಕ್ಷರವನ್ನು (ಎಂದರೆ ಶಿವ ಪಂಚಾಕ್ಷರೀ ಮಂತ್ರವನ್ನು) ಜಪಿಸಿದನು.

ನಿಃಸೃತಂ ಕೃಮಿರೂಪೇಣ ಬಹುವರ್ಣೇನ ತಾಪಿತಂ
ತ್ರಿವರ್ಷಾಂತೇ ಚ ನಿಷ್ಪಾಪೋ ಬಭೂವ ದ್ವಿಜಸತ್ತಮಃ　　॥ ೧೮ ॥

ಪಠಿತ್ವಾಕ್ಷರಮಾಲಾಂ ಚ ಜಬಾಪಾದಿಚರಿತ್ರಕಂ ।
ದ್ವಾದಶಾಬ್ದಮಿತೇ ಕಾಲೇ ಕಾಶ್ಯಾಂ ಗತ್ವಾ ಸ ತು ದ್ವಿಜಃ　　॥ ೧೯ ॥

ಅನ್ನಪೂರ್ಣಾಂ ಮಹಾದೇವೀಂ ತುಷ್ಟಾವ ಪರಯಾಮುದಾ ।
ರೋಚನಾದ್ಯೈಶ್ಚ ಸಂಪೂಜ್ಯಾಂ ಮುನಿದೇವನಿಷೇವಿತಾಂ　　॥ ೨೦ ॥

ನಿತ್ಯಾನಂದಕರೀ ವರಾಭಯಕರೀ ಸೌಂದರ್ಯರತ್ನಾಕರೀ
ನಿರ್ಧೂತಾಖಿಲಪಾಪಪಾವನಕರೀ ಕಾಶೀಪುರಾಧೀಶ್ವರೀ ।

---

೧೮ ಆ ಮಂತ್ರಜಪದ ಮಹಿಮೆಯಿಂದ ಅವನ ದೇಹದಲ್ಲಿ ಆವರಿಸಿದ್ದ ಘೋರಪಾಪವೆಲ್ಲ ನಾನಾವರ್ಣದ ಕ್ರಿಮಿರೂಪದಿಂದ ಹೊರಕ್ಕೆ ಬಂದಿತು. ಮತ್ತು ತಾಪಪಡಿಸಿತು. ಹೀಗೆ ಮೂರುವರ್ಷ ಕಳೆಯಲು ಅನಂತರ ಪಾಪರಹಿತನಾಗಿ ಪರಿಶುದ್ಧನಾದ ಬ್ರಾಹ್ಮಣೋತ್ತಮನೆನಿಸಿದನು.

೧೯. ಆಮೇಲೆ ಅವನು ಬೀಜಾಕ್ಷರ ಸಹಿತವಾಗಿ ಆದಿ ಚರಿತ್ರವವನ್ನು ಜಪಿಸುತ್ತಿದ್ದನು. ಹೀಗೆ ಮಾಡುತ್ತಾ ಹನ್ನೆರಡು ವರ್ಷಗಳಲ್ಲಿ ಆ ಬ್ರಾಹ್ಮಣನು ಕಾಶೀ ಪಟ್ಟಣವನ್ನು ಸೇರಿದನು.

೨೦. ಅಲ್ಲಿ ಮುನಿಗಳು ದೇವತೆಗಳು ಮೊದಲಾದವರು ಗಂಧ ಪುಷ್ಪಾದಿಗಳನ್ನು ಅರ್ಚಿಸಿ ಪೂಜೆಮಾಡುತ್ತಿರುವ ಅನ್ನಪೂರ್ಣಾದೇವಿಯನ್ನು ಸಂದರ್ಶಿಸಿ ಮಹಾ ಆನಂದದಿಂದ ಶ್ಲೋಕರೂಪವಾಗಿ ಸ್ತೋತ್ರಮಾಡಿದನು.

೨೧. " ಶಾಶ್ವತವಾದ ಆನಂದವನ್ನುಂಟುಮಾಡುವವಳೂ, ವರದ, ಅಭಯ ಸಂಜ್ಞಕವಾದ ಹಸ್ತಗಳನ್ನುಳ್ಳವಳೂ, ಸೌಂದರ್ಯಜಲಧಿಯೆನಿಸಿದವಳೂ, ಸಮಸ್ತ ಪಾಪಗಳನ್ನು ದೂರಮಾಡಿ ಪರಿಶುದ್ಧಮಾಡತಕ್ಕವಳೂ, " ಕಾಶೀಪಟ್ಟಣದ ಅಧಿದೇವಿ

ನಾನಾಲೋಕಕರೀ ಮಹಾಭಯಹರೀ ವಿಶ್ವಂಭರೀ ಸುಂದರೀ
ವಿದ್ಯಾಂ ದೇಹಿ ಕೃಪಾವಲಂಬನಕರೀ ಮಾತಾನ್ನಪೂರ್ಣೇಶ್ವರೀ ॥ ೨೦ ॥

ಸ ಇತ್ಯಷ್ಟೋತ್ತರಂ ಜಪ್ತ್ವಾ ಧ್ಯಾನಸ್ತಿಮಿತಲೋಚನಃ ।
ಸುಷ್ವಾಪ ತತ್ರ ಮುದಿತಃ ಸ್ವಪ್ನೇ ಪ್ರಾದುರಭೂಚ್ಛಿವಾ ॥ ೨೨ ॥

ದತ್ವಾ ತಸ್ಮೈ ಹಿ ಋಗ್ವಿದ್ಯಾಂ ಪುನರಂತರಧೀಯತ ।
ಉತ್ಥಾಯ ಸ ದ್ವಿಜೋ ಧೀಮಾಲ್ಲಬ್ಧ್ವಾ ವಿದ್ಯಾಮನುತ್ತಮಾಂ ॥ ೨೩ ॥

ವಿಕ್ರಮಾದಿತ್ಯಭೂಪಸ್ಯ ಯಜ್ಞಾಚಾರ್ಯೋ ಬಭೂವ ಹ ।
ಯಜ್ಞಾಂತೇ ಯೋಗಮಾಸ್ಥಾಯ ಜಗಾಮ ತು ಹಿಮಾಲಯಂ ॥ ೨೪ ॥

---

ಯೂ, ಅನೇಕ ಲೋಕಗಳನ್ನು ನಿರ್ಮಿಸತಕ್ಕವಳೂ, ಮಹಾಭಯವನ್ನು ಹೋಗಲಾಡಿಸತಕ್ಕವಳೂ ಜಗತ್ತನ್ನು ಪೋಷಿಸುವವಳೂ, ಸುಂದರಿಯೂ, ದಯೆಗೆ ಆಶ್ರಯಳೂ, ಲೋಕಜನನಿಯೂ, ಆದ ಅನ್ನಪೂರ್ಣಾದೇವಿಯೇ! ವಿದ್ಯೆಯನ್ನು ಕರುಣಿಸು." (ಇದು ಆ ಸ್ತೋತ್ರದ ಅರ್ಥ)

೨೨ ಈ ಸ್ತೋತ್ರವನ್ನು ನೂರೆಂಟುಸಾರಿ ಜಪಮಾಡಿ ಧ್ಯಾನಯೋಗದಿಂದ ನಿಶ್ಚಲದೃಷ್ಟಿಯುಳ್ಳವನಾಗಿ ಸಂತೋಷದಿಂದ ಆ ಮಂದಿರದಲ್ಲೇ ಮಲಗಿದನು. ಅವನ ಸ್ವಪ್ನದಲ್ಲಿ ದೇವಿಯು ಪ್ರತ್ಯಕ್ಷಳಾಗಿ ಅವನಿಗೆ ವೇದವಿದ್ಯೆಯನ್ನು ಕರುಣಿಸಿ ಕೂಡಲೆ ಅದೃಶ್ಯಳಾದಳು.

೨೩. ಬುದ್ಧಿಶಾಲಿಯಾದ ಆ ಬ್ರಾಹ್ಮಣನು ಎಚ್ಚರಗೊಂಡು ಎದ್ದು. ಶ್ರೇಷ್ಠವಾದ ಆ ವಿದ್ಯೆಯನ್ನು ಗ್ರಹಿಸಿ, ಕಾಲಕ್ರಮದಲ್ಲಿ ವಿಕ್ರಮಾದಿತ್ಯನ ಯಜ್ಞದಲ್ಲಿ ಆಚಾರ್ಯನಾಗಿ ನಿಯಮಿತನಾದನು.

೨೪. ಆ ಯಜ್ಞಮುಗಿಯುತ್ತಲೆ ಯೋಗಾರೂಢನಾಗುವುದಕ್ಕಾಗಿ ಹಿಮಾಲಯ ಪರ್ವತಕ್ಕೆ ತೆರಳಿದನು

**ಏತತ್ತೇ ವರ್ಣಿತಂ ವಿಪ್ರ ಪುಣ್ಯಮಾದಿಚರಿತ್ರಕಂ ।**
**ಬ್ರಹ್ಮೀಭೂಯ ಯಥಾ ವಿಪ್ರೋ ಲೇಭೇ ಸಿದ್ಧಿಮನುತ್ತಮಾಮ್ ॥ ೩೫ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಪ್ರಥಮ ಚರಿತ್ರವರ್ಣನಂ ನಾಮ ತ್ರಯಸ್ತ್ರಿಂಶೋಽಧ್ಯಾಯಃ.**



---

೩೫. "ಅಯ್ಯಾ ವಿಪ್ರನೇ ! ಆ ಬ್ರಾಹ್ಮಣನು ಯೋಗಸಿದ್ಧಿಯನ್ನು ಪಡೆದು ಬ್ರಹ್ಮೈಕ್ಯನಾಗಲು ಕಾರಣವೆನಿಸಿದ ಪುಣ್ಯಕರವಾದ ಆದಿಚರಿತ್ರವನ್ನು ನಿನಗೆ ವಿವರಿಸಿ ಹೇಳಿದ್ದೇನೆ" ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಪ್ರತಿಸರ್ಗಪರ್ವದ ಎರಡನೆಯ ಖಂಡದಲ್ಲಿನ ಕಲಿಯುಗದ ಇತಿಹಾಸಸಮುದಾಯದಲ್ಲಿ ಆದಿಚರಿತ್ರವರ್ಣನೆಯೆಂಬ ಮೂವತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ
## ಚತುಸ್ತ್ರಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಉಜ್ಜಯಿನ್ಯಾಂ ಪುರಾ ವಿಪ್ರ ರಾಜನ್ಯಃ ಸರ್ವಹಿಂಸಕಃ ।
ಬಭೂವ ಮದ್ಯಮಾಂಸಾಶೀ ಭೀಮವರ್ಮೇತಿ ವಿಶ್ರುತಃ ॥ ೧ ॥

ಮಾಂಸಲೋಭೇನ ಸ ಖಲಃ ಸೂಕರಾನ್ ಗ್ರಾಮಕುಕ್ಕುಟಾನ್ ।
ಹತ್ವಾ ಚಾಭಕ್ಷಯತ್ಪಾಪೀ ವೇಶ್ಯಾಸಂಗಪರಾಯಣಃ ॥ ೨ ॥

ನರಮಾಸಂ ಸ ಕ್ರವ್ಯಾದಸ್ತ್ಯಕ್ತ್ವಾನ್ಯಾನ್ ಭಕ್ಷಕೋಽಭವತ್ ।
ಏವಂ ಬಹುಗತೇ ಕಾಲೇ ಭೀಮವರ್ಮಾ ಮಹಾಧಮಃ ।
ವಿಸೂಚ್ಯಗ್ನಿವಶಂ ಯಾತೋ ಮಮಾರ ಚ ಯುವಾಪಿ ಸಃ ॥ ೩ ॥

---

## ಮೂವತ್ತನಾಲ್ಕನೆಯ ಅಧ್ಯಾಯ

೧ ಸೂತಮುನಿವರ್ಯನು ಹೇಳುತ್ತಾನೆ—ಅಯ್ಯಾ ಬ್ರಾಹ್ಮಣಾ ! ಕೇಳು, ಪೂರ್ವದಲ್ಲಿ ಉಜ್ಜಯಿನಿಯಲ್ಲಿ ಸರ್ವರಿಗೂ ಹಿಂಸೆಕೊಡತಕ್ಕವನೂ ಮದ್ಯಮಾಂಸಗಳನ್ನು ಸೇವಿಸುವವನೂ ಆದ, ಭೀಮವರ್ಮನೆಂಬ ಪ್ರಸಿದ್ಧನಾದ ಕ್ಷತ್ರಿಯನಿದ್ದನು.

೨ ಪಾಪಿಷ್ಠನಾದ ಆ ನೀಚನು ಮಾಂಸದ ಆಶೆಯಿಂದ ಹಂದಿಗಳು, ಕೋಳಿಗಳು ಮುಂತಾದುವನ್ನೆಲ್ಲಾ ಕೊಂದು ತಿನ್ನುತ್ತಿದ್ದನು. ಅಲ್ಲದೆ ಸದಾ ವೇಶ್ಯೆಯರ ಸಹವಾಸದಲ್ಲಿ ಆಸಕ್ತನಾಗಿದ್ದನು.

೩. ರಾಕ್ಷಸಸದೃಶನಾದ ಅವನು ಮನುಷ್ಯರ ಮಾಂಸ ಹೊರತು ಮಿಕ್ಕದ್ದನ್ನೆಲ್ಲಾ ತಿನ್ನುತ್ತಿದ್ದನು. ಹೀಗೆ ಬಹು ದಿನಗಳು ಕಳೆದಮೇಲೆ ನೀಚನಾದ ಅಭೀಮ

ಕಾರಿತಶ್ಚಂಡಿಕಾಪಾಠಸ್ತೇನ ದುಷ್ಟೇನ ಭೀರುಣಾ ।
ತಸ್ಯಪುಣ್ಯಪ್ರಭಾವೇನ ನಾಗತೋ ನರಕಾನ್ ಪ್ರತಿ ॥ ೪ ॥

ಪುನಃ ಕ್ಷತ್ರತ್ವಮಗಮನ್ಮಾಗಧೇ ಸ ಮಹೀಪತಿಃ ।
ಮಹಾನಂದೀತಿ ವಿಖ್ಯಾತೋ ರಾಜನೀತಿಪರಾಯಣಃ ॥ ೫ ॥

ಜಾತಿಸ್ಮರೋ ಬಭೂವಾಸೌ ವೇದಧರ್ಮಪರಾಯಣಃ ।
ಕಾತ್ಯಾಯನಸ್ಯ ಶಿಷ್ಯೋಽಭೂನ್ಮಹಾಶಾಕ್ತಸ್ಯ ಧೀಮತಃ ॥ ೬ ॥

ತಸ್ಮೈ ನೃಪಾಯ ಸ ಮುನಿರ್ದತ್ವಾ ಮಧ್ಯಚರಿತ್ರಕಂ ।
ಸಬೀಜಂ ಪುನರಾಗತ್ಯ ವಿಂಧ್ಯೇ ಶಕ್ತಿಪರೋಽಭವತ್ ॥ ೭ ॥

ನೃಪೋಪಿ ಪ್ರತ್ಯಹಂ ದೇವೀಂ ಮಹಾಲಕ್ಷ್ಮೀಂ ಸನಾತನೀಂ ।
ರೋಚನಾದ್ಯೈಶ್ಚ ಸಂಪೂಜ್ಯ ಜಪನ್ಮಧ್ಯಚರಿತ್ರಕಂ ॥ ೮ ॥

---

ವರ್ಮನು ಯುವಕನಾಗಿದ್ದಾಗಲೇ ವಾಂತಿಭೇದಿ (ವಿಷೂಚಿ) ರೋಗಕ್ಕೆ ತುತ್ತಾಗಿ ಮೃತನಾದನು.

೪. ನರಕಭಯಗ್ರಸ್ತನಾದ ಆ ದುಷ್ಟನು ಸಾಯುವ ಕಾಲದಲ್ಲಿ ಚಂಡಿಕಾ ಸ್ತೋತ್ರವನ್ನು ಪಠಿಸಿದನು. ಆ ಸ್ತೋತ್ರದ ಪುಣ್ಯಪ್ರಭಾವದಿಂದ ಅವನಿಗೆ ನರಕ ಪ್ರಾಪ್ತಿ ತಪ್ಪಿತು.

೫. ಅವನು ಆ ಮುಂದಿನ ಜನ್ಮದಲ್ಲಿ ಮಹಾನಂದಿ ಎಂಬ ಕ್ಷತ್ರಿಯನಾಗಿ ಜನಿಸಿ, ರಾಜನೀತಿಜ್ಞನಾದ ಮಗಧದೇಶಾಧಿಪತಿಯೆನಿಸಿ ಪ್ರಸಿದ್ಧನಾದನು.

೬. ವೇದಧರ್ಮಾಸಕ್ತನಾದ ಆ ಮಹಾನಂದಿ ರಾಜನು ಜನ್ಮಾಂತರ ಸ್ಮರಣ ಶಕ್ತಿಯುಳ್ಳವನಾಗಿ, ಬುದ್ಧಿಶಾಲಿಯೂ ಶಕ್ತಿದೇವತಾರಾಧಕನೂ ಆದ ಕಾತ್ಯಾಯನನೆಂಬ ಮುನಿಯ ಶಿಷ್ಯನಾದನು.

೭. ಆ ಕಾತ್ಯಾಯನಮುನಿಯು ಈತನ ರಾಜಧಾನಿಗೆ ಬಂದು ಈ ರಾಜನಿಗೆ ಬೀಜಾಕ್ಷರಮಂತ್ರ ಸಹಿತ ಮಧ್ಯಚರಿತ್ರೆಯನ್ನು ಉಪದೇಶಿಸಿ, ಮತ್ತೆ ವಿಂಧ್ಯಪರ್ವತಕ್ಕೆ ಹೋಗಿ ಶಕ್ತಿದೇವತಾ ಧ್ಯಾನಾಸಕ್ತನಾದನು.

೮. ಆ ರಾಜನು ಪುರಾತನೆಯಾದ ಮಹಾಲಕ್ಷ್ಮೀ ದೇವಿಯನ್ನು ಪ್ರತಿನಿತ್ಯವೂ ಗಂಧ ಪುಷ್ಪಾದಿಗಳಿಂದ ಅರ್ಚಿಸಿ, ಮಧ್ಯಚರಿತ್ರವನ್ನು ಪಠಿಸಿ ಜಪಮಾಡುತ್ತಾ ಇದ್ದನು.

ಪುಣ್ಯಕ್ಷೇತ್ರತ್ವಮಗಮನ್ಮಹಾಮಾಯಾಪ್ರಸಾದತಃ ।
ಶೂದ್ರಭಾವಂ ಪರಿತ್ಯಜ್ಯ ಕ್ಷತ್ರಭಾವಮುಪಾಗತಃ ॥ ೯ ॥

ದ್ವಾದಶಾಬ್ದಾಂತರೇ ಪ್ರಾಪ್ತಸ್ತದ್ಗುರುಃ ಶಕ್ತಿತತ್ಪರಃ ।
ಲಕ್ಷಚಂಡೀಂ ನೃಪಾದೇವ ಕಾರಯಾಮಾಸ ಧರ್ಮತಃ ॥ ೧೦ ॥

ತದಾ ಪ್ರಾದುರಭೂದ್ದೇವೀ ಜಗದಂಬಾ ಸನಾತನೀ ।
ನೃಪಾಯ ಧರ್ಮಮರ್ಥಂ ಚ ಕಾಮಂ ಮೋಕ್ಷಂ ಹಿ ಚಾದದಾತ್ ॥ ೧೧ ॥

ಮಹಾನಂದೀ ಮಹಾಭಾಗೋ ಭುಕ್ತ್ವಾ ಭೋಗಂ ಸುರೇಪ್ಸಿತಂ ।
ಅಂತೇ ಜಗಾಮ ಪರಮಂ ಲೋಕಂ ದೇವನಮಸ್ಕೃತಂ ॥ ೧೨ ॥

ಇತಿ ತೇ ಕಥಿತಾ ವಿಪ್ರ ಯತ್ಪ್ರೋಕ್ತಂ ಯಜುಷೋ ಗತಿಃ ।
ಸಾ ವೈ ಮಧ್ಯಚರಿತ್ರೇಣ ಪ್ರಾಪ್ತಾ ಶೂದ್ರನೃಪೇಣ ವೈ ॥ ೧೩ ॥

---

೯-೧೦. ಕಾಲಕ್ರಮದಲ್ಲಿ ಆ ಮಹಾಮಾಯೆಯ ಕೃಪೆಯಿಂದ ಪುಣ್ಯಾತ್ಮನೆನಿಸಿ, ಜಾತಿಸ್ಮರತ್ವದ ಶೂದ್ರತ್ವದಿಂದ ಕ್ಷತ್ರಿಯತ್ವಕ್ಕೆ ಏರಿದನು. ಇದಾದ ಹನ್ನೆರಡು ವರ್ಷ ಕಳೆಯಲು ; ಶಕ್ತಿಪೂಜಕನೂ, ಗುರುವೂ ಆದ ಕಾತ್ಯಾಯನ ಮುನಿವರ್ಯನು ಪುನಃ ಅಲ್ಲಿಗೆ ಬಂದನು. ಆ ಗುರುವು ಧರ್ಮಶಾಸ್ತ್ರ ಪ್ರಕಾರ ರಾಜನಿಂದ ಲಕ್ಷಚಂಡೀ ಹೋಮ ಜಪ ಇವನ್ನು ಮಾಡಿಸಿದನು.

೧೧. ಇದರಿಂದ ಪುರಾತನೆಯೂ, ಲೋಕಮಾತೆಯೂ ಆದ ದೇವಿಯು ಪ್ರತ್ಯಕ್ಷಳಾಗಿ ಆ ರಾಜನಿಗೆ ಧರ್ಮ ಅರ್ಥ ಕಾಮ ಮೋಕ್ಷ ಎಂಬ ನಾಲ್ಕುವಿಧ ಪುರುಷಾರ್ಥಗಳನ್ನೂ ಕರುಣಿಸಿದಳು.

೧೨. ಪೂಜ್ಯನಾದ ಮಹಾನಂದಿ ರಾಜನು ದೇವತೆಗಳೂ ಆಶಿಸುವಂತಹ ದಿವ್ಯಭೋಗಗಳನ್ನು ಅನುಭವಿಸಿ, ಶರೀರಾವಸಾನವಾಗುತ್ತಲೆ ದೇವಪೂಜ್ಯವೂ ಶ್ರೇಷ್ಠವೂ ಆದ ಪರಲೋಕಕ್ಕೆ ತೆರಳಿದನು.

೧೩. ಶೂದ್ರವೃತ್ತಿಯ ನೃಪನಿಗೆ ಮಧ್ಯಚರಿತ್ರಪಠನದಿಂದ ಯಜುರ್ವೇದದ ಸಂಗತಿಯು ಪ್ರಾಪ್ತವಾದ ವಿಚಾರವನ್ನು ನಿನಗೆ ಹೇಳಿ ಆಯಿತು.

ಇತ್ಯೇವಂ ವರ್ಣಿತಂ ವಿಪ್ರ ಮಾಹಾತ್ಮ್ಯಂ ಮುನಿವರ್ಣಿತಂ ॥ ೧೪ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ
ಚತುಸ್ತ್ರಿಂಶೋಽಧ್ಯಾಯಃ.



---

೧೪. "ಅಯ್ಯಾ ವಿಪ್ರನೇ! ಈರೀತಿಯಾಗಿ ವ್ಯಾಸರು ವರ್ಣಿಸಿದ ಈ ಮಾಹಾತ್ಮ್ಯವನ್ನು ನಾನು ನಿನಗೆ ಹೇಳಿದ್ದೇನೆ" ಎಂದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಪ್ರತಿಸರ್ಗಪರ್ವದ ಎರಡನೆಯ ಖಂಡದಲ್ಲಿ
ಕಲಿಯುಗದ ಇತಿಹಾಸಸಮುದಾಯವೆಂಬ ಮೂವತ್ತನಾಲ್ಕನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಪ್ರತಿಸರ್ಗಪರ್ವಣಿ ದ್ವಿತೀಯಖಂಡೇ

## ಪಂಚತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

ಚಿತ್ರಕೂಟೇ ಗಿರೌ ರಮ್ಯೇ ನಾನಾಧಾತುವಿಚಿತ್ರಿತೇ ।
ತತ್ರಾವಸನ್ಮಹಾಪ್ರಾಜ್ಞ ಉಪಾಧ್ಯಾಯಃ ಪತಂಜಲಿಃ ॥ ೧ ॥

ವೇದವೇದಾಂಗತತ್ವಜ್ಞೋ ಗೀತಾಶಾಸ್ತ್ರಪರಾಯಣಃ ।
ವಿಷ್ಣುಭಕ್ತಃ ಸತ್ಯಸಂಧೋ ಭಾಷ್ಯಶಾಸ್ತ್ರವಿಶಾರದಃ ॥ ೨ ॥

ಕದಾಚಿತ್ಸ ತು ಶುದ್ಧಾತ್ಮಾ ಗತಸ್ತೀರ್ಥಾಂತರಂ ಪ್ರತಿ ।
ಕಾಶ್ಯಾಂ ಕಾತ್ಯಾಯನೇನೈವ ತಸ್ಯ ವಾದೋ ಮಹಾನಭೂತ್ ॥ ೩ ॥

---

## ಮೂವತ್ತೈದನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಗೈರಿಕಾದಿ ಧಾತುವಸ್ತುಗಳಿಂದ ವಿಚಿತ್ರವೂ, ಸುಂದರವೂ ಆಗಿರುವ ಚಿತ್ರಕೂಟವೆಂಬ ಪರ್ವತದಲ್ಲಿ ಪ್ರಾಜ್ಞನಾದ ಪತಂಜಲಿಯು ಉಪಾಧ್ಯಾಯನಾಗಿ ಶಿಷ್ಯರಿಗೆ ಪಾಠಪ್ರವಚನಮಾಡಿಸುತ್ತಾ ಇದ್ದನು.

೨. ಇವನು ವೇದ ವೇದಾಂಗ ಇವುಗಳ ತತ್ವವನ್ನು ತಿಳಿದವನೂ, ಗೀತಾ ಶಾಸ್ತ್ರದಲ್ಲಿ ಆಸಕ್ತನೂ, ವಿಷ್ಣುಭಕ್ತನೂ, ಸತ್ಯಸಂಧನೂ, ಆಗಿ ವ್ಯಾಕರಣದ ಮಹಾ ಭಾಷ್ಯದಲ್ಲಿ ವಿಶಾರದನೆನಿಸಿದ್ದನು.

೩. ಪರಿಶುದ್ಧಾಂತರಂಗವುಳ್ಳ ಈ ಪತಂಜಲಿಯು ಒಂದುಸಲ ತೀರ್ಥಯಾತ್ರೆ ಹೊರಟು ಕಾಶೀಪಟ್ಟಣಕ್ಕೆ ಬಂದನು. ಅಲ್ಲಿ ಕಾತ್ಯಾಯನನೊಡನೆ ತೀವ್ರವಾಗಿ ವಾದಮಾಡಬೇಕಾಯಿತು

**ವರ್ಷಾಂತೇ ಚ ತದಾ ವಿಪ್ರೋ ದೇವೀಭಕ್ತೇನ ನಿರ್ಜಿತಃ ।**
**ಲಜ್ಜಿತಃ ಸ ತು ಧರ್ಮಾತ್ಮಾ ಸಂತುಷ್ಟಾವ ಸರಸ್ವತೀಂ ॥ ೪ ॥**

**॥ ಪತಂಜಲಿರುವಾಚ ॥**

**ನಮೋ ದೇವ್ಯೈ ಮಹಾಮೂರ್ತ್ಯೈ ಸರ್ವಮೂರ್ತ್ಯೈ ನಮೋನಮಃ ।**
**ಶಿವಾಯೈ ಸರ್ವಮಾಂಗಲ್ಯೈ ವಿಷ್ಣುಮಾಯೇ ಚ ತೇ ನಮಃ ॥ ೫ ॥**

**ತ್ವಮೇವ ಶ್ರದ್ಧಾ ಬುದ್ಧಿಸ್ತ್ವಂ ಮೇಧಾ ವಿದ್ಯಾ ಶಿವಂಕರೀ ।**
**ಶಾಂತಿರ್ವಾಣೀ ತ್ವಮೇವಾಸಿ ನಾರಾಯಣಿ ನಮೋನಮಃ ॥ ೬ ॥**

**ಇತ್ಯುಕ್ತೇ ಸತಿ ವಿಪ್ರೇ ತು ವಾಗುವಾಚಾಶರೀರಿಣೀ ।**
**ವಿಪ್ರೋತ್ತಮ ಚರಿತ್ರಂ ಮೇ ಜಪ ಚೈಕಾಗ್ರಮಾನಸಃ ॥ ೭ ॥**

---

೪. ಈ ವಾದವು ಒಂದುವರ್ಷ ಪರ್ಯಂತ ನಡೆಯಿತು, ಕೊನೆಯಲ್ಲಿ ಧರ್ಮಾತ್ಮನಾದ ಪತಂಜಲಿಯು ಕಾಳಿಕಾಭಕ್ತ (ಶಾಕ್ತ)ನಾದ ಕಾತ್ಯಾಯನನಿಗೆ ಸೋತುಹೋದನು ಆದರಿಂದ ನಾಚಿಕೆಪಟ್ಟುಕೊಂಡು ಬಹುಭಕ್ತಿಯಿಂದ ಸರಸ್ವತೀದೇವಿಯನ್ನು ಈರೀತಿ ಚೆನ್ನಾಗಿ ಸ್ತುತಿಸಿದನು.

೫. ಪತಂಜಲಿಯು ಮಾಡಿದ ಸ್ತೋತ್ರದ ಅರ್ಥ :—ಪ್ರಕಾಶಿಸುವ ಸ್ವಭಾವವುಳ್ಳವಳೂ, ಮಹಾಸ್ವರೂಪವುಳ್ಳವಳೂ, ಸರ್ವಮೂರ್ತಿಗಳಲ್ಲಿಯೂ ನೆಲಸಿರುವವಳೂ, ಆದ ನಿನಗೆ ನಮಸ್ಕಾರ. ಎಲೌ ವಿಷ್ಣುಮಾಯಾ ಸ್ವರೂಪಿಣಿಯೇ! ಈಶ್ವರನ ಅರ್ಧಾಂಗಿಯೂ ಸರ್ವಮಂಗಳೆ ಎನ್ನಿಸಿಕೊಳ್ಳುವಳೂ ಆದ ನಿನಗೆ ನಮಸ್ಕಾರ.

೬. ನೀನೇ ಶ್ರದ್ಧಾ, ಮೇಧಾ, ವಿದ್ಯಾ ಬುದ್ಧಿ ಇವರ ಸ್ವರೂಪಿಣಿಯಾಗಿ ಮಂಗಳಕರಳಾಗಿರುವೆ. ಶಾಂತಿಪ್ರದಳಾದ ಸರಸ್ವತಿಯೂ ನೀನೇ. ಎಲೌ ನಾರಾಯಣಿಯೇ! ನಿನಗೆ ನಮಸ್ಕಾರ.

೭-೮. ಈರೀತಿಯಾಗಿ ಪತಂಜಲಿಯು ಸ್ತುತಿಸಲಾಗಿ ಅಶರೀರವಾಣಿಯೊಂದು "ಬ್ರಾಹ್ಮಣ ಶ್ರೇಷ್ಠನಾದ ಪತಂಜಲಿಯೇ! ಸ್ಥಿರಚಿತ್ತದಿಂದ ನನ್ನ ಚರಿತ್ರೆಯನ್ನು ಜಪಮಾಡು. ಆ ಚರಿತ್ರದ ಮಹಿಮೆಯಿಂದ ಸತ್ಯವನ್ನೂ ಜ್ಞಾನವನ್ನೂ ಹೊಂದುವೆ. ಶಾಕ್ತನಾದ ಕಾತ್ಯಾಯನ ವಿಪ್ರನ ಜ್ಞಾನವು ಉದ್ಧತವಾದ ರಾಜಸವಾಗಿದೆ. ನನ್ನಲ್ಲಿ

ತಚ್ಚರಿತ್ರಪ್ರಭಾವೇಣ ಸತ್ಯಂ ಜ್ಞಾನಮವಾಪ್ಸ್ಯಸಿ ।
ಕಾತ್ಯಾಯನಸ್ಯ ವಿಪ್ರಸ್ಯ ರಾಜನಂ ಜ್ಞಾನಮುದ್ಧತಂ ।
ಮಧ್ಯಕ್ತ್ವಾ ತೇನ ಸಂಪ್ರಾಪ್ತಂ ಪರಾಜಯ ಪತಂಜಲೇ ॥ ೮ ॥

ಇತಿ ಶ್ರುತ್ವಾ ವಚೋ ದೇವ್ಯಾ ವಿಂಧ್ಯವಾಸಿನಿಮಂದಿರಂ ।
ಗತ್ವಾ ತಾಂ ಪೂಜಯಾಮಾಸ ತುಷ್ಟಾವ ಸ್ತೋತ್ರಪಾಠತಃ ॥ ೯ ॥

ಜ್ಞಾನಂ ಪ್ರಸಾದಜಂ ವಿಪ್ರಃ ಪ್ರಾಪ್ಯ ವಿಷ್ಣುಪರಾಯಣಂ ।
ಕಾತ್ಯಾಯನಂ ಪರಾಜಿತ್ಯ ಪರಾಂ ಮುದಮವಾಪ ಹ ॥ ೧೦ ॥

ಊರ್ಧ್ವಪುಂಡ್ರಂ ಚ ತಿಲಕಂ ತುಲಸೀಕಂಠಮಾಲಿಕಾಂ ।
ಕೃಷ್ಣಮಂತ್ರಂ ಚ ಶಿವದಂ ಸ್ಥಾಪಯಿತ್ವಾ ಗೃಹೇಗೃಹೇ ॥ ೧೧ ॥

ಜನೇಜನೇ ತಥಾ ಕೃತ್ವಾ ಮಹಾಭಾಷ್ಯಮುದೈರಯತ್ ।
ಚಿರಂಜೀವಿತ್ವಮಗಮದ್ವಿಷ್ಣುಮಾಯಾ ಪ್ರಸಾದತಃ ॥ ೧೨ ॥

---

ಭಕ್ತಿಯಿಟ್ಟುಕೊಂಡು ನೀನು ಅವನೊಡನೆ ಪುನಃ ವಾದಮಾಡು, ಆಗ ಜಯಿಸುವೆ" ಎಂದು ಹೇಳಿದಂತೆ ಆಯಿತು.

೯-೧೦. ಈರೀತಿ ಸೂಚಿತವಾದ ದೇವಿಯ ಮಾತನ್ನು ಕೇಳಿ ಪತಂಜಲಿಯು ವಿಂಧ್ಯವಾಸಿನಿನೀ ದೇವಿಯ ಮಂದಿರಕ್ಕೆ ಹೋಗಿ, ಅಲ್ಲಿ ದೇವಿಯನ್ನು ಸ್ತೋತ್ರ ಮಾಡಿ ಪೂಜಿಸಿದನು. ಆಕೆಯ ಅನುಗ್ರಹದಿಂದ ಒಳ್ಳೆಯ ಜ್ಞಾನವು ಲಭಿಸಿತು. ವಿಷ್ಣು ಭಕ್ತನಾದ ಪತಂಜಲಿಯು ಶಕ್ತಿಭಕ್ತನಾದ ಕಾತ್ಯಾಯನನನ್ನು ಜಯಿಸಿ ಮಹದಾನಂದ ಹೊಂದಿದನು.

೧೧-೧೨. ಆತನು ಊರ್ಧ್ವಪುಂಡ್ರ (ನಾಮ) ವನ್ನೂ ತಿಲಕವನ್ನೂ ಧರಿಸಿ ಕುತ್ತಿಗೆಯಲ್ಲಿ ತುಲಸೀಮಾಲೆಯನ್ನು ಹಾಕಿಕೊಂಡು, ಪ್ರತಿಯೊಂದು ಮನೆಯಲ್ಲಿಯೂ ಪ್ರತಿಯೊಬ್ಬ ಮನುಷ್ಯನ ಶುಭಕರವಾದ ಕೃಷ್ಣಸ್ತೋತ್ರ ಮಂತ್ರಪಠನವನ್ನು ಮಾಡುವಂತೆ ಏರ್ಪಡಿಸಿ ತಾನು ಮಹಾಭಾಷ್ಯವನ್ನು ರಚಿಸಿದನು. ಬಳಿಕ ವಿಷ್ಣುಮಾಯೆಯ ಅನುಗ್ರಹದಿಂದ ಚಿರಂಜೀವಿಯಾದನು.

ಇತಿ ತೇ ಕಥಿತೋ ವಿಪ್ರ ಜಾಪ್ಯಾನಾಮುತ್ತಮೋ ಜಪಃ ।
ಕಿಮನ್ಯಚ್ಛ್ರೋತುಮಿಚ್ಛಂತಿ ಶೌನಕಾದ್ಯಾಮಹರ್ಷಯಃ ॥ ೧೩ ॥

ಸರ್ವೇ ಭದ್ರಾಣಿ ಪಶ್ಯಂತು ಮಾ ಕಶ್ಚಿದ್ದುಃಖಭಾಗ್ಭವೇತ್ ॥ ೧೪ ॥

ಮಂಗಲಂ ಭಗವಾನ್ವಿಷ್ಣುರ್ಮಂಗಲಂ ಗರುಡಧ್ವಜಃ ।
ಮಂಗಲಂ ಪುಂಡರೀಕಾಕ್ಷೋ ಮಂಗಲಾಯತನೋ ಹರಿಃ ॥ ೧೫ ॥

ಶುಚಿರ್ಯೋ ಹಿ ನರೋ ನಿತ್ಯಮಿತಿಹಾಸಸಮುಚ್ಚಯಂ ।
ಶೃಣುಯಾದ್ಧರ್ಮಕಾಮಾರ್ಥೀ ಸ ಯಾತಿ ಪರಮಾಂ ಗತಿಂ ॥ ೧೬ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಪ್ರತಿಸರ್ಗಪರ್ವಣಿ ದ್ವಿತೀಯ
ಖಂಡೇ ಕಲಿಯುಗೀಯೇತಿಹಾಸಸಮುಚ್ಚಯೇ ಉತ್ತಮ
ಚರಿತ ಮಾಹಾತ್ಮ್ಯೇ ಪಂಚತ್ರಿಂಶೋಽಧ್ಯಾಯಃ.

## ಸಮಾಪ್ತೋಽಯಂ ದ್ವಿತೀಯ ಖಂಡಃ

---

೧೩.೧೪. ಎಲೈ ಶೌನಕಾದಿಗಳೇ ! ಈರೀತಿ ಜಪಗಳಲ್ಲೆಲ್ಲಾ ಉತ್ತಮವಾದ ಜಪವನ್ನು ನಿಮಗೆ ಹೇಳಿದ್ದೇನೆ. ಇನ್ನೇನನ್ನು ಕೇಳಬೇಕೆಂದು ನಿಮಗೆ ಅಪೇಕ್ಷೆಯಿದೆ ಎಂದು ಕೇಳಿ ಲೋಕದಲ್ಲಿ ಯಾರೂ ದುಃಖಭಾಗಿಗಳಾಗದೆ ಎಲ್ಲರೂ ಶ್ರೇಯಸ್ಸನ್ನೇ ಹೊಂದಲಿ. ಗರುಡಧ್ವಜನೂ ಕಮಲಾಕ್ಷನೂ ಆದ ಭಗವಂತನು ಮಂಗಳಸ್ವರೂಪನೂ ಮಂಗಳಕ್ಕೆ ಆಶ್ರಯನೂ ಆಗಿರುವನು. ಯಾವ ಮನುಷ್ಯನು ಪರಿಶುದ್ಧನಾಗಿ ಪ್ರತಿದಿನವೂ ಈ ಇತಿಹಾಸಸಮುದಾಯವನ್ನು ಧರ್ಮಕಾಮಾಪೇಕ್ಷೆಯಿಂದ ಕೇಳುವನೋ ಅವನು ಉತ್ತಮಗತಿಯನ್ನು ಹೊಂದುವನು ಎಂದು ಹರಸಿದನು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣ ಪ್ರತಿಸರ್ಗಪರ್ವದ ಎರಡನೆ ಖಂಡದಲ್ಲಿ
ಈ ಕಲಿಯುಗದ ಇತಿಹಾಸಸಮುದಾಯದಲ್ಲಿ ಉತ್ತಮಚರಿತ್ರ
ಮಹಾತ್ಮ್ಯೆಯೆಂಬ ಮೂವತ್ತೈದನೆಯ ಅಧ್ಯಾಯವು ಮುಗಿದುದು.

**ದ್ವಿತೀಯಖಂಡವು ಸಮಾಪ್ತಿಯಾಯಿತು.**

